# ಸುವಾಸಿತ ಹಾಗೂ ಸ್ವಾದಿಷ್ಟ ಮುಖಶುದ್ಧಿಗಾಗಿ




**ಚಮನ್ ಇದು ಅತ್ಯಂತ ಸ್ವಾದಿಷ್ಟ ಹಾಗೂ ರುಚಿಕರವಾದ ಚೂರ್ಣವಾಗಿದೆ. ಇದನ್ನು ಸೇವಿಸುವದರಿಂದ ಬಾಯಿಯು ಸುವಾಸಿತವಾಗುತ್ತದೆ.**

## ಚಮನದಲ್ಲಿ ಏನೆಲ್ಲ ಇದೆ?



**ಈ ಚಮನದಲ್ಲಿ ಜೇಷ್ಠಮಧು, ಕೇಶರ, ಏಲಕ್ಕಿ. ಲವಂಗ, ಪತ್ರಿ, ಜಾಜಿಕಾಯಿ, ಬಡೆಸೋಪ್, ಮುಂಥಾಲ್‌ಗಳಂಥ ಅನೇಕ ಬಗೆಯ ಸುಗಂಧಿತ ಹಾಗೂ ರುಚಿಕರ ವಸ್ತುಗಳು ಒಳಗೊಂಡಿರುವವು. ಅದಕ್ಕೆಂದೇ ಇದು ಚಿಕ್ಕಮಕ್ಕಳಿಂದ ವೃದ್ಧರವರೆಗೆ ಎಲ್ಲರಿಗೂ ಅಚ್ಚುಮೆಚ್ಚು.**

## ಸ್ಟಾರ್ ಕಂಪನಿ, ಬೆಳಗಾಂವ್

M. K. Publicity




# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: 34

ಸಂಚಿಕೆ: 6

ಫೆಬ್ರುವರಿ 1990

●

ವ್ಯವಸ್ಥಾಪಕ ಸಂಪಾದಕ:
ಕೆ.ಶಾಮರಾವ್

ಸಂಪಾದಕ:
ಆರ್.ಎ.ಉಪಾಧ್ಯ

●

ಮುಖಪುಟ:
ಹೂವು — ಮುಳ್ಳು

ಛಾಯಾಚಿತ್ರ
ಎಸ್.ಡಿ.ಮುರಲೀಧರ

●

ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-580020


## ಬೆಳಕಿಂಡಿ

★ ಸ್ತ್ರೀಯರನ್ನು ಎರಡು ಸಂದರ್ಭದಲ್ಲಿ ಮಾತ್ರ ತಿಳಿದುಕೊಳ್ಳುವುದು ಸಾಧ್ಯವಿಲ್ಲ. ಮದುವೆಗೆ ಮುಂಚೆ ಮತ್ತು ಮದುವೆಯಾದ ನಂತರ.

- ಚರ್ಚಿಲ್

★ ನಿಜವಾದ ಸೋಲು ಪ್ರತಿಸ್ಪರ್ಧಿಗಳಿಂದ ಸಂಭವಿಸುವ ಪರಾಜಯವಲ್ಲ., ನಮ್ಮಲ್ಲಿ, ನಮ್ಮ ಸಾಹಸದಲ್ಲಿ, ನಮ್ಮ ಶ್ರದ್ಧೆಯಲ್ಲಿ, ನಮಗೆ ನಂಬಿಕೆ ಹೋಗುವುದು.

- ತ.ರಾ.ಸು.

★ ನಿಷ್ಕಾಳಜಿ ಮನುಷ್ಯನ ಹೆಂಡತಿ ವಿಧವೆಯಂತೆಯೇ ಆಗಿರುತ್ತಾರೆ.

- ಹಂಗೇರಿಯನ್ ಉಕ್ತಿ

★ ಸತ್ಯ ತೀರಾ ಅಮೂಲ್ಯವಾದದ್ದು ಎಂದು ಭಾವಿಸುವ ಲೇಖಕರು ಹೆಚ್ಚು. ಆದ್ದರಿಂದಲೇ ಅವರು ತಮ್ಮ ರಚನೆಗಳಲ್ಲಿ ಆದನ್ನು ತೀರಾ ಜಿಪುಣತನದಿಂದ ಉಪಯೋಗಿಸುತ್ತಾರೆ.

- ಮಾರ್ಕ್‌ಟ್ವೇನ್


### ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆ ಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಸಹಚಿಂತನ

### ನಿಜವೆ?

'ಇವರ ವಯಸ್ಸು ಎರಡು ಸಾವಿರ ವರ್ಷಗಳಿಗೂ ಹೆಚ್ಚು!' (ಕಸ್ತೂರಿ, ಜನವರಿ 1990) ನಿಜವೆ? ಇದು ನಮ್ಮ 'ಶಿವಮೊಗ್ಗ ಕ್ವಿಜ್ ಮತ್ತು ಅಡ್ವೆಂಚರ್ ಕ್ಲಬ್'ನಲ್ಲಿ ಚರ್ಚೆಯ ವಿಷಯವಾಗಿ, ಸೂಕ್ತ ಸಮಾಧಾನ ಸಿಗದೆ ಲೇಖಕರಿಂದಲೇ ಉತ್ತರ ಬಯಸಿ ಈ ಪತ್ರ. ಹಿಮಾವೃತ ಖಂಡಗಳಲ್ಲಿ ಜೀವಿಗಳ ಆಯುರ್ಮಾನ ಸಾಮಾನ್ಯವಾಗಿ ಜಾಸ್ತಿಯಾಗಿರುತ್ತದಾದರೂ 'ಎರಡು ಸಾವಿರ ವರ್ಷ' ಎಂಬುದು ನಂಬಲು ಕಠಿಣವಾದದ್ದು. ಇದು ಕಟ್ಟುಕಥೆಯೆ, ವಾಸ್ತವವೆ? ಅಥವಾ ಈ ಹಿಂದೆ ನಾನು ಓದಿದ, ಶೀತಲ ವಾತಾವರಣದಲ್ಲಿನ ಪ್ರಯೋಗಗಳನ್ನು ವಸ್ತುವಾಗುಳ್ಳ, ಕಾಲ್ಪನಿಕ ವೈಜ್ಞಾನಿಕ ಕಾದಂಬರಿಯಂಥದೇ ಸಂಗತಿಯೋ? ಎಚ್.ಪ್ರೇಮಾನಂದ ಕಾಮತರು ಇದಕ್ಕೆ ಸಾಕ್ಷ್ಯಾಧಾರ ಸಹಿತ ಉತ್ತರಿಸಿಯಾರೆಂದು ನಂಬಿರುವೆ.

**ಶಿವಮೊಗ್ಗ** — **ಬೇದ್ರೆ ಎಸ್.ಮಂಜುನಾಥ**

ಈ ಲೇಖನ ನಮ್ಮ 'ಸ್ಫೂರ್ತಿ ಸೌಧ'ದ ಸದಸ್ಯರನ್ನು ಅಚ್ಚರಿಗೀಡು ಮಾಡಿದೆ, ಸಂದೇಹ ಹುಟ್ಟಿಸಿದೆ. ಎಚ್.ಪ್ರೇಮಾನಂದ ಕಾಮತರು ಈ ವಿಷಯದಲ್ಲಿ ನಂಬಲರ್ಹ ವಿವರಣೆ ನೀಡಿದರೆ ಒಳ್ಳೆಯದು.

**ಬೆಂಗಳೂರು** — **ವೈ.ವಿ.ಶೇಷಗಿರಿ**

ಪ್ರಸ್ತುತ ಲೇಖನದಲ್ಲಿ, ".... ನಾಲ್ಕೂ ದೇಹಗಳ ತಾಪಮಾನವನ್ನು ಹೆಚ್ಚಿಸಲು ಸೌಮ್ಯ ವಿದ್ಯುದಾಘಾತವಾಗುವಂತೆ ಮಾಡಿದರು....." ಎಂದಾರಂಭಿಸಿ "... ಆ ನಾಲ್ವರೂ ಗಾಢ ನಿದ್ರೆಯಿಂದ ಎಚ್ಚೆತ್ತವರಂತೆ ಕಣ್ತೆರೆದು ಅತ್ತಿತ್ತ ನೋಡತೊಡಗಿದರು.." ಎಂದಿದೆ. ಇದೇ ರೀತಿ (ಒಂದು ವೇಳೆ ಇದು ನಿಜವೇ ಆಗಿದ್ದಲ್ಲಿ) ಸತ್ತವರನ್ನೆಲ್ಲ ಬದುಕಿಸಲು ಸಾಧ್ಯವೆ? ಸಾಧ್ಯವಾದರೆ ಈ ಜಗತ್ತು ತನ್ನ ಸಮತೋಲನವನ್ನು ಸರಿದೂಗಿಸಿಕೊಳ್ಳಲು ಸಾಧ್ಯವೆ? ಇದು ವೈಜ್ಞಾನಿಕ ಮನೋಭಾವಕ್ಕೆಸೆದ ಸವಾಲಲ್ಲವೆ?

**ಹುಲಿಯಾರ ಹೋಬಳಿ** — **ಎಂ.ಬಿ.ಮಂಜುನಾಥಾಚಾರ್**

(ಇದು ಖಂಡಿತವಾಗಿಯೂ ವೈಜ್ಞಾನಿಕ ಮನೋಭಾವಕ್ಕೆ ಎಸೆದ ಸವಾಲಲ್ಲ. ಅತಿಶೈತ್ಯದಿಂದಾಗಿ ಜೈವಿಕಕ್ರಿಯೆಗಳು ಸ್ತಬ್ಧಗೊಂಡಿದ್ದರಿಂದ ಮತ್ತು ಅತಿಶೈತ್ಯದಿಂದಾಗಿಯೇ ಎರಡು ಸಾವಿರ ವರ್ಷಗಳವರೆಗೆ ಅಂಗಾಂಗಗಳು ಸುಸ್ಥಿತಿಯಲ್ಲಿಯೆ ಉಳಿದಿದ್ದರಿಂದ ಈ ಆಶ್ಚರ್ಯಕರ ಘಟನೆ ನಡೆಯಲು ಸಾಧ್ಯವಾಯಿತು. - ಸಂಪಾದಕ

### ಹೇಮಂತ ಗಾಯನ

ಗಾಯಕ ಹೇಮಂತಕುಮಾರರ ಕುರಿತು ಮನೋಜಕುಮಾರ ಪಾಟೀಲ ಬರೆದ ಲೇಖನದಲ್ಲಿ ಕೆಲವೇ ಚಿತ್ರಗಳ ಪ್ರಸ್ತಾಪವಿದೆ. ಆದರೆ ಅವರನ್ನು ಅಮರರನ್ನಾಗಿಸಿದ 'ಝುನಕ್ ಝುನಕ್' ಚಿತ್ರದ 'ನೈನ್‌ಕೊನೈನ ನಾಹಿ ಮಿಲಾವೋ', 'ಭಗತ್' ಚಿತ್ರದ 'ದರ್ಶನ ದೊ ಘನಶಾಮ್' ಹಾಗೂ 'ಘರ್ ನಂ. 44' ಚಿತ್ರದ 'ತೇರಿ ದುನಿಯಾಮೆ ಜೀನೇಸೆ' ಹಾಡುಗಳನ್ನೂ ನಾವು ಮರೆಯುವಂತಿಲ್ಲ.

ಲೇಖನದಲ್ಲಿ ನಮೂದಿಸಿದಂತೆ 'ಸಾಹಿಬ್ ಬೀಬಿ ಔರ್ ಗುಲಾಂ' ಚಿತ್ರದ ಸಂಗೀತ ನಿರ್ದೇಶಕ ಹೇಮಂತಕುಮಾರ ಅಲ್ಲ, ಸಚಿನ್ ದೇವ ಬರ್ಮನ್ ಅವರು.

**ಕೋರವಾರ** — **ಶ್ರೀವಲ್ಲಭ ಧಾರವಾಡ**

### "ಹೃದಯಸ್ಪರ್ಶಿ"

ಜಿ.ವಿ.ಕಂಚುಗಾರರ ಕಥೆ ''ವ್ಯವಸ್ಥೆ'' ಕಸ್ತೂರಿ, ಜನವರಿ 1990 ಅತ್ಯಂತ ಹೃದಯ ಸ್ಪರ್ಶಿ. ಇಂದಿನ ನಮ್ಮ ಅವ್ಯವಸ್ಥೆ ಸಮಾಜಕ್ಕೆ ಹಿಡಿದ ಕನ್ನಡಿ.

**ಬೆಂಗಳೂರು** **ಜಿ.ವಿ.ಪ್ರಭು**

### ತಪ್ಪು

'ಕಸ್ತೂರಿ' ನಡೆದು ಬಂದ ದಾರಿ ಅಂಕಣದ 'ಬೇಕನ್: ತತ್ವ ಭ್ರಷ್ಟ, ತತ್ವಜ್ಞಾನಿ ಶ್ರೇಷ್ಠ' ಬರಹದ (ಜನವರಿ 1990) 14ನೆ ಪುಟದ ಮೂರನೆ ಪ್ಯಾರಾದಲ್ಲಿ ''1894ರಲ್ಲಿ ಅಟಾರ್ನಿ ಜನರಲ್‌ನ ಸ್ಥಾನವು....'' ಎನ್ನುವುದು ''1594'' ಎಂದಿರಬೇಕಿತ್ತು. ಯಾಕೆ ಈ ದೋಷ?

**ಬೀದರ್** **ಪಿ.ಸಂಗ್ರಾಂ ಉಡಬಾಳ**

### ಆಕಾಶಮಲ್ಲಿಗೆ

ಎಸ್.ವಿಶ್ವನಾಥರು ಬರೆದ 'ಜಪಾನಿಯರು ನಿರ್ಮಿಸಲಿರುವ ನಾಲ್ಕು ಮಹಡಿಗಳ ದ್ವೀಪ' (ಕಸ್ತೂರಿ ಜನೆವರಿ 1990)ವನ್ನೋದಿ ನಮ್ಮ ರಾಷ್ಟ್ರದಲ್ಲಿಂಥದು ಸಾಧ್ಯವೆ? ಎಂದು ಯೋಚಿಸತೊಡಗಿದೆ. ಆದರೆ ಕುಡಿಯು ನೀರಿಗಾಗಿ, ಸೀಮೆ ಎಣ್ಣೆಗಾಗಿ, ಸಕ್ಕರೆಗಾಗಿ, ಒಳ್ಳೆ ರಸ್ತೆಗಳಿಗಾಗಿ, ಇರಲು ಮನೆಗಳಿಗಾಗಿ ಪರದಾಡುವ ನಾವು ಇಂಥದನ್ನು ಸಾಧಿಸಲು ಇನ್ನೂ ಎಷ್ಟು ಶತಮಾನಗಳು ಬೇಕೋ ಏನೋ.

**ವಿಜಾಪುರ** **ಎಸ್.ಪಿ.ಮುರುಡಿ**

(ನೀವು ತುಂಬ ನಿರಾಶಾವಾದಿಗಳೆನಿಸುತ್ತದೆ. ಇದೇ ಲೇಖನದ ಅಗ್ರಪಂಕ್ತಿಯಲ್ಲಿ ''ಜನಸಂದಣಿಯನ್ನು ಕಡಿಮೆ ಮಾಡಲೋಸುಗ ಈಗ ಮುಂಬಯಿಯಿಂದ ಹೊಸ ಮುಂಬಯಿಗೆ ಸಂಪರ್ಕ ಕಲ್ಪಿಸಲು ಸುರಂಗ ಮಾರ್ಗ ನಿರ್ಮಾಣದ ಮಾತುಕತೆ ನಡೆಯುತ್ತಿದೆ'' ಎಂದು ಬರೆದಿರುವುದನ್ನು ನೀವು ನೋಡಿದಂತಿಲ್ಲ. ನಮ್ಮಲ್ಲೂ ಅಂಥ ಕೆಲ ಪ್ರಯತ್ನಗಳು ನಡೆಯುತ್ತಿವೆ ಸ್ವಾಮಿ...

**- ಸಂಪಾದಕ**)

### ಕಬ್ಬಿಣದ ಕಡಲೆ

ಡಾ.ಹು.ಲ.ಚಂದ್ರಶೇಖರರು ಬರೆದ 'ವಿಜ್ಞಾನಿ, ವೇದಾಂತಿ' ಮತ್ತು ಭೌತಿಕ ಜಗತ್ತು' ಸ್ವಾರಸ್ಯಕರವಾಗಿ ಓದಿಸಿಕೊಂಡು ಹೋಯಿತಾದರೂ ಸಾಮಾನ್ಯರಿಗೆ ಕಬ್ಬಿಣದ ಕಡಲೆಯೇ. ಸರಳ ಶೈಲಿಯಿದ್ದರೂ ಅಲ್ಲಲ್ಲಿ ತಟ್ಟನೆ ನಮ್ಮ ಓದನ್ನು ನಿಲ್ಲಿಸಿಬಿಡುವಂಥ ಪದಪ್ರಯೋಗಗಳು ಬೇರೆ. ಆದರೂ ದಿನನಿತ್ಯಯದ ಜಂಜಾಟದಲ್ಲಿರುವ ನನ್ನಂಥ ಸಾವಿರಾರು ಜನಕ್ಕೆ, ಡಾ.ಚಂದ್ರಶೇಖರರು, ಶತಮಾನಗಳ ಹಿಂದೆ ಉಪನಿಷತ್ತುಗಳ ಮೂಲಕ ಸಾದರಪಡಿಸಿದ ವಿಷಯವನ್ನು ವಿಶ್ಲೇಷಿಸಿ ಅರ್ಥೈಸಿದ್ದಾರೆ.

**ಧಾರವಾಡ** **ಕೃಷ್ಣ ಶ್ರೀನಿವಾಸ ಪಂಚಭಾವಿ**

### ಅಸಂಭಾವ್ಯ

ಡಿಸೆಂಬರ್ 89ರ 'ಕಸ್ತೂರಿ'ಯಲ್ಲಿ ಪ್ರಕಟವಾದ ವೈ.ಎನ್.ಗುಂಡೂರಾಯರ 'ಅಸಂಭಾವ್ಯ' ಕಥೆ ಮಾರ್ಮಿಕ. ಲೋಕ ಪ್ರಭುಗಳಂಥವರು ಎಷ್ಟು ಜನ ನಮಗೆ ಸಿಕ್ಕಾರು? ಕೆಲವರಾದರೂ ಸಿಕ್ಕರೆ...

**ಆಲಮಟ್ಟಿ** **ವಸಂತ ದಂಡಿನ**

### ಮರೆಯಲಾಗದ ಮಹಾನುಭಾವ

ಜನೆವರಿ 1990ರ ಲೇಖಕ, ಸ್ವಾತಂತ್ರ್ಯ ಹೋರಾಟಗಾರ ಬಸವರಾಜ ಕಟ್ಟೀಮನಿಯವರ ಕುರಿತ ಬರಹಗಳು (ಭಾಲಚಂದ್ರ ಘಾಣೇಕರ, ಡಾ.ಅಗಡಿ. ಸಿದ್ಧಲಿಂಗಪಟ್ಟಣಶೆಟ್ಟಿ) ತುಂಬ ಆತ್ಮೀಯವಾಗಿ ಮೂಡಿ ಬಂದಂಥವು. ಹಲವು ವಿಶೇಷ ಗುಣಗಳ, ವಿಶೇಷಣ ಬಯಸದ ಕಟ್ಟೀಮನಿ ಒಬ್ಬ ಮರೆಯಲಾಗದ ಮಹಾನುಭಾವನೇ ಸೈ.

**ಕಣತೂರು** **ಕೆಂಪರಾಜು**

**ಹೊಳೆನರಸೀಪುರ** **'ರಾಜ್‌ಮರ'**

# ಈ ಸಂಚಿಕೆಯಲ್ಲಿ



## ಅಶ್ರುತರ್ಪಣ

ಕಳೆದ ಜನವರಿ 15ರಂದು 96ನೆಯ ವಯಸ್ಸಿನಲ್ಲಿ ಕಣ್ಮರೆಯಾದ ಶ್ರೀ ರಂಗನಾಥ ರಾಮಚಂದ್ರ ದಿವಾಕರರ ನಿಧನದೊಂದಿಗೆ 'ಕಸ್ತೂರಿ'ಯ ಒಂದು ಪ್ರಮುಖ ಅಧ್ಯಾಯ ಕೊನೆಗಂಡಂತಾಯಿತು. 'ಕಸ್ತೂರಿ'ಯ ಪ್ರಾರಂಭಿಕ ಅವಸ್ಥೆಯಲ್ಲಿ ಅದರ ಅಭ್ಯುದಯಕ್ಕಾಗಿ ಅವರು ಪಟ್ಟ ಶ್ರಮ ಅಪಾರ. ಪತ್ರಿಕಾ ಸ್ವಾತಂತ್ರ್ಯದ ರೂವಾರಿಯಾಗಿದ್ದ ಅವರು ಅದನ್ನು ಕೊನೆಯವರೆಗೂ ಕಾಪಾಡಿಕೊಂಡು ಬಂದುದಕ್ಕಾಗಿಯೂ, ಆಗಾಗ ರಚನಾತ್ಮಕ ಸಲಹೆ, ಮಾರ್ಗದರ್ಶನಗಳನ್ನು ನೀಡಿ ಈ ಪತ್ರಿಕೆ ಕನ್ನಡ ನಾಡಿನ ಒಂದು ಪ್ರಮುಖ ಪತ್ರಿಕೆಯಾಗಿ ಬೆಳೆದುಬರಲು ಕಾರಣರಾದದ್ದನ್ನೂ 'ಕಸ್ತೂರಿ'ಯು ಈ ಮೂಲಕ ಕೃತಜ್ಞತೆಯಿಂದ ನೆನೆಯುತ್ತದೆ.

– ಸಂಪಾದಕ

ಸತ್ಯ ಕಥೆ

# ಏನು ಸೋಜಿಗ

ಪಶ್ಚಿಮ ದಿಲ್ಲಿಯಲ್ಲೊಂದು ದೊಡ್ಡ ಬಂಗಲೆ. ಅದರ ಯಜಮಾನ 80 ವರ್ಷದ ಗೋಪಾಲ್‌ದಾಸ್. ಅವರ ಪತ್ನಿ 72 ವರ್ಷದ ರುಕ್ಮಿಣಿಬಾಯಿ. ಇವರ ಇಬ್ಬರು ಪುತ್ರಿಯರು ಗಂಡಂದಿರೊಂದಿಗೆ ಅಲ್ಲೇ ವಾಸವಾಗಿದ್ದಾರೆ. ಇಂದು ಅವರೆಲ್ಲರ ಮನದಲ್ಲಿ ಉದ್ವೇಗ ಕಳವಳ, ಕಾತರ, ಆತಂಕ ಮನೆ ಮಾಡಿದೆ. ಜೊತೆಗೆ ಅವ್ಯಕ್ತ ಸಂತೋಷ ಕೂಡ. ಕಾರಣ ಅವನ ಮನೆಗೊಬ್ಬ ಆಗಂತುಕ ಬರಲಿದ್ದಾನೆ. ಆತ ಯಾವ ಉದ್ದೇಶವನ್ನಿಟ್ಟುಕೊಂಡು ಈ ಮನೆಗೆ ಬರಲಿದ್ದಾನೆಯೋ ಇವರು ಯಾವ ಕಾರಣಕ್ಕಾಗಿ ಅವನನ್ನು ಸ್ವಾಗತಿಸಲಿದ್ದಾರೆಯೋ .... ಅದು ನಿಜವಾದ ಪಕ್ಷದಲ್ಲಿ ಅವರಷ್ಟು ಭಾಗ್ಯಶಾಲಿಗಳು ಈ ಲೋಕದಲ್ಲಿ ಇನ್ನಾರೂ ಇಲ್ಲ. 42 ವರ್ಷಗಳ ಹಿಂದೆ ಕಾಣೆಯಾದ ಒಬ್ಬನೇ ಮಗನನ್ನು, ಸೋದರನನ್ನು, ಭಾವನೆಂಟನನ್ನು ಆ ಕುಟುಂಬ ಇಂದು ನೋಡಲಿದೆ! ಬಾಳ ಸಂಜೆಯನ್ನು ತಲಪಿದ ಆ ವೃದ್ಧ ದಂಪತಿಗಳೆದುರು, ತಪ್ಪಿಸಿಕೊಂಡಾಗ ಬಾಲಕನಿದ್ದ, ಆದರೆ ಈಗ ನಲ್ವತ್ತರ ಹರೆಯದಲ್ಲಿರುವ, ಪ್ರಬುದ್ಧ ಮಗ ಬಂದು ನಿಲ್ಲಲಿದ್ದಾನೆ. ಎಂತಹ ವಿಸ್ಮಯಕರವಾಗಿದೆ ಈ ಬದುಕು!!

ಅಗಸ್ಟ್ 22, 1947. ಅದೊಂದು ಕರಾಳ ದಿನ. ಅಖಂಡ ಭಾರತ ಒಡೆದು ಹಿಂದೂಸ್ತಾನ, ಪಾಕಿಸ್ತಾನಗಳೆಂಬ ಎರಡು ದೇಶಗಳು ಹುಟ್ಟಿಕೊಂಡು ಒಂದು ವಾರವಷ್ಟೇ ಆಗಿತ್ತು. ದೇಶ ಸ್ವತಂತ್ರವಾದ ಸಂತೋಷ, ಸಂಭ್ರಮಗಳು ಒಂದು ಕಡೆಯಾದರೆ, ದೇಶ ವಿಭಜನೆಯ ಕಾರಣದಿಂದ ಭುಗಿಲೆದ್ದ ಹಿಂಸೆ, ಕೊಲೆ, ಸುಲಿಗೆಗಳು ಇನ್ನೊಂದೆಡೆ.

ಗೋಪಾಲ್‌ದಾಸ್ ತನ್ನ ಹೆಂಡತಿ, ಮೂರುಮಕ್ಕಳು ಮತ್ತು ತಮ್ಮನೊಂದಿಗೆ ಕರಾಚಿ ತೊರೆದು ಭಾರತಕ್ಕೆ ಹೊರಟಿದ್ದ. ರೈಲಿನಲ್ಲಿ ಜನ ಕಿಕ್ಕಿರಿದಿದ್ದರು. ಎಲ್ಲರಲ್ಲೂ ದೇಶ ಬಿಡುವ ತರಾತುರಿ. ಮಧ್ಯ ಮಾರ್ಗದಲ್ಲಿ ಅದೇ ರೈಲಿಗೆ ಕಿಡಿಗೇಡಿಗಳು ಮುತ್ತುವ ವರ್ತಮಾನ ಬಂದುದರಿಂದ ಕರಾಚಿಯಿಂದ 500 ಮೈಲು ದೂರದ ಸಮಲ್‌ಕಟ್ಟಾ ರೈಲು ನಿಲ್ದಾಣದಲ್ಲಿ ಈ ಕುಟುಂಬ ಗಡಿಬಿಡಿಯಿಂದಲೇ ಇಳಿಯಿತು. ತಮ್ಮ ಸಾಮಾನು ಇಳಿಸುವ ಭರದಲ್ಲಿ ನಾಲ್ಕು ವರ್ಷದ ಏಕೈಕ ಪುತ್ರ ಜಗದೀಶ ರೈಲಿನಿಂದ ಇಳಿದಿಲ್ಲ ಎಂಬ ವಿಷಯ ಗೋಚರವಾದದ್ದು ಗಾಡಿ ಹೊರಟು ಹೋದ ಮೇಲೆಯೇ. ರೈಲು ಸ್ವಲ್ಪ ದೂರ ಹೋಗಿ ನಿಂತಾಗ ಅಲ್ಲಿಗೆ ಓಡತೊಡಗಿದ ಗಂಡನನ್ನು ರುಕ್ಮಿಣಿಯೇ ತಡೆದು ನಿಲ್ಲಿಸಿದಳು. ಆ ಸಂದರ್ಭದಲ್ಲಿ ನಿಂತ ರೈಲಿನ ಹತ್ತಿರ ಹೋಗುವುದು ಎಷ್ಟು ಅಪಾಯಕರ ಎಂಬ ಅರಿವು ಅವಳಿಗೆ ಚೆನ್ನಾಗಿತ್ತು.

ದಿಲ್ಲಿ ಸೇರಿದ ಮೇಲೆ ಗೋಪಾಲ್‌ದಾಸ್ ನಿರಾಶ್ರಿತರ ಪ್ರದೇಶವನ್ನೆಲ್ಲಾ ಜಾಲಾಡಿದ. ಪ್ರಯೋಜನವಾಗಲಿಲ್ಲ. ತಮ್ಮ ಲಕ್ಷ್ಮೀನಾರಾಯಣ ಪಾಕಿಸ್ತಾನಕ್ಕೂ ಹೋಗಿ

# ಈ ಬದುಕು!

ಬಂದದ್ದು ನಿಷ್ಫಲವಾಯಿತು.

ಈಗ ಅವರಿಗಿದ್ದುದು ಒಂದೇ ಆಶಾಕಿರಣ. ಅಂದು ಅವರೊಂದಿಗೆ ಕರಾಚಿಯಿಂದ ಪ್ರಯಾಣಿಸಿದ ಮುಸ್ಲಿಂ ಯಾತ್ರಿಕರು ಸಹೃದಯರಿದ್ದಂತೆ ಕಂಡುಬಂದಿದ್ದರು. ತಮ್ಮ ಮಗು ಅವರ ಬಳಿಯಲ್ಲೇ ಇರಬಹುದೆ? ಹಾಗಾದರೆ ಅವರನ್ನು ಗುರುತಿಸಿ ಹುಡುಕುವುದು ಹೇಗೆ? ಆದರೂ ಅವರು ಪ್ರಯತ್ನ ಬಿಡಲಿಲ್ಲ. ಫಲ ಮಾತ್ರ ಸೊನ್ನೆ!

ಈಗ 42 ವರ್ಷಗಳ ನಂತರ ಅವರ ಕನಸು ಕೈಗೂಡುವುದರಲ್ಲಿದೆ. ಅಂದು ನಾಲ್ಕು ವರ್ಷದವನಿದ್ದಾಗ ತಮ್ಮ ಕಣ್ಣೆದುರೇ ಮರೆಯಾದ ಮಗು ಈಗ 45 ವರ್ಷದ ಪ್ರಬುದ್ಧನಾಗಿ ಅವರ ಕಣ್ಮುಂದೆ ನಿಲ್ಲಲಿದ್ದಾನೆ!

ಈ ಸಂತೋಷದ ನಡುವೆ ಮನಸ್ಸು ಪಿಚ್ಚೆನಿಸುವುದೂ ಇದೆ. ಗೋಪಾಲ್‌ದಾಸ್ ರುಕ್ಮಿಣಿಯರ ಕರುಣ ಕಥೆ ಪತ್ರಿಕೆಗಳಲ್ಲಿ ಪ್ರಕಟವಾದ ಮೇಲೆ ಅವರಿಗೆ ಪಾಕಿಸ್ತಾನದಿಂದ 15 - 20 ಪತ್ರಗಳು ಬಂದಿವೆ. ನಿಮ್ಮ ಕಳೆದು ಹೋದ ಮಗು ತಾನೆ ಎಂದು ಎಲ್ಲರೂ ಬರೆದಿದ್ದರು. ಎಂಟು ವರ್ಷದ ಹಿಂದೆ ಅಲ್ ಮೀನ್ ಎಂಬವ ಲಾಹೋರ್‌ನಿಂದ ಪತ್ರ ಬರೆದು ತಾನು ಅವರ ಮಗನೆಂದೂ ತನ್ನಲ್ಲಿದ್ದ ಲಾಕೆಟನ್ನು ಗ್ರಂಥಿಯೊಬ್ಬರಿಗೆ ಕೊಟ್ಟಿರುವುದಾಗಿಯೂ ಬರೆದಿದ್ದ. ಆಗಾಗ ಪಾಕಿಸ್ತಾನಕ್ಕೆ ಬರುತ್ತಿದ್ದ ಗ್ರಂಥಿಗೆ ಲಾಕೆಟ್ ಕೊಟ್ಟರೆ ಗೋಪಾಲ್‌ದಾಸ್‌ನನ್ನು ಗ್ರಂಥಿ ಸಂಧಿಸಿದಾಗ ಲಾಕೆಟ್‌ನ ಮೂಲಕ ಗುರುತಿಸುವುದು ಸುಲಭವಾಗುತ್ತದೆಂದು ತಾನು ಅದನ್ನು ಅವನಿಗೆ ಕೊಟ್ಟಿದುದಾಗಿಯೂ ಅಲ್‌ಮಿನ್ ಬರೆದಿದ್ದ. ಊರೆಲ್ಲಾ ಹುಡುಕಿದ ಗೋಪಾಲ್‌ದಾಸ್‌ನ ತಮ್ಮ ಲಕ್ಷ್ಮೀನಾರಾಯಣನಿಗೆ ಆ ಗ್ರಂಥಿ ಕಣ್ಣಿಗೇ ಬೀಳಲಿಲ್ಲ. ಪತ್ರ ಬರೆದಿದ್ದವರಲ್ಲಿ ಕೆಲವರು ತಮ್ಮ ಫೋಟೋಗಳನ್ನು ಕಳಿಸಿದ್ದರು. ಆದರೆ ತಂದೆ ತಾಯಿಗೆ ಆ ಯಾವ ಫೋಟೋಗಳೂ ತಮ್ಮ ಮಗನದೆಂದು ಅನಿಸಲೇ ಇಲ್ಲ. ಕರುಳು ತನ್ನ ಕುಡಿಯನ್ನು ಗುರುತಿಸದೆ?

ಆದರೆ ಇಂದು ತಾನು ನಿಮ್ಮ ಮಗನೆಂದು ಹೇಳಿಕೊಂಡು ಬರುವವನಲ್ಲಿ ಒಂದು ವೈಶಿಷ್ಟ್ಯವಿದೆ. ಪತ್ರ ಬರೆದವರಲ್ಲಿ ಯಾರೂ ಈವರೆಗೆ ಗೋಪಾಲ್‌ದಾಸರ ಮನೆ ಹುಡುಕಿಕೊಂಡು ಬಂದಿರಲಿಲ್ಲ. ಹೀಗಾಗಿ ಆತ ತಮ್ಮ ಮಗನಾಗಿರಲೂಬಹುದು ಎಂಬ ದೂರದ ಆಸೆ ಅವರಿಗೆ.

★ ★ ★

ಡಾ. ಎಸ್. ಐ. ಖಾನ್‌ಗೆ ಈಗ 45 ವರ್ಷ. ಹೆಂಡತಿ, ಮೂವರು ಮಕ್ಕಳು: ಒಂದು ಗಂಡು, ಎರಡು ಹೆಣ್ಣು.

ಹತ್ತು ಹನ್ನೊಂದು ವರ್ಷಗಳವರೆಗೆ ಬಾಲಕ ಖಾನ್ ಅನಾಥನಾಗಿ, ಅಲ್ಲಿ ಇಲ್ಲಿ ಕೆಲಸ ಮಾಡುತ್ತಾ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಎಂ. ಎಂ. ಖಾನ್ ಎನ್ನುವ ಸಹೃದಯಿ ಸರಕಾರಿ ನೌಕರರೊಬ್ಬರು ಅವನನ್ನು ದತ್ತು

ತೆಗೆದುಕೊಂಡರು. ತಮ್ಮ ಮೂವರು ಪುತ್ರಿಯರೊಂದಿಗೆ ಈತನನ್ನು ವಾತ್ಸಲ್ಯದಿಂದ ಬೆಳೆಸಿದರು, ಓದಿಸಿದರು. ಕರಾಚಿಯಲ್ಲಿ ಎಸ್.ಎಸ್.ಎಲ್.ಸಿ. ಮುಗಿಸಿದ ಖಾನ್ ಡಾಕ್ಕಾದಲ್ಲಿ ವೈದ್ಯಕೀಯ ಕಲಿತು ಹಿಂತಿರುಗಿದ.

"ಇಷ್ಟಾದರೂ ನನ್ನ ಅಂತರಾತ್ಮ ಬೇರೆ ನನ್ನೋ ನುಡಿಯುತ್ತಿತ್ತು. 'ನಾನು ಹಿಂದೂ, ನಾನು ಹಿಂದೂ' ಎಂದು ಚೀರುತ್ತಿತ್ತು. ನನ್ನ ಹೈಸ್ಕೂಲ್ ದಿನಗಳಲ್ಲೇ ಸಿಖ್ ಮತ್ತು ಹಿಂದೂ ಪೂಜಾಗೃಹಗಳಿಗೆ ಹೋಗಿ ನನ್ನ ಕಾಣದ ತಂದೆತಾಯಿಗಳನ್ನು ಹುಡುಕುತ್ತಿದ್ದೆ. ನನ್ನ ಈ ಬಗೆಯ ಭಾವನೆಗಳಿಗೆ ಪುಷ್ಟಿ ಕೊಡುವ ಕೆಲವಂಶಗಳು ನನ್ನಲ್ಲಿದ್ದವು. ಒಂದು ಮುಸ್ಲಿಂ ಬಾಲಕರಲ್ಲಿ ಕಡ್ಡಾಯವಾಗಿದ್ದ 'ಸುನ್ನತ್' ನನಗೆ ಆಗಿರಲಿಲ್ಲ. (ಅದು ಆದುದು ನನ್ನ 13ನೆಯ ವಯಸ್ಸಿನಲ್ಲಿ) ಎರಡನೆಯದಾಗಿ ನಾನು ಮಾತು ಮಾತಿಗೆ 'ಹೇ ರಾಮ್' ಎಂದು ಅಪ್ರಯತ್ನ ಪೂರ್ವಕವಾಗಿ ಉದ್ಗರಿಸುತ್ತಿದ್ದೆ. ಮೂರು - ನಾನು ಸಸ್ಯಾಹಾರಿಯಾಗಿದ್ದೆ. ನನ್ನ ಆತ್ಮೀಯ ಮಿತ್ರರಲ್ಲಿ ನನ್ನ ಹೆಸರು ಖಾನ್ ಅಲ್ಲ ಜಗದೀಶ್ ಎಂದು ಹೇಳಿಕೊಳ್ಳುತ್ತಿದ್ದೆ," ಎನ್ನುತ್ತಾರೆ ಡಾ.ಖಾನ್.

ನಾಲ್ಕು ವರ್ಷದ ಖಾನ್‌ಗೆ ಮೂರು ವಿಷಯಗಳ ಜ್ಞಾಪಕವಿತ್ತಂತೆ. ಒಂದು ಆತ ಅಂದು ಟ್ರೇನಿನಲ್ಲಿ ಪ್ರಯಾಣ ಮಾಡುತ್ತಿದ್ದುದು. ಎರಡು - ತನ್ನ ಹೆಸರು ಜಗದೀಶ ಎಂಬುದು. - ಮೂರು ತಾನು ಪರಕೀಯರೊಂದಿಗೆ ಇರುತ್ತಿದ್ದುದು.

" 'ನಿನ್ನ ತಂದೆ ತಾಯಂದಿರ ಹೆಸರು ಗೊತ್ತೆ?' " ಎಂದು ನನ್ನನ್ನು ಎಲ್ಲರೂ ಕೇಳುತ್ತಿದ್ದರು. ಅದು ಗೊತ್ತಿದ್ದರೆ ನಾನು ಯಾವಾಗಲೋ ಅವರ ಬಳಿಯಿರುತ್ತಿದ್ದೆ," ಎನ್ನುತ್ತಾರೆ ಡಾ.ಖಾನ್.

ಖಾನ್ ಜ್ಯೋತಿಷ್ಯರಲ್ಲಿಗೆ ಹೋಗಿ ತನ್ನ ತಂದೆ ತಾಯಿ ಬದುಕಿರುವರೆ?, ಅವರನ್ನು ತಾನು ಎಂದಾದರೂ ಭೇಟಿಯಾಗುವೆನೆ? ಎಂದೆಲ್ಲಾ ಕೇಳಿದ್ದಲ್ಲದೆ ಭಾರತಕ್ಕೆ ಭೇಟಿ ಕೊಡುವ ಪರಿಚಿತರೆಲ್ಲರಿಗೂ ತಮ್ಮ ವಿಚಾರ ತಿಳಿಸಿ ಭಾರತದಲ್ಲಿ ಅದನ್ನು ಪ್ರಚಾರಗೊಳಿಸುವಂತೆ ವಿನಂತಿಸಿಕೊಳ್ಳುತ್ತಿದ್ದರು. ಈ ಪ್ರಕಾರವಾಗಿಯಾದರೂ ತನ್ನ ಇರವು ಮಾತಾಪಿತರ ಕಿವಿಗೆ ಬೀಳಲಿ ಎಂಬುದು ಒಂದು ದೂರದ ಆಸೆ. ಇದರಿಂದಾಗಿ ಅವರ ಹತ್ತಿರದ ಸ್ನೇಹಿತರಿಗೆ ಆತ ನಿಜವಾಗಿ ಹಿಂದು, ಅವನನ್ನು ಸಾಕಿದವರು ಮುಸ್ಲೀಮರು ಎಂಬ ನಿಜ ಸಂಗತಿ ಗೊತ್ತಾಗುವಂತಾಯಿತು.

ಖಾನರ ಈ ಪ್ರಚಾರ ವೈಖರಿ ಪಾಕಿಸ್ತಾನದ ಹಿಂದೂ ಮತ್ತು ಶೀಖ್‌ರಲ್ಲಿ ಆತ ಸರಕಾರಿ ಗುಪ್ತಚರ ಇರಬಹುದು ಎಂಬ ಸಂಶಯವನ್ನು ಮೂಡಿಸಿತು. ತನ್ನ ಬಗ್ಗೆ ಒಂದಿಷ್ಟು ಹಿಂದೂಗಳಿಗೆ ಗೊತ್ತಾಗಲಿ ಎಂದು ಗೀತಾ ಪಠಣ ನಡೆಯುವಲ್ಲಿಗೆ ಹೋದರೆ ಹಿಂದೂ ಮತ್ತು ಶೀಖ್‌ರು ಅವನೊಡನೆ ಮೊದಲಿಗಿಂತ ಹೆಚ್ಚು ಜಾಗರೂಕತೆಯಿಂದ ವರ್ತಿಸತೊಡಗಿದರು.

ಖಾನರ ಈ ಯಾವ ಹೂಟಗಳೂ ಫಲ ನೀಡಲಿಲ್ಲ. ಅವರೀಗ ಕರಾಚಿಯಲ್ಲಿ ಅಂಗ ವಿಕಲರ ಸಂಸ್ಥೆಯೊಂದನ್ನು ನಡೆಯಸುತ್ತಿದ್ದಾರೆ. ಅಂಗವಿಕಲ ಮಗುವಿನ ತಂದೆ ತಾಯಿಗಳನ್ನು ಕಾಣಲು ಅವರ ಮನೆಗಳಿಗೆ ಹೋಗುವುದಿದೆ. ಹಾಗೊಂದು ಸಲ ಹೋದಾಗ ಅಲ್ಲಿದ್ದ ಪತ್ರಿಕೆಯೊಂದರಲ್ಲಿ ಮುದುಕಿಯೋರ್ವಳು ತಾನು ಕಳೆದುಕೊಂಡ ತನ್ನ ಮಗನ ಫೋಟೋ ಹಿಡಿದುಕೊಂಡಂತಹ ಚಿತ್ರವನ್ನು ಕಂಡರು. ಚಿತ್ರದ ಕೆಳಗೆ ಆ ಮುದುಕಿಯ ಹೆಸರು ರುಕ್ಮಿಣಿದೇವಿ ಎಂದೂ ಅವಳು ತನ್ನಿಂದ ಬೇರ್ಪಟ್ಟ ಮಗು ಜಗದೀಶನ ಅನ್ವೇಷಣೆಯಲ್ಲಿದ್ದಾಳೆಂದೂ ಮುದ್ರಿಸಲಾಗಿತ್ತು.

ಖಾನರ ಶರೀರದಲ್ಲಿ ಮಿಂಚು ಹರಿದ ಅನುಭವ. ಕೂಡಲೇ 'ಜಂಗ್' ಪತ್ರಿಕೆಯ ಆಫೀಸಿಗೆ ಓಡಿದರು. ದುರ್ದೈವವಶಾತ್

ಅಂದು ಸುದ್ದಿ ಸಂಪಾದಕ ರಜೆಯ ಮೇಲಿದ್ದ. ಮರುದಿನ ಹೋಗಿ ಆತನನ್ನು ವಿಚಾರಿಸಿದಾಗ ರುಕ್ಮಿಣಿಯ ಬಗೆಗೆ ಆತ ತನಗೇನೂ ತಿಳಿಯದೆಂದೂ ತನಾ ದುಬೈಯ 'ಖಲೀಲ್ ಟೈಂಸ್' ನಿಂದ ಚಿತ್ರ ಮತ್ತು ಸುದ್ದಿಯನ್ನು ಎತ್ತಿಕೊಂಡಿರುವುದಾಗಿಯೂ ಹೇಳಿದ. ಖಾನ್ ಮತ್ತೆ ನಿರಾಶೆಯ ಮಡಿಲು ಸೇರಿದರು.

ಖಾನ್ ಕರಾಚಿಯ ಎಲ್ಲಾ ಪಂಚತಾರಾ ಹೋಟೇಲುಗಳಲ್ಲೂ 'ಖಲೀಲ್ ಟೈಂಸ್'ನ ಪ್ರತಿಗಾಗಿ ಹುಡುಕಾಡಿದರು. ಅದೂ ಫಲ ನೀಡಲಿಲ್ಲ.

ಅವರ ಸ್ನೇಹಿತರೊಬ್ಬರು ದುಬೈಗೆ ಹೋಗುವವರಿದ್ದರು. ಅವರನ್ನು ಕಂಡು 'ಖಲೀಲ್ ಟೈಂಸ್'ನ ಪ್ರತಿಯೊಂದನ್ನು ಸಂಪಾದಿಸಿ ತರುವಂತೆ ವಿನಂತಿಸಿಕೊಂಡರು. ಆದರೆ ಅವರಿಗೂ ಅಲ್ಲಿ ಆ ಪ್ರತಿ ಸಿಗಲಿಲ್ಲ. ಅದು ರಾಜೇಂದ್ರ ಬಾಜಪಾಯ್ ಎನ್ನುವ ರೈಟರ್ ಸುದ್ದಿ ಸಂಸ್ಥೆಯ ದಿಲ್ಲಿ ವರದಿಗಾರನ ಲೇಖನ, ಮತ್ತು ಲೇಖನದಲ್ಲಿ ಅಚ್ಚಾದ ಫೋಟೋ ಆತ ತೆಗೆದದ್ದು ಎಂಬುದು ತಿಳಿಯಿತು.

ಇತ್ತೀಚೆಗೆ ಮನೆಗೆ ಬಂದ ಪಾಕಿಸ್ತಾನದ ರೈಟರ್ ಸುದ್ದಿ ಸಂಸ್ಥೆಯ ವರದಿಗಾರನಿಗೆ ಖಾನ್ ತಮ್ಮೆಲ್ಲ ವಿವರಗಳನ್ನೂ ನೀಡಿದರು. ಖಾನರ ಪ್ರಾಮಾಣಿಕತೆಯನ್ನು ಕಂಡ ಆತ ರುಕ್ಮಿಣಿದೇವಿಯ ವಿಳಾಸವನ್ನು ನೀಡಿದ. ಅದ



ಡಾ. ಎಸ್. ಐ. ಖಾನ್

ನ್ನನುಸರಿಸಿ ಡಾ.ಖಾನ್ ತಂದೆ ತಾಯಿಗಳನ್ನು ಕಾಣುವ ಹಂಬಲದಿಂದ ದಿಲ್ಲಿ ಏರ್‌ಪೋರ್ಟಿನಲ್ಲಿ ಬಂದಿಳಿದರು.

ಪಾಕಿಸ್ತಾನದ ರೂಪಾಯಿ ಭಾರತದಲ್ಲಿ ನಡೆಯದು ಎಂಬುದನ್ನೂ ಮರೆಯುವಷ್ಟು ಆತುರದಿಂದ ಅವರು ತಂದೆತಾಯಿಗಳನ್ನು ಕಾಣಲು ಹೊರಟರು. ಕಾರ್ ಡ್ರೈವರ್ ನಿರ್ವಾಹವಿಲ್ಲದೆ ಪಾಕಿಸ್ತಾನದ ರೂಪಾಯಿಗಳನ್ನು ಭಾರತದ ರೂಪಾಯಿಗಳನ್ನಾಗಿ ಪರಿವರ್ತಿಸಬೇಕಾಯಿತು.

★ ★ ★

ಕಾರಿಳಿದು ಬಂದ ವ್ಯಕ್ತಿ ಹಜಾರ ಪ್ರವೇಶಿಸುತ್ತಲೇ ಅಲ್ಲಿದ್ದವರನ್ನೆಲ್ಲ ಗಂಭೀರವಾಗಿ ಅವಲೋಕಿಸಿದ. ವೃದ್ಧ ದಂಪತಿಗಳತ್ತ ತಿರುಗಿದ ಅವನ ಕಣ್ಣುಗಳು ಅಲ್ಲೆ ನೆಟ್ಟವು. ಅವುಗಳು ಅಪ್ರಯತ್ನಪೂರ್ವಕವಾಗಿ ಮಿನುಗಿದವು.

"ದಯವಿಟ್ಟು ಕುಳಿತುಕೊಳ್ಳಿ," ಎಂದರು ಯಾರೋ. ಆಸನವೊಂದನ್ನು ಆರಿಸಿ ಖಾನ್ ಕುಳಿತುಕೊಂಡರು. ಒಂದು ಕ್ಷಣ ಮೌನ ಅಲ್ಲಿ ತಾಂಡವವಾಡಿತು.

"ನಿನ್ನ ಹೆಸರೇನು?" ರುಕ್ಮಿಣಿದೇವಿ ಉಕ್ಕಿ ಬರುತ್ತಿದ್ದ ಭಾವನೆಗಳನ್ನು ಅದುಮಿಡುತ್ತಾ ಪ್ರಶ್ನಿಸಿದರು. ಹಜಾರದಲ್ಲಿ ಆ ಕುಟುಂಬದ ಸದಸ್ಯರೆಲ್ಲಾ ಆಸೀನರಾಗಿದ್ದರು. ಬಂದವ ದೊಡ್ಡ ಮಗಳ ಗಂಡನ ಬದಿಗೇ ಕುಳಿತಿದ್ದ.

"ಜಗದೀಶ," ಎಂದಿತು ಆ ವ್ಯಕ್ತಿ.

ರುಕ್ಮಿಣಿದೇವಿಯ ಮುಖ ಕಪ್ಪಿಟ್ಟಿತು. ಕಣ್ಣುಗಳು ಕಳೆಗುಂದಿದವು.

ಈತನೂ ಮೋಸಗಾರನೇ? ಅಲ್ಲಿದ್ದವರೆಲ್ಲರ ಮನದಲ್ಲಿ ಎದ್ದ ಪ್ರಶ್ನೆ.

ಅವರ ಮಗ ಕಳೆದು ಹೋಗುವ ಮುನ್ನ ಅವನಲ್ಲಿ, "ನಿನ್ನ ಹೆಸರೇನು?" ಎಂದು ಕೇಳಿದರೆ 'ದೀಶ್ ಬಾಬು' ಎನ್ನುತ್ತಿದ್ದ. ಅವನನ್ನು ಪ್ರೀತಿಯಿಂದ ಕರೆಯುತ್ತಿದ್ದುದು ಹಾಗೆ.

ಖಾನ್ ತನ್ನೆಲ್ಲ ಚರಿತ್ರೆಯನ್ನು ವಿವರಿಸಿದರು. ತನ್ನ ಹೃದಯಾಂತರಾಳದ ಮಾತುಗಳನ್ನೆಲ್ಲಾ ಬಿಚ್ಚಿಟ್ಟರು. ಭಾವೋದ್ವೇಗದಿಂದ, "ನಿಮ್ಮಿಂದ ನಾನೇನನ್ನೂ ಆಶಿಸುವುದಿಲ್ಲ. ಆದರೆ ನಿಮ್ಮ ಮುಪ್ಪಿನ ಕಾಲದಲ್ಲಿ ನನ್ನ ಅವಶ್ಯಕತೆ ಇದೆ ಎಂದು ತಿಳಿದು ಬಂದೆ," ಎಂದು ಗದ್ಗದಿತರಾದರು. ದಂಪತಿಗಳ ಕಣ್ಣುಗಳು ತೇವಗೊಂಡವು. ಮನಸ್ಸು ತುಂಬಿ ಬಂತು. ಈತ ತಮ್ಮ ಮಗನೇ ಹೌದು ಎಂದು ಅವರ ಅಂತರಾತ್ಮ ಕೂಗಿ ಹೇಳಿತು.

ತಂದೆ ತಾಯಿಯ ವಿಳಾಸ ತಿಳಿದದ್ದೇ ತಡ ದಿಲ್ಲಿಗೆ ಹಾರಿ ಬಂದಿದ್ದ ಖಾನರ ಈ ಕಾರ್ಯವೇ ಸಾಕು ಅವರಿಗೆ ಆತ ತಮ್ಮ ಮಗನೇ ಎಂದು ಒಪ್ಪಿಕೊಳ್ಳಲು.

ಈಗ ಖಾನ್ ತನ್ನ ತಂದೆ, ತಾಯಿ, ಸಹೋದರಿಯರನ್ನು, ಭಾವಂದಿರನ್ನು ದಿನಾಲು ಭೇಟಿಯಾಗುತ್ತಿದ್ದಾರೆ. ತನ್ನವರ ಆತ್ಮೀಯತೆ ಅವರಿಗೆ ಹಿಡಿಸದಷ್ಟು ಸಂತೋಷ ತಂದಿದೆ.

ಖಾನ್ ಈಗ ಒಂದು ವೈದ್ಯಕೀಯ ಪರೀಕ್ಷೆಗೆ ಒಳಗಾಗಲೇ ಬೇಕಾಗಿರುವುದೊಂದು ಬೇಸರದ ಸಂಗತಿ. ಸ್ನೇಹಿತರು ಮತ್ತು ಬಂಧುಗಳ ಒತ್ತಾಯದ ಮೇರೆಗೆ ಖಾನ್ ಮತ್ತು ಅವರ ತಂದೆ ತಾಯಿಗಳ ರಕ್ತ ಪರೀಕ್ಷೆ ನಡೆಯುತ್ತಿದೆ. ಅದರ ಫಲಿತಾಂಶ ಸತ್ಯ ನುಡಿಯಿತೆಂದರೆ ಅವರನ್ನು ಬೇರಿನ್ನಾವ ಶಕ್ತಿಯೂ ಬೇರ್ಪಡಿಸಲಾರದು. ಪರೀಕ್ಷೆಗಳ ಜಂಜಾಟ ಮುಗಿಯಬೇಕಿದ್ದರೆ ಇನ್ನು ಕೆಲವು ವಾರ ತಗಲುವುದು. ಅಲ್ಲಿಯವರೆಗೆ ಖಾನ್ ಅರ್ಥಾತ್ ಜಗದೀಶ್ ಅರ್ಥಾತ್ ದೀಶ್ ಬಾಬು ತಂದೆ ತಾಯಿಗಳ ಒಡನಾಟದಲ್ಲಿರಬಹುದು.

ಹಾಗಾದರೆ ಖಾನರ ಮುಸ್ಲಿಂ ಹೆಂಡತಿಗೆ ಯಾರು ಗತಿ? ಮೂರು ಮಕ್ಕಳ ಭವಿಷ್ಯವೇನು? ತನ್ನ ಗಂಡನು ಮಾತಾಪಿತರಿಂದ ಅಗಲಿದ ಮಗು ಎಂದು ತಿಳಿದಿದ್ದರೂ ಈ ರೀತಿಯಲ್ಲಿ ಪರ್ಯವಸಾನವಾದೀತೆಂದು ಆಕೆ ಯೋಚಿಸಿರಲಿಕ್ಕೂ ಇಲ್ಲ.

ಬದುಕು ವಿಚಿತ್ರವೆನ್ನುವುದು ಸುಳ್ಳೆ?

●

ಕಸ್ತೂರಿ

# ಬರಲಿವೆ
# ಬುದ್ಧಿಶಾಲಿಗಳಾದ ಕಂಪ್ಯೂಟರುಗಳು!



ಪ್ರೊ. ಅರುಣಕುಮಾರ ಖನ್ನೂರ

1946ರಲ್ಲಿ 'ಇಲೆಕ್ಟ್ರಾನಿಕ್' ಕಂಪ್ಯೂಟರು ನಿರ್ಮಿಸಲ್ಪಟ್ಟಂದಿನಿಂದ ಪ್ರಾರಂಭವಾದ ಕಂಪ್ಯೂಟರ್ ಯುಗ ಒಂದು ರೀತಿಯಲ್ಲಿ 'ಬೌದ್ಧಿಕ ಕ್ರಾಂತಿ'ಯನ್ನೆ ಉಂಟು ಮಾಡಿದೆ. ಕಂಪ್ಯೂಟರಿನ ಬಳಕೆ ಸಾರ್ವತ್ರಿಕವಾಗಿದೆ. ಇದಕ್ಕೆ ಅರೆವಾಹಕ ತಂತ್ರವಿದ್ಯೆಯೆ (Semiconductior Technology) ಮೂಲ ಕಾರಣ. ಇದರ ಕಾರಣದಿಂದಾಗಿಯೇ ಸೂಕ್ಷ್ಮ ವಿದ್ಯುನ್ಮಾನ (Micro-electronics) ಉದ್ಯಮ ಅಭಿವೃದ್ಧಿಗೊಂಡು 'ಸೂಕ್ಷ್ಮವಾದ ಅಗ್ಗವಾದ ಮತ್ತು ವೇಗದಾಯಕ' ವಿದ್ಯುನ್ಮಾನ ಉಪಕರಣಗಳು ದೊರೆಯುವಂತಾಯಿತು. ಇಂತಹ ಉಪಕರಣಗಳಿಂದಲೇ ಕೂಡಿದ ಕಂಪ್ಯೂಟರುಗಳು ಒಂದು ಸಣ್ಣ ಮೇಜಿನ ಮೇಲೆ ಇರಿಸಿ, ನಿರ್ವಹಿಸುವಷ್ಟು ಚಿಕ್ಕದಾಗಿವೆ. ಸದ್ಯದಲ್ಲೇ 10,000 ರೂಪಾಯಿಗಳಿಗೆ ಜನತಾ ಕಂಪ್ಯೂಟರು ದೊರೆಯಲಿದೆ.

**ಕಂಪ್ಯೂಟರ್ ಕೆಲ ವಿಷಯಗಳು: –**

ಕಂಪ್ಯೂಟರು ಮುಖ್ಯವಾಗಿ ಒಂದು ವಿದ್ಯುನ್ಮಾನ (Electronic) ಯಂತ್ರ. ಈ ಯಂತ್ರ ಮೂಲಭೂತ ಗಣನಾಕ್ರಿಯೆಗಳಾದ ಸಂಕಲನ, ವ್ಯವಕಲನ, ಗುಣಾಕಾರ ಮತ್ತು ಭಾಗಾಕಾರಗಳನ್ನು ಮಾಡುತ್ತದೆ. ಅಲ್ಲದೇ ಕೊಟ್ಟಂತಹ ಅಂಕಿ ಸಂಖ್ಯೆ ಅಥವಾ ಹೆಸರು ಮುಂತಾದವುಗಳನ್ನು ಲಭ್ಯವಿರುವ ಇತರೆ ಮಾಹಿತಿಯೊಂದಿಗೆ ತುಲನೆ ಮಾಡಿ, 'ಸರಿ' ಅಥವಾ 'ತಪ್ಪು' ಎಂಬ ತಾರ್ಕಿಕ ನಿಲುವನ್ನೂ ತಳೆಯುತ್ತದೆ. ಇಂತಹ ಗಣನೆ ಮತ್ತು ತಾರ್ಕಿಕ ಕ್ರಿಯೆಗಳನ್ನು ಅದು ಮಾನವನಿಗಿಂತ ನಿಖರವಾಗಿಯೂ, ವೇಗವಾಗಿಯೂ ನಿರ್ವಹಿಸುತ್ತದೆ.

ಕಂಪ್ಯೂಟರ್ ಯಂತ್ರರೂಪ (Hardware) ಮತ್ತು ಕ್ರಿಯಾರೂಪ (Software)ಗಳಿಂದಾದ ಸಂಕೀರ್ಣ ವ್ಯವಸ್ಥೆ. ಯಂತ್ರರೂಪ ಆಗಮ ನಿರ್ಗಮಾಂಗ ಸ್ಮರಣಾಂಗ ಮತ್ತು ಸಂಸ್ಕರಣ ವಿಭಾಗಗಳನ್ನು ಹೊಂದಿದೆ. ಯಂತ್ರವನ್ನು ಯಾರಾದರೂ ನೋಡಬಹುದು, ಸ್ಪರ್ಶಿಸಬಹುದು. ಆದರೆ ಕ್ರಿಯಾರೂಪದ ಮಾತು ಹಾಗಲ್ಲ. ವಾಸ್ತವಿಕವಾಗಿ ಅದು ಕಾರ್ಯಕ್ರಮ (Programme) ಗಳ ಒಟ್ಟು ಮೊತ್ತ. ಇದು ಯಂತ್ರರೂಪವನ್ನು ನಿಯಂತ್ರಿಸಿ, ಯೋಗ್ಯ ರೀತಿಯಲ್ಲಿ ಕಾರ್ಯವೆಸಗುವಂತೆ ಮಾಡುತ್ತದೆ. ಕ್ರಿಯಾರೂಪದ ಪ್ರತಿಯೊಂದು ಕಾರ್ಯಕ್ರಮದಲ್ಲಿ ಅನೇಕ ನಿರ್ದೇಶನಗಳು ಅಡಕವಾಗಿರುತ್ತವೆ. ಇಂತಹ ಪ್ರತಿಯೊಂದು ನಿರ್ದೇಶನವು ಕಂಪ್ಯೂಟರಿನಲ್ಲಿ ಗಣನ ಅಥವಾ ತಾರ್ಕಿಕ ಕ್ರಿಯೆಯನ್ನುಉಂಟುಮಾಡುತ್ತದೆ.

**ಈಗಿರುವ ಕಂಪ್ಯೂಟರುಗಳು ಬುದ್ಧಿವಂತಿಕೆಯನ್ನು ಪ್ರದರ್ಶಿಸುತ್ತವೆಯೇ?**

ಸದ್ಯ ಬಳಕೆಯಲ್ಲಿರುವ ಕಂಪ್ಯೂಟರುಗಳು ಮಾನವನು ಮಾಡಿದ ಕಾರ್ಯಕ್ರಮಗಳಲ್ಲಿರುವ

ನಿರ್ದೇಶನಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸುತ್ತವೆ. ಅವು ಒಂದು ರೀತಿಯಲ್ಲಿ ಗುಲಾಮರಿದ್ದಂತೆ. ಕಾರ್ಯಕ್ರಮಗಳಲ್ಲಿ ಏನಾದರೂ ತಪ್ಪುಗಳಿದ್ದರೆ, ಕಂಪ್ಯೂಟರು ನೀಡುವ ಫಲಿತಾಂಶವೂ ತಪ್ಪಾಗಿರುತ್ತದೆ. ಆದ್ದರಿಂದ ಸದ್ಯದ ಕಂಪ್ಯೂಟರುಗಳಿಗೆ ಬುದ್ಧಿಶಕ್ತಿಯಿಲ್ಲ, ಅವು ಕೇವಲ ದತ್ತಾಂಶಗಳನ್ನಾಧರಿಸಿ ಗಣನ ಮತ್ತು ತಾರ್ಕಿಕ ಕ್ರಿಯೆಗಳನ್ನು ಉಂಟುಮಾಡಿ, ಫಲಿತಾಂಶವನ್ನು ನೀಡುತ್ತವೆ. ಇದಕ್ಕೆ 'ದತ್ತಾಂಶ ಸಂಸ್ಕರಣೆ' ಎಂದು ಹೆಸರು. ಅಲ್ಲದೇ, ಕಂಪ್ಯೂಟರು ಅಗಾಧ ಪ್ರಮಾಣದಲ್ಲಿ ಮಾಹಿತಿಯನ್ನು ಸಂಗ್ರಹಿಸಬಲ್ಲುದು. ಬಳಕೆದಾರನ ಅವಶ್ಯಕತೆಗಳಿಗೆ ತಕ್ಕಂತೆ ಈ ಮಾಹಿತಿಯಲ್ಲಿ ನಿರ್ದಿಷ್ಟ ಹೊಂದಾಣಿಕೆ ಮಾಡಿ, ಉಪಯುಕ್ತ ಮಾಹಿತಿಯನ್ನೂ ಅದು ಒದಗಿಸುತ್ತದೆ. ಈ ಕಾರ್ಯಕ್ಕೆ 'ಮಾಹಿತಿ ಸಂಸ್ಕರಣೆ' ಎಂದು ಹೆಸರು.

ಅಂದರೆ, ಇಲ್ಲಿಯವರೆಗಿನ ಕಂಪ್ಯೂಟರುಗಳು 'ದತ್ತಾಂಶ ಸಂಸ್ಕರಣೆ' ಮತ್ತು 'ಮಾಹಿತಿ ಸಂಸ್ಕರಣೆ'ಗೆ ಮಾತ್ರ ಬಳಸಲ್ಪಡುತ್ತಿವೆ. ಇಂತಹ ದತ್ತಾಂಶ ಮತ್ತು ಮಾಹಿತಿಯನ್ನು ಲಿಖಿತರೂಪದಲ್ಲಿ ಸಂಗ್ರಹಿಸಿಡಬಹುದು.

ಇದಲ್ಲದೆ, ಸದ್ಯದ ಕಂಪ್ಯೂಟರುಗಳು ನೋಡಲಾರವು, ಕೇಳಲಾರವು, ಆಕಾರಗಳನ್ನು ಗುರುತಿಸಲಾರವು, ಚಲಿಸಲಾರವು, ಕ್ಲಿಷ್ಟಕರವಾದ ಸಮಸ್ಯೆಗಳನ್ನು ತಜ್ಞರಂತೆ ಸರಳಗೊಳಿಸಿ ಬಿಡಿಸಲಾರವು.

**ಬುದ್ಧಿಮತ್ತೆಯ ಬಗೆಗೆ ಕೆಲವು ವಿಚಾರಗಳು:**

ಈಗ ವಿಜ್ಞಾನಿಗಳು ದತ್ತಾಂಶ ಮತ್ತು ಮಾಹಿತಿ ಸಂಸ್ಕರಣೆಯಲ್ಲದೇ, ಕಂಪ್ಯೂಟರಿಗೆ ಜ್ಞಾನ ಸಂಸ್ಕರಣೆಯ ಕಾರ್ಯವನ್ನೂ ವರ್ಗಾಯಿಸುವ ಪ್ರಯತ್ನದಲ್ಲಿದ್ದಾರೆ. ಇದರಿಂದಾಗಿ ಹೊರಬರುವ ಫಲಿತಾಂಶಗಳು ಬುದ್ಧಿಯುಕ್ತವೆನಿಸಲಿವೆ. ಅರ್ಥಾತ್ ಕಂಪ್ಯೂಟರಿಗೆ ಬುದ್ಧಿಮತ್ತೆಯನ್ನು ಅಳವಡಿಸುವ ಕಾರ್ಯ ಈಗ ನಡೆಯುತ್ತಿದೆ.

ಬುದ್ಧಿಮತ್ತೆ ಎಂದರೇನು? ಎಂಬುದನ್ನೇ ವ್ಯಾಖ್ಯಾನಿಸುವುದು ಅಸಾಧ್ಯವಾಗಿರುವ ಸಂದರ್ಭದಲ್ಲಿ, ಅದನ್ನು ಕಂಪ್ಯೂಟರಿನಲ್ಲಿ ಅಳವಡಿಸುವ ಪ್ರಯತ್ನ ಹಾಸ್ಯಾಸ್ಪದ ಎನಿಸದಿರದು. ಆದರೆ ವಿಜ್ಞಾನಿಗಳ ಅಭಿಮತವೇ ಬೇರೆ. ಬುದ್ಧಿಮತ್ತೆ ಎಂದರೇನೆಂಬುದನ್ನು ವಿವರಿಸುವುದು ಸಾಧ್ಯವಾಗದ ಪಕ್ಷದಲ್ಲಿ, ಬುದ್ಧಿಮತ್ತೆಯೆಂಬುದು ಇಲ್ಲವೇ ಇಲ್ಲ ಎನ್ನಲಾಗುತ್ತದೆಯೇ? ಅವರ ಪ್ರಕಾರ, ಬುದ್ಧಿಮತ್ತೆಯನ್ನು ವ್ಯಾಖ್ಯಾನಿಸುವುದು ಅಸಾಧ್ಯವಾದರೂ ಬೌದ್ಧಿಕಕ್ರಿಯೆಗಳನ್ನು ಗುರುತಿಸುವುದಂತೂ ಸಾಧ್ಯ. ಇಂತಹ ಕ್ರಿಯೆಗಳನ್ನು ಕಂಪ್ಯೂಟರು ಪ್ರದರ್ಶಿಸುವಂತಾದರೆ, ಅದಕ್ಕೆ ಬುದ್ಧಿಮತ್ತೆ (Intelligence) ಇದೆಯೆಂದೇ ಅರ್ಥ.

ಬುದ್ಧಿಮತ್ತೆಗೂ ಮತ್ತು ಆಕಾರವನ್ನು ಗುರುತಿಸುವುದು, ಅರ್ಥೋಚಿತ ನಿರ್ಧಾರ ತಳೆಯುವುದು, ಕ್ಲಿಷ್ಟಕರವಾದ ಸಮಸ್ಯೆಗಳನ್ನು ಸರಳಗೊಳಿಸುವುದು, ಮುಂತಾದವುಗಳ ಮಧ್ಯೆ ಸಂಬಂಧವಿದೆ. ಬುದ್ಧಿಮತ್ತೆಯ ದತ್ತಾಂಶ, ಮಾಹಿತಿ, ಜ್ಞಾನ, ಅನುಭವ ಮತ್ತು ಕಲಿಕೆಗಳಿಂದ ಉಂಟಾಗುತ್ತದೆ. ಅದಕ್ಕೆ



ಚಿತ್ರ 1 ದತ್ತಾಂಶ, ಮಾಹಿತಿ, ಜ್ಞಾನ ಮತ್ತು ಬುದ್ಧಿಮತ್ತೆಗಳ ಸಂಬಂಧ

ಹೊಸ ತತ್ತ್ವಗಳನ್ನು ಮತ್ತು ಜ್ಞಾನವನ್ನು ಹುಟ್ಟುಹಾಕುವ ಶಕ್ತಿಯಿದೆ.

ಚಿತ್ರ 1 ರಲ್ಲಿ ತೋರಿಸಿದಂತೆ ಬುದ್ಧಿಮತ್ತೆಯು ದತ್ತಾಂಶ, ಮಾಹಿತಿ ಮತ್ತು ಜ್ಞಾನಗಳ ಸಮಷ್ಟಿ. ಯಾವುದೇ ವಿಷಯ ಮತ್ತು ವಸ್ತುವಿನ ಬಗೆಗಿನ ಮೂಲ ಸಂಗತಿಗಳನ್ನು 'ದತ್ತಾಂಶ' ಎಂದು ಕರೆಯಬಹುದು. ಇಂತಹ ದತ್ತಾಂಶಗಳ ಸುಸಂಬದ್ಧ ಜೋಡಣೆಯಿಂದ 'ಮಾಹಿತಿ' ಉಂಟಾಗುತ್ತದೆ, ದತ್ತಾಂಶ ಮತ್ತು ಮಾಹಿತಿಗಳನ್ನು ಶೇಖರಿಸುವುದು ಮತ್ತು ಅಳವಡಿಸುವುದು ಸುಲಭ. ಇವುಗಳನ್ನು ಶಬ್ದ ಮತ್ತು ಸಂಖ್ಯೆಗಳ ರೂಪದಲ್ಲಿ ಸಾಂಕೇತಿಕವಾಗಿ ಪ್ರತಿಪಾದಿಸಬಹುದು. ಇವುಗಳ ಮುಂದಿನ ಘಟ್ಟವೇ ಜ್ಞಾನ. ದತ್ತಾಂಶ, ಗಣಿತ ಸೂತ್ರಗಳು ಇವೇ ಮುಂತಾದವುಗಳ ನಡುವಿನ ಸಂಬಂಧಗಳಿಂದ ಜ್ಞಾನ ಉಂಟಾಗುತ್ತದೆ. ಜ್ಞಾನವನ್ನು ಶೇಖರಿಸುವುದು ಅಷ್ಟು ಸುಲಭವಾದ ಕೆಲಸವಲ್ಲ. ಅದು ಕಲಿಕೆ (learning) ಎಂಬ ಪೂರ್ಣ ಅರ್ಥವಾಗದ ಮತ್ತು ಕ್ಲಿಷ್ಟವಾದ ಕ್ರಿಯೆಯನ್ನು ಒಳಗೊಂಡಿದೆ. ಜ್ಞಾನವನ್ನು ಭಾಷೆ ಮತ್ತು ಗಣಿತದ ಮಾಧ್ಯಮದಲ್ಲಿ ಚಿಕ್ಕದಾಗಿ, ಚೊಕ್ಕವಾಗಿ ಅಭಿವ್ಯಕ್ತಿಸಬಹುದು. ಆದರೆ ಕಂಪ್ಯೂಟರಿನಲ್ಲಿ ಅದನ್ನು ಪ್ರತಿಪಾದಿಸುವ ಮತ್ತು ಅಳವಡಿಸುವ ಕಾರ್ಯ ತುಂಬ ಕಷ್ಟದಾಯಕ. ಈ ಕಾರ್ಯವೇ ವಿಜ್ಞಾನಿಗಳಿಗೆ ಒಂದು ಸವಾಲಾಗಿ ಪರಿಣಮಿಸಿದೆ. ಅದು ಸಾಧ್ಯವಾದರೂ ಮುಂದಿನ ಘಟ್ಟವಾದ ಜ್ಞಾನದ ಸಂಸ್ಕರಣೆಯು ಅತೀವ ಕಷ್ಟದಾಯಕವಾದದ್ದು. ಏಕೆಂದರೆ ವ್ಯಕ್ತಿಯ ಜ್ಞಾನದಿಂದ ಹೊರಹೊಮ್ಮುವ ಬುದ್ಧಿವಂತಿಕೆಯ ನಿರ್ಧಾರಗಳು ಗಣನಾಕಾರ್ಯಗಳಿಗಿಂತ ಹೆಚ್ಚಾಗಿ ತಾರ್ಕಿಕ ನಿರ್ಧಾರ ಕ್ರಮಗಳಿಂದಲೇ ಉಂಟಾಗಿರುತ್ತವೆ.

**ಬುದ್ಧಿಮತ್ತೆಯನ್ನು ಕಂಪ್ಯೂಟರಿನಲ್ಲಿ ಅಳವಡಿಸುವಲ್ಲಿ ಇರುವ ತೊಂದರೆಗಳು:**

ಸದ್ಯದ ಕಂಪ್ಯೂಟರುಗಳಲ್ಲಿ ಗಣನಕಾರ್ಯಗಳಿಗೆ ಹೆಚ್ಚು ಪ್ರಾಮುಖ್ಯವನ್ನು ಕೊಡಲಾಗಿದೆ. ಅಲ್ಲದೇ ಅವುಗಳಲ್ಲಿರುವ ಯಂತ್ರರೂಪವೂ ಗಣನಕ್ರಿಯೆಗಳಿಗೆ ಹೆಚ್ಚು ಪೂರಕವೆನಿಸುವಂತೆ ನಿರ್ಮಿಸಲ್ಪಟ್ಟಿದೆ. ಇಂತಹ ಕ್ರಿಯೆಗಳನ್ನು ಉಂಟುಮಾಡುವ ಕಾರ್ಯಕ್ರಮಗಳ ಸಂಸ್ಕರಣೆ ಸರಣಿರೂಪದಲ್ಲಿ ನಡೆಯುತ್ತದೆ. ಇಂತಹ ಕಂಪ್ಯೂಟರುಗಳಿಂದ ಜ್ಞಾನ ಸಂಸ್ಕರಣೆ ಸಾಧ್ಯವಿಲ್ಲ. ಅದು ಸಾಧ್ಯವಾಗಬೇಕಾದರೆ ಕಂಪ್ಯೂಟರುಗಳ ವಿನ್ಯಾಸದಲ್ಲಿ ಆಮೂಲಾಗ್ರ ಬದಲಾವಣೆಯಾಗಬೇಕು. ಕಂಪ್ಯೂಟರುಗಳು ಕಾರ್ಯಕ್ರಮಗಳನ್ನು (ಮಿದುಳಿನಲ್ಲಿಯ ನ್ಯೂರಾನುಗಳಲ್ಲಿ ಜರಗುವಂತೆ) ಸಮಾಂತರ ಸಂಸ್ಕರಣೆಗೆ ಒಳಪಡಿಸಬೇಕು. ಸಮಾಂತರ ಸಂಸ್ಕರಣೆಯನ್ನು ಹೆಚ್ಚು ಅರ್ಥಪೂರ್ಣಗೊಳಿಸಲು ಯೋಗ್ಯ ಕಂಪ್ಯೂಟರ್ ಭಾಷೆಗಳು ಬೇಕು. ಈ ಭಾಷೆಗಳು ತಾರ್ಕಿಕ ನಿರ್ಧಾರಕ ಕ್ರಮಗಳಿಗೆ ಹೆಚ್ಚು ಒತ್ತುಕೊಡಬೇಕು. ಅಲ್ಲದೆ, ಅನುಭವಕ್ಕೆ ಬರುವ ವಿಷಯಗಳನ್ನು ಕಂಪ್ಯೂಟರು ಕಲಿಯುವಂತಾಗಬೇಕು. ಮತ್ತು ತನ್ನಲ್ಲಿರುವ ಜ್ಞಾನದಲ್ಲಿ ಸೂಕ್ತ ಮಾರ್ಪಾಟನ್ನು ಮಾಡಿಕೊಳ್ಳುವ ಸಾಮರ್ಥ್ಯವೂ ಅದರಲ್ಲಿರಬೇಕು. ಈ ಎಲ್ಲ ವಿಷಯಗಳನ್ನು ಕಂಪ್ಯೂಟರಿನಲ್ಲಿ ನಮಗೆ ಅಳವಡಿಸಲು ಸಾಧ್ಯವಾದಲ್ಲಿ, ಕಂಪ್ಯೂಟರಿಗೆ ಜ್ಞಾನ ಸಂಸ್ಕರಣೆಯೂ ಸಾಧ್ಯವಾಗುವುದು. ಆಗ ಕಂಪ್ಯೂಟರು ಬುದ್ಧಿಮತ್ತೆಯನ್ನು ಹೊಂದಿದಂತಾಗುವುದು. ಇದಲ್ಲದೇ, ತಾನು ಕೈಗೊಳ್ಳುವ ನಿರ್ಧಾರಗಳನ್ನು ಆಧಾರಸಹಿತ ಸಿದ್ಧಪಡಿಸುವ ಸಾಮರ್ಥ್ಯವನ್ನೂ ಅದು ಆಗ ಹೊಂದುವುದು.

**ಕಂಪ್ಯೂಟರಿಗೆ ಬುದ್ಧಿಮತ್ತೆಯ ಅಳವಡಿಕೆ:**

ಕಂಪ್ಯೂಟರು ಮಾನವನಂತೆ ಬುದ್ಧಿಯುತ ನಡತೆಯನ್ನು ಪ್ರದರ್ಶಿಸುವಂತೆ ಆಗಬೇಕು. ಇದು ಕಂಪ್ಯೂಟರ್ ವಿಜ್ಞಾನದಲ್ಲಿ ಇದೀಗ ಪ್ರಗತಿ ಕಾಣುತ್ತಿರುವ 'ಕೃತಕ ಬುದ್ಧಿಮತ್ತೆ' (Artificial Intelligence) ಎಂಬ ಕ್ಷೇತ್ರದ ಉದ್ದೇಶ. ಈ ಕ್ಷೇತ್ರದಲ್ಲಿಯ ಸಂಶೋಧನೆ

ಅನೇಕ ಸ್ತರಗಳಲ್ಲಿ ತೀವ್ರಗತಿಯಲ್ಲಿ, ಶಿಸ್ತಿನ ಕ್ರಮದಲ್ಲಿ, ನಡೆಯುತ್ತಿದೆ.

ಈ ದಿಶೆಯಲ್ಲಿ ಮೊದಲು ಕಂಪ್ಯೂಟರನ್ನು ಯಾಂತ್ರಿಕ ಮಿದುಳನ್ನಾಗಿ ಪರಿವರ್ತಿಸುವ ಪ್ರಯತ್ನ ನಡೆಯಿತು. ಮಿದುಳಿನ ಮಾದರಿಯನ್ನು ನಿರ್ಮಿಸಲು ಪ್ರಯತ್ನಿಸಿ ಸೋತ ವಿಜ್ಞಾನಿಗಳು ಈ ಕಾರ್ಯವನ್ನು ಕೈಬಿಟ್ಟರು. ಆಗ ಅವರ ಸಂಶೋಧನೆ ಬೇರೆ ದಾರಿ ಹಿಡಿದು. ನಿಜ ಜೀವನದ ಎಲ್ಲ ಸಮಸ್ಯೆಗಳನ್ನೂ ಪರಿಹರಿಸುವ ಸಾಮರ್ಥ್ಯವನ್ನು ಕಂಪ್ಯೂಟರಿನಲ್ಲಿ ಅಳವಡಿಸುವ ಪ್ರಯತ್ನ ನಡೆಯಿತು. ಇದರಲ್ಲಿಯೂ ಯಶ ಕಾಣದಿದ್ದಾಗ, ವಿಜ್ಞಾನಿಗಳು ಕಂಪ್ಯೂಟರಿನಲ್ಲಿ ನಿರ್ದಿಷ್ಟ ಕ್ಷೇತ್ರದ ಪರಿಪೂರ್ಣ ಜ್ಞಾನವನ್ನು ಅಳವಡಿಸಲು ಪ್ರಯತ್ನಪಟ್ಟರು. ಈ ಕ್ಷೇತ್ರದಲ್ಲಿ ಸ್ವಲ್ಪ ಯಶಸ್ಸು ದೊರೆತಿದೆ. ಇದರಿಂದಾಗಿ ಕಂಪ್ಯೂಟರುಗಳು ನಿರ್ದಿಷ್ಟ ಕ್ಷೇತ್ರದಲ್ಲಿ ತಜ್ಞರಂತೆ ಕಾರ್ಯ ನಿರ್ವಹಿಸಬಲ್ಲವು ಎಂಬುದು ದೃಢಪಟ್ಟಿದೆ.

ಇದರಿಂದ ಸ್ಫೂರ್ತಿಗೊಂಡ ವಿಜ್ಞಾನಿಗಳು, ಒಬ್ಬ ವ್ಯಕ್ತಿ ವಿಷಯಗಳನ್ನು ಗ್ರಹಿಸಿ, ಅರ್ಥೈಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವ ರೀತಿಯಲ್ಲಿಯ ಅಂತಹುದೇ ಸಾಮರ್ಥ್ಯವನ್ನು ಹೊಂದಬಲ್ಲ ಕಂಪ್ಯೂಟರುಗಳ ಅಭಿವೃದ್ಧಿಯ ಸಾಧ್ಯತೆಗಳನ್ನು ರೂಪಿಸತೊಡಗಿದ್ದಾರೆ. ವ್ಯಕ್ತಿಯ ಸಾಮರ್ಥ್ಯವನ್ನು ಕಂಪ್ಯೂಟರಿಗೆ ಅಳವಡಿಸುವ ಪಥದಲ್ಲಿ ಚಿತ್ರ 2 ರಲ್ಲಿ ತೋರಿಸಿರುವಂತೆ 'ಕೃತಕ ಬುದ್ಧಿಮತ್ತೆ' ಕ್ಷೇತ್ರವನ್ನವರು ವಿಂಗಡಿಸಿದ್ದಾರೆ.

ಚಿತ್ರದಲ್ಲಿ ತೋರಿಸಿರುವಂತೆ, ಕೃತಕ ಬುದ್ಧಿಮತ್ತೆ ಕ್ಷೇತ್ರವು ವ್ಯಕ್ತಿಯ ನಡಾವಳಿಯನ್ನು ಪ್ರತಿಫಲಿಸುತ್ತದೆ. ರೋಬೊಟಿಕ್ಸ್ ಕ್ಷೇತ್ರವು ದೈಹಿಕ ಚಲನವಲನಗಳನ್ನು ಯಂತ್ರದಲ್ಲಿ ಉಂಟುಮಾಡಲು ಶಕ್ತವಾದರೆ, ಆಡುಭಾಷಾ ಸಂಸ್ಕರಣ (Natural Language Processing) ಮತ್ತು ವಾಕ್ ಗ್ರಹಣ (Speech Recognition) ಕ್ಷೇತ್ರದ ಬೆಳವಣಿಗೆಗಳು ಕಂಪ್ಯೂಟರಿಗೆ ಸಂಪರ್ಕಕಲೆ ಸಿದ್ಧಿಸುವಂತೆ ಮಾಡುತ್ತವೆ. ಆಕೃತಿಗಳನ್ನು ಗುರುತಿಸುವ (Pattern Recognition) ಮತ್ತು ಚಿತ್ರಗಳನ್ನು ಪ್ರತಿಬಿಂಬಿಸುವ (ಅಂದರೆ ನೋಡುವ) ಸಾಮರ್ಥ್ಯಗಳನ್ನು ಕಂಪ್ಯೂಟರಿನಲ್ಲಿ ತುಂಬಲು 'ದೃಷ್ಟಿ' (Vision) ಕ್ಷೇತ್ರವು ಪ್ರಯತ್ನಿಸುತ್ತದೆ. ಈ ಎಲ್ಲ ಕ್ಷೇತ್ರಗಳಿಂದ ದೊರೆಯುವ ಜ್ಞಾನವನ್ನು ಅನುಭವಕ್ಕೆ ತಕ್ಕಂತೆ ಮಾರ್ಪಡಿಸಲು 'ಯಂತ್ರದ ಕಲಿಯುವಿಕೆ' (Machine learning) ಸಹಕಾರಿಯಾಗುವುದು.

ಚಿತ್ರದಲ್ಲಿ ತೋರಿಸಿದ ಮತ್ತು ವಿವರಿಸಿದ ಕೃತಕ ಬುದ್ಧಿಮತ್ತೆ ಕ್ಷೇತ್ರದ ಮಾದರಿಗಳನ್ನು ನಿರ್ಮಿಸಲು ಅವಶ್ಯವಾದ ತಂತ್ರಕೌಶಲಗಳನ್ನೀಗ ರೂಪಿಸಲಾಗುತ್ತಿದೆ. ಇಂತಹ ತಂತ್ರಕೌಶಲಗಳಲ್ಲಿ ಮೊದಲನೆಯದು ''ಜ್ಞಾನ ಪ್ರತಿಪಾದನೆ'' (Knowledge Representation). ಇಲ್ಲಿ ಗಣಿತ ಮತ್ತು ತರ್ಕಶಾಸ್ತ್ರದಲ್ಲಿನ ಸಿದ್ಧಾಂತ ಮತ್ತು ಆಧಾರಸಿದ್ಧಾಂತಗಳ ಸಹಾಯದಿಂದ ಜ್ಞಾನವನ್ನು ಸಂಕೇತರೂಪದಲ್ಲಿ ಕಂಪ್ಯೂಟರಿನಲ್ಲಿ ಅಳವಡಿಸಲಾಗಿರುತ್ತದೆ. ಇಂತಹ ಸಂಕೇತಗಳನ್ನು ಓದಿ ಅರ್ಥಮಾಡಿಕೊಳ್ಳುವುದು ಅಸಾಧ್ಯ. ಈ ಕಾರಣದಿಂದಾಗಿ ಸಂಕೇತ ರೂಪದಲ್ಲಿರುವ ಜ್ಞಾನವನ್ನು ಯೋಗ್ಯ ರೀತಿಯಲ್ಲಿ ಸರಿಹೊಂದಿಸಿ, ಅರ್ಥವತ್ತಾಗಿ ವಿಶದೀಕರಿಸುವ ಕಾರ್ಯಕ್ಕಾಗಿಯೇ ಯುಕ್ತಿ, ಕೌಶಲ ಮತ್ತು ಧೋರಣೆಗಳನ್ನು ರೂಪಿಸಲಾಗುತ್ತದೆ. ಮತ್ತು ಅವನ್ನು ಕೂಡ ಕಂಪ್ಯೂಟರಿನಲ್ಲಿಯೇ ಅಳವಡಿಸಲಾಗುತ್ತದೆ. ದೃಢೀಕೃತ ಜ್ಞಾನವು (Declarative Knowledge) ಸಂಗತಿ, ಸಿದ್ಧಾಂತ ಮತ್ತು ಆಧಾರ ಸಿದ್ಧಾಂತಜನಿತವಾದರೆ, ಪ್ರಕ್ರಿಯಾತ್ಮಕ ಜ್ಞಾನವು ಇಂತಹ ಜ್ಞಾನವನ್ನು ವ್ಯಕ್ತಪಡಿಸಲು ಅವಶ್ಯವಾದ ಯುಕ್ತಿ, ಕೌಶಲ ಮತ್ತು ಧೋರಣೆಗಳನ್ನು ಒಳಗೊಂಡಿರುತ್ತದೆ. ಎರ




ಚಿತ್ರ 2 : ವ್ಯಕ್ತಿಯ ನಡಾವಳಿಗಳನ್ನು ಪ್ರತಿಫಲಿಸುವ ಕೃತಕ ಬುದ್ಧಿಮತ್ತೆ ಕ್ಷೇತ್ರದ ಮಾದರಿಗಳು.

ಡನೆಯದಾಗಿ "ಜ್ಞಾನ ಸಂಸ್ಕರಣೆ" (Knowledge Processing). ಇದು ಯೋಗ್ಯ ನಿರ್ಣಯ ತಳೆಯಲು ಅವಶ್ಯವಾದ ಜ್ಞಾನ ಶೋಧನೆ ಮತ್ತು ಯುಕ್ತಪರಿಹಾರ ಕ್ರಮಗಳನ್ನು ಒದಗಿಸಬಲ್ಲ ಯಂತ್ರಕೌಶಲವನ್ನು ಒಳಗೊಂಡಿರುತ್ತದೆ. ಮೂರನೆಯದಾಗಿ ಕಲಿಯುವಿಕೆಗೆ ಅವಶ್ಯವಾದ ಕೌಶಲಗಳು (Learning Techniqus). ಇವು ಬಾಹ್ಯ ವಸ್ತುಗಳೊಂದಿಗೆ ಏರ್ಪಡುವ ಸಂಪರ್ಕದ ಆಧಾರದಿಂದ ಈಗ್ಗಾಗಲೇ ಲಭ್ಯವಿರುವ ಜ್ಞಾನದಲ್ಲಿ ಯೋಗ್ಯ ಬದಲಾವಣೆ ಮಾಡಿ, ಹೊಸ ಜ್ಞಾನವನ್ನು ಉಂಟು ಮಾಡಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತವೆ. ಇದಲ್ಲದೇ, ಸಮಸ್ಯೆಗಳ ಪರಿಹಾರಕ್ಕಾಗಿ ಪೂರ್ವ ನಿಯೋಜಿತ ಕೌಶಲಗಳು, ವ್ಯವಸ್ಥೆ ಮತ್ತು ಬಳಕೆದಾರನ ನಡುವಿನ ಸಂಪರ್ಕ ಹೆಚ್ಚು ಫಲಪ್ರದವಾಗಲು ಅವಶ್ಯವಾದ ಬೌದ್ಧಿಕ ಸಂಪರ್ಕ ಮಾಧ್ಯಮಗಳ ರಚನೆಗಳನ್ನು ಕೂಡ ಕೈಗೆತ್ತಿಕೊಳ್ಳಲಾಗಿದೆ.

**ಪ್ರಸಕ್ತ ವಿದ್ಯಮಾನ:**

ಇಂತಹ ಯಂತ್ರಗಳ ನಿರ್ಮಾಣದಲ್ಲಿ ಹೆಚ್ಚಿನ ಆಸಕ್ತಿ ತೋರುತ್ತಿರುವ ರಾಷ್ಟ್ರ ಜಪಾನ್. ಅದು 1981ರ ಅಕ್ಟೋಬರಿನಲ್ಲಿ ಟೋಕಿಯೊದಲ್ಲಿ ಈ ವಿಷಯದ ಬಗ್ಗೆ ಪ್ರಪ್ರಥಮವಾಗಿ ಸಮ್ಮೇಳನ ನಡೆಸಿತಲ್ಲದೆ ಎಂಟು ಕೋಟಿ ಐವತ್ತೈದು ಲಕ್ಷ ಡಾಲರುಗಳಷ್ಟು ಹಣದೊಂದಿಗೆ ಕಾರ್ಯೋನ್ಮುಖವಾಗಿದ್ದು ಮುಂದಿನ ಹತ್ತು ವರ್ಷಗಳಲ್ಲಿ ತನ್ನ ಧ್ಯೇಯೋದ್ದೇಶಗಳನ್ನು ಸಾಧಿಸಿಕೊಳ್ಳು ಸನ್ನಾಹದಲ್ಲಿದೆ.

ಗಣನ ಕ್ರಿಯೆಗಳಿಗಿಂತ ತಾರ್ಕಿಕ ಕ್ರಿಯೆಗಳತ್ತ ಹೆಚ್ಚು ಒಲವು ತೋರಿಸುವ ಹಾಗೆ ಯಂತ್ರಗಳ ಸಂಭಾವ್ಯ ರೂಪರೇಷೆಯನ್ನು ಈಗಾಗಲೇ ಪ್ರಚುರಪಡಿಸಲಾಗಿದೆ. ಇದಕ್ಕನುಗುಣವಾಗಿ ಭಾಷೆಗಳನ್ನು (ಉದಾ: LISP, PROLOG, OCCAM ಮುಂ.) ಸಹ ಅಭಿವೃದ್ಧಿಪಡಿಸಲಾಗಿದೆ. ಯಂತ್ರ ನಿರ್ಮಾಣಕ್ಕೆ ಅವಶ್ಯವಾದ ಉಪಕರಣಗಳ ತಯಾರಿಕೆಗೆ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.

ಇದರಿಂದಾಗಿ ಈಗಾಗಲೇ ಅಲ್ಪ ಪ್ರಮಾಣದ ಯಶಸ್ಸೂ ದೊರೆತಿದೆ. ಸಂಯುಕ್ತ ವಸ್ತುವಿನ ರಚನೆ, ಸಾಂಕ್ರಾಮಿಕ ರೋಗಗಳ ಚಿಕಿತ್ಸೆ, ಭೂ ಸರ್ವೇಕ್ಷಣ, ಸಾಮಾನ್ಯ ಒಳರೋಗ ತಪಾಸಣೆ ಮುಂತಾಗಿ ನಿರ್ದಿಷ್ಟ ಕ್ಷೇತ್ರದಲ್ಲಿ

ತಜ್ಞರಂತೆಯೇ ಅನೇಕ ಮಹತ್ವದ ಕ್ರಮಗಳನ್ನು ಕೈಗೊಳ್ಳಬಲ್ಲ ಕಂಪ್ಯೂಟರ್ ವ್ಯವಸ್ಥೆಗಳು ರೂಪಿಸಲ್ಪಟ್ಟಿವೆ.

ತಜ್ಞ ಕಂಪ್ಯೂಟರ್ ವ್ಯವಸ್ಥೆಗಳಲ್ಲಿ ಜರಗುವ ಜ್ಞಾನ ಸಂಸ್ಕರಣೆಯಿಂದ ಉಂಟಾಗುವ ಫಲಿತಾಂಶಗಳು, ತಜ್ಞರು ಕೈಗೊಳ್ಳುವ ಬೌದ್ಧಿಕ ಕ್ರಿಯೆಗಳಂತೆ ವೈಶಿಷ್ಟ್ಯಪೂರ್ಣವಾಗಿ ಇರುತ್ತವೆ. ಅಲ್ಲದೇ, ಅಪೂರ್ಣ ಮಾಹಿತಿಯನ್ನು ಅವಲಂಬಿಸಿ ಯೋಗ್ಯ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವೂ ಈ ಯಂತ್ರಗಳಿಗಿದೆ. ಇವೆಲ್ಲಕ್ಕಿಂತ ಮಿಗಿಲಾಗಿ, ಈ ಯಂತ್ರಗಳು ತಮ್ಮ ನಿರ್ಧಾರವನ್ನು ಕೈಗೊಳ್ಳಲು ಅವಶ್ಯವೆನಿಸಿದ ಅಂಶಗಳನ್ನೂ ನಮಗೆ ನೀಡಬಲ್ಲವು.

ಆದರೆ ತಜ್ಞ ಕಂಪ್ಯೂಟರ್ ವ್ಯವಸ್ಥೆ ಮೇಲೆ ಹೇಳಿದ ಕ್ಷೇತ್ರಗಳನ್ನು ಹೊರತುಪಡಿಸಿ ಇನ್ನುಳಿದ ಕ್ಷೇತ್ರಗಳಲ್ಲಿ ಅಷ್ಟಾಗಿ ಫಲ ನೀಡುತ್ತಿಲ್ಲ.

ಕೃತಕ ಬುದ್ಧಿಮತ್ತೆ ಕ್ಷೇತ್ರದ ಹೆಸರಿನಲ್ಲಿ ಕಂಪ್ಯೂಟರಿನಲ್ಲಿ ತಜ್ಞರ ಜ್ಞಾನವನ್ನು (ಅವರ ಮರಣಾನಂತರವೂ) ಕಾಯ್ದಿಡುವ ಪ್ರಯತ್ನ ನಡೆದಿದೆ. ಇದರಿಂದಾಗಿ, ಮುಂದೆ ನಿರ್ಮಾಣಗೊಳ್ಳಲಿರುವ ಯಂತ್ರಗಳು ಅತಿ ಮಾನುಷ ಬುದ್ಧಿಮತ್ತೆಯನ್ನು ಪ್ರದರ್ಶಿಸಲೂಬಹುದು. ಇಂತಹ ಪರಿಸ್ಥಿತಿಯಲ್ಲಿ ಸಾಮಾನ್ಯರಾದ ನಮ್ಮಂಥವರ ಪಾಡೇನು? ●

## ಅತಿ ಕಿರಿಯ ಅಜ್ಜಿ!

*ಮಮ್-ಜ್ಞೀ ಎಂಬ ಹೆಸರಿನ ಹುಡುಗಿ ತನ್ನ ಏಳನೆಯ ವಯಸ್ಸಿನಲ್ಲಿ ನೈಜೀರಿಯದ ಕಾಲಬಾರ್ ಎಸ್ಟ್ಯುಯರಿಯನ್ನಾಳುವ ಮುಖ್ಯಸ್ಥ ಅಕ್ಕಿರೀ ಎಂಬುವವನನ್ನು ಮದುವೆಯಾದಳು. ಈಕೆಯು ಮದುವೆಯಾದ ವರ್ಷದಲ್ಲೇ ಒಂದು ಹೆಣ್ಣು ಮಗುವಿಗೆ ಜನ್ಮ ಕೊಟ್ಟಳು. ಮಮ್-ಜ್ಞೀ ಹಾಗೂ ಅಕ್ಕಿರೀ ದಂಪತಿಗಳ ಮಗಳು ಸಹ ತಾನು ಮದುವೆಯಾದ ಎಂಟನೆಯ ವರ್ಷದಲ್ಲಿ ಒಂದು ಮಗುವಿಗೆ ಜನ್ಮ ಕೊಟ್ಟಳು. ಇದರಿಂದಾಗಿ ಮಮ್-ಜ್ಞೀಯು ತನ್ನ ಹದಿನೇಳನೆಯ ವಯಸ್ಸಿಗೇ ಅಜ್ಜಿಯಾದಳು. ಈಗ ಈಕೆ ಪ್ರಪಂಚದ ಅತಿ ಕಿರಿಯ ಅಜ್ಜಿ ಎನಿಸಿದ್ದಾಳೆ.*

*— ಡಿ.ಪ್ರಕಾಶ್ ಚನ್ನಪಟ್ಟಣ*

## ರಾಜಮಾರ್ಗ

*ಮೈಸೂರು ವಿಶ್ವವಿದ್ಯಾನಿಲಯದ ಆರಂಭದಿಂದಲೂ ಅದರ ಉಪಕುಲಪತಿಯಾಗಿದ್ದ ಎಚ್.ವಿ.ನಂಜುಂಡಯ್ಯನವರು ಮೈಸೂರು ಮಹಾರಾಜರಿಂದ 'ರಾಜಮಂತ್ರಪ್ರವೀಣ' ಎಂಬ ಬಿರುದು ಪಡೆದಿದ್ದರು. 1920ರ ಮೇ 7ರಂದು ಮೈಸೂರಿನಲ್ಲಿ ಅವರು ನಿಧನರಾದರು. ಅವರ ಸ್ಮಶಾನ ಯಾತ್ರೆ ಸಾಗುತ್ತಿದ್ದಾಗ ಯಾರೋ ಒಬ್ಬರು ಒಂದು ಅಡ್ಡದಾರಿಯನ್ನು ತೋರಿಸಿ, "ಹೀಗೆ ಹೋದರೆ ಹತ್ತಿರವಾಗುತ್ತೆ," ಎಂದರಂತೆ. ಆಗ ಅಲ್ಲಿದ್ದವರೊಬ್ಬರು, "ಅಡ್ಡದಾರಿಯಲ್ಲಿ ಹೋಗುವುದು ಬೇಡ ಅವರು ಯಾವಾಗಲೂ ರಾಜಮಾರ್ಗದಲ್ಲಿಯೇ ನಡೆದವರು. ಈ ಕೊನೆಯ ಪ್ರಯಾಣ ಹಾಗೆಯೇ ಸಾಗಲಿ," ಎಂದರಂತೆ.*

*— ಯಳನಡು ಆರ್.ಗೋಪಿನಾಥ ಶ್ಯಾವಿಗೆ*

# ಭರವಸೆ

## ಮತ್ತು

# ವಿಶ್ವಾಸ

ಮುರಲೀಧರ ಕುಲಕರ್ಣಿ

ಜೀವನದಲ್ಲಿ ನಾವು ಪಾಠ ಕಲಿಯಲಾಗದ ವಿಷಯವೇ ಇಲ್ಲ. ಸರ್ಕಸ್ಸಿನಲ್ಲಿ ಹಗ್ಗದ ಮೇಲೆ ನಡೆಯುವ ಸಾಹಸಕಾರ್ಯದಿಂದಲೂ ನಾವು ಜೀವನದಲ್ಲಿ ಒಂದು ಪಾಠವನ್ನು ಕಲಿಯಬಹುದು.

ಅಮೆರಿಕದ ಬ್ಲಾಂದಿನ್ ಎಂಬ ಸರ್ಕಸ್ ಕಲಾವಿದನೊಬ್ಬ ಹಗ್ಗದ ಮೇಲೆ ನಡೆಯುವ ಸಾಹಸದಲ್ಲಿ ತುಂಬ ಪ್ರಖ್ಯಾತನಾಗಿದ್ದ. ಆತ ಅನೇಕ ಸಲ ಹಗ್ಗದ ಮೇಲೆ ನಡೆದು ನಯಾಗಾರಾ ಜಲಪಾತವನ್ನು ದಾಟಿದ್ದ. ಅವನ ಈ ಸಾಹಸ ಪ್ರಾಣಾಂತಿಕವಾಗಿತ್ತು. ಅವನು ಈ ಸಾಹಸದಲ್ಲಿ ಮಾಡಬಹುದಾದ ಒಂದು ಸಣ್ಣ ತಪ್ಪು ಕೂಡ ಅವನ ಮೃತ್ಯುವಿಗೆ ಕಾರಣವಾಗಬಹುದಿತ್ತು.

ಒಂದು ಸಲ ಈ ಪ್ರಾಣಾಂತಿಕ ಪ್ರದರ್ಶನದ ನಂತರ ಒಬ್ಬ ಬಾಲಕ ಬ್ಲಾಂದಿನ್ನನ ಬಳಿಗೆ ಬಂದು ಅವನನ್ನು ತುಂಬ ಹೊಗಳತೊಡಗಿದ. ಆಗ ಬ್ಲಾಂದಿನ್ನನು, ''ನಿನ್ನನ್ನು ಹೆಗಲ ಮೇಲೆ ಕೂಡಿಸಿಕೊಂಡು ಹಗ್ಗದ ಮೇಲೆ ನಡೆಯುತ್ತಾ ಜಲಪಾತದ ಆಚೆ ಬದಿಯನ್ನು ನಾನು ತಲುಪಬಹುದೆಂಬ ಭರವಸೆ ನಿನಗೆ ಇದೆಯೇ?'' ಎಂದು ಕೇಳಿದ.

''ಓಹೋ ಯಾಕಿಲ್ಲ?'' ಅಂದ ಆ ಬಾಲಕ.

''ಹಾಗಾದರೆ ಕುಳಿತುಕೋ ನನ್ನ ಹೆಗಲ ಮೇಲೆ,'' ಬ್ಲಾಂದಿನ್ ಹೇಳಿದ. ಈ ಮಾತುಗಳನ್ನು ಕೇಳುತ್ತಲೇ ಬಾಲಕನು ಭಯಭೀತನಾದನು. ಅವನ ಮುಖ ವಿವರ್ಣವಾಯಿತು.

ಭರವಸೆ ಮತ್ತು ವಿಶ್ವಾಸದಲ್ಲಿ ಇರುವ ವ್ಯತ್ಯಾಸವೆಂದರೆ ಇದೇ. ಭಗವಂತನ ಅಸ್ತಿತ್ವದ ಬಗ್ಗೆ ನಮಗೆ ಭರವಸೆ ಇದೆ. ಆದರೆ ಆತ ನಮ್ಮ ಕಷ್ಟಗಳನ್ನು ಪರಿಹರಿಸುತ್ತಾನೆ ಎನ್ನುವ ಬಗ್ಗೆ ನಮಗೆ ಸಂಪೂರ್ಣವಾಗಿ ವಿಶ್ವಾಸವಿಲ್ಲ. ಆದರೆ ಭಗವಂತನಲ್ಲಿ ಪೂರ್ಣವಾಗಿ ವಿಶ್ವಾಸ ಎಟ್ಟ ಹೊರತು ಅವನು ನಮಗೆ ಸಹಾಯ ಮಾಡಲಾರ.

ಕೌರವರ ಆಸ್ಥಾನದಲ್ಲಿ ದ್ರೌಪದಿಯ ಸೀರೆಯನ್ನು ಸೆಳೆಯುತ್ತಿದ್ದಾಗ, ಅವಳು ತನ್ನ ಒಂದು ಕೈಯಿಂದ ಸೀರೆಯ ನೆರಿಗೆಯನ್ನು ಭದ್ರವಾಗಿ ಹಿಡಿದುಕೊಂಡು ಇನ್ನೊಂದು ಕೈಯಿಂದ ಕೃಷ್ಣನಲ್ಲಿ ಮೊರೆಯಿಡುತ್ತಿದ್ದಳು. ಆಗ ಕೃಷ್ಣ ತನ್ನ ಮರ್ಯಾದೆ ಉಳಿಸಿಯಾನೆಂಬ ಬಗ್ಗೆ ಅವಳಿಗೆ ಪೂರ್ಣವಿಶ್ವಾಸವಿರಲಿಲ್ಲ. ಆದರೆ ಅವಳು ತೀರ ಅಸಹಾಯಳಾಗಿ ಎರಡೂ ಕೈಗಳನ್ನು ಮೇಲೆತ್ತಿ ಮೊರೆ ಇಟ್ಟಾಗಲೇ ಅವಳ ವಸ್ತ್ರ ಅಕ್ಷಯವಾಯಿತು. ●

# ವಿಕ್ಟರ್ ಹ್ಯೂಗೋ

ಸು.ರಂ.ಎಕ್ಕುಂಡಿ

ಒಬ್ಬ ವ್ಯಕ್ತಿಯಲ್ಲೇ, ಎಂಥೆಂಥ ಸಾಮರ್ಥ್ಯಗಳು ಮಡುಗೊಳ್ಳುವುದು ಸಾಧ್ಯ? ಬಹಳವಾದರೆ ಒಂದು, ಇಲ್ಲವೆ ಎರಡಿರುವುದು. ಆದರೆ ಅಸಾಧಾರಣ ಪ್ರತಿಭಾವಂತರಲ್ಲಿ ಪ್ರಕೃತಿಯು ಯಾವು ಯಾವುದೂ ಸಾಮರ್ಥ್ಯವನ್ನಿಟ್ಟು ಕಾಯುತ್ತದೆ. ಕಾಲ ಒದಗಿ ಬಂದಾಗ, ಅವು ಒಂದೊಂದಾಗಿ ಅರಳುತ್ತವೆ. ಇಲ್ಲವೆ, ಏಕಕಾಲದಲ್ಲಿ ಅವು ಹೂವಿನ ದಳಗಳಂತೆ, ಬಿಚ್ಚಿಕೊಂಡು ಸೊಗಸಲೂಬಹುದು. ವಿಕ್ಟರ್ ಹ್ಯೂಗೋನ ಪ್ರತಿಭೆ ಇಂಥ ವರ್ಗಕ್ಕೆ ಸೇರಿದ್ದು. ಆತನು ವಿಖ್ಯಾತ ಕವಿ, ಕಾದಂಬರಿಕಾರ ಆಗಿದ್ದ. ಒಳ್ಳೆಯ ನಾಟಕಗಳನ್ನು ಬರೆದ. ಉತ್ತಮ ವಿಮರ್ಶಕನಾಗಿದ್ದ. ಇಷ್ಟೆಲ್ಲ ನಿಭಾಯಿಸಿಕೊಂಡು, ಗಣ್ಯ ರಾಜಕಾರಣಿಯೂ ಆಗಿದ್ದ. ಆತನ ಸಮಕಾಲೀನರಿಗಂತೂ ಹ್ಯೂಗೋ - ಬೆಟ್ಟದಂಥ ವ್ಯಕ್ತಿಯೆ ಆಗಿದ್ದ.

ವಿಕ್ಟರ್ ಹ್ಯೂಗೋನ ಸಾಧನೆಗಳನ್ನು, ರಚಿಸಿದ ಕೃತಿಗಳನ್ನು, ಸ್ಥೂಲವಾಗಿ ಒಮ್ಮೆ ಗಮನಿಸಿದರೂ ಸಾಕು. ಅವುಗಳ ವಿಸ್ತಾರ ಹಾಗು ಎತ್ತರಗಳು, ನಮ್ಮನ್ನು ಎಚ್ಚರ ತಪ್ಪಿಸುವಷ್ಟು ಅಮೋಘವಾಗಿವೆ. ಅವನು ಬರೆದ ಕೃತಿಗಳು 48 ಸಂಪುಟಗಳಷ್ಟಿರುತ್ತವೆ. ಪ್ರಪಂಚದ 44 ಭಾಷೆಗಳಲ್ಲಿ ಅವು ಅನುವಾದಗೊಂಡಿವೆ. ಹಾಗೂ ಜಗತ್ತಿನ ತುಂಬ ಅವನ ಕೃತಿಗಳ ಲಕ್ಷಾಂತರ ಪ್ರತಿಗಳು ಮಾರಾಟಗೊಂಡಿವೆ. ಹಾಗೆ ನೋಡಿದರೆ, ವರ್ಷಗಳು ಕಳೆದಂತೆ, ಹೊಸ ಹೊಸ ಲೇಖಕರು ಬಂದ ಹಾಗೆ, ಹಳಬರು ಒಬ್ಬೊಬ್ಬರಾಗಿ, ತಮ್ಮ ಕೃತಿಗಳ ಸೊಬಗನ್ನೊ ಕೀರ್ತಿ ಯಶಸ್ಸುಗಳ ಹೊಳಪನ್ನೊ ಕಳೆದುಕೊಳ್ಳುತ್ತಾರೆ. ಒಂದು ಕಾಲಕ್ಕೆ ಚಲಾವಣೆಯಲ್ಲಿದ್ದ ಅವರ ಜನಪ್ರಿಯತೆ ನಿಧಾನವಾಗಿ ಅಡಗಿ ಹೋಗುತ್ತದೆ. ಆದರೆ ವಿಕ್ಟರ್ ಹ್ಯೂಗೋನ ವಿಷಯದಲ್ಲಿ ಹಾಗಾಗಿಲ್ಲ. ವರ್ಷವರ್ಷವೂ ಆತನ ಜನಪ್ರಿಯತೆ ಹೆಚ್ಚುತ್ತಲೆ ಬಂದಿದೆ. ವಿಖ್ಯಾತ ಫ್ರೆಂಚ್ ಕವಿ ಮತ್ತು ದಾರ್ಶನಿಕ, ಪಾಲ್ ವಾಲೆರಿ ಹೇಳುತ್ತಾರೆ, "ಪ್ರತಿಯೊಂದನ್ನು ಹೇಳುವ ಸಾಮರ್ಥ್ಯವನ್ನು ಇಷ್ಟು ವ್ಯಾಪಕವಾಗಿ ಹಾಗೂ ವಿಸ್ತಾರವಾಗಿ ಯಾರೂ ಹೊಂದಿರಲಿಲ್ಲ ಹಾಗೂ ಬಳಸಿರಲಿಲ್ಲ." ಜೀನ್ ಪಾಲ್ ಸಾರ್ತರ್‌ಗಂತೂ, ಆತ ಇನ್ನೊಂದು ಬಗೆಯಾಗಿ ಕಂಡ: "ವಿಕ್ಟರ್ ಹ್ಯೂಗೋ, ತಾನು ಬಾಳಿದ ಶತಮಾನದ ಅಪ್ರತಿರಥ ಚಕ್ರವರ್ತಿಯೇ ಆಗಿದ್ದನು."

ಚಕ್ರವರ್ತಿ ಎಂದೊಡನೆ, ಸಾಮಾನ್ಯರಿಗೂ ಅವರಿಗೂ ಏನೂ ಸಂಬಂಧವೆ ಇಲ್ಲವೆಂಬ ಭಾವನೆ ಉಂಟಾಗುತ್ತದೆ. ಆದರೆ ಈ ಚಕ್ರವರ್ತಿ ಅಂಥ ವರ್ಗಕ್ಕೆ ಸೇರಿದವನಲ್ಲ. ವಿಕ್ಟರ್ ಹ್ಯೂಗೋನಿಗೆ ದಲಿತರು, ಬಡವರು, ನಿರ್ಗತಿಕರು ಹಾಗು ಪತಿತರೆಂದರೆ, ತುಂಬ ಅನುಕಂಪ ಹಾಗು ಪಕ್ಷಪಾತಗಳಿದ್ದವು. ಅವನು ಸದಾ ಅವರ ಪರವಾಗಿಯೆ ತನ್ನ ಪ್ರತಿಭೆಯನ್ನು ಲೇಖನಿಯನ್ನು ಬಳಸುತ್ತಿದ್ದನು. ಹಾಗೆಯೇ ಫ್ರೆಂಚ್ ಕವಿ ಫಿಲಿಪ್ ಸೂಪಾಲ್ತ ಹೇಳುತ್ತಾರೆ, "ವಿಕ್ಟರ್ ಹ್ಯೂಗೋ ತನ್ನ ಕೃತಿಗ



ಳಲ್ಲಿ, ನೊಂದವರ ಕಡೆಯಿಂದ ಕೂಗಿ ಹೇಳಿಸುತ್ತಾರೆ - ತಮ್ಮ ನೋವುಗಳನ್ನು.''

ವಿಕ್ಟರ್ ಹ್ಯೂಗೋನ (ಜನನ: 1802) ತಂದೆ, ಜನರಲ್ ಲಿಯೋಪೋಲ್ಡ್ ಹ್ಯೂಗೊ, ತಾಯಿ, ಸೋಫಿತ್ರೆಬ್ಯೂಚೆಲ್. ಇವರ ಮೂರನೆಯ ಮಗನೇ ವಿಕ್ಟರ್. ಚಿಕ್ಕಂದಿನಲ್ಲಿ, ಆತ ಎಷ್ಟು ದುರ್ಬಲನಾಗಿದ್ದನೆಂದರೆ, ತಾಯಿತಂದೆಗಳು ಈ ಮಗು ಬಹಳ ದಿನ ಬದುಕಲಾರದೆಂದೆ ನಂಬಿದ್ದರು. ಆದರೆ ವಿಕ್ಟರ್, ಕ್ರಮೇಣ ಅದನ್ನೆಲ್ಲ ದಾಟಿಕೊಂಡು, ಆ ಕಳೆದ ದಿನಗಳ ಬಲ ಹಾಗು ಸಾಮರ್ಥ್ಯಗಳನ್ನೆಲ್ಲಾ ಸಂಗ್ರಹಿಸಿ ಬೆಳೆಸಿಕೊಂಡ. 14 ವರ್ಷದವನಾಗುವ ಹೊತ್ತಿಗೆ, ಆತ ಒಬ್ಬ ಸಮೃದ್ಧ ಕವಿಯಾಗಿ ಬೆಳೆದನು. ಆಗಲೆ ಆತ ಕಾವ್ಯ, ದುರಂತನಾಟಕ ಹಾಗೂ ಹನ್ನೊಂದು ನೋಟಬುಕ್ಕು ತುಂಬಿದ ಪದ್ಯಗಳನ್ನು ರಚಿಸಿದ್ದ. ಇನ್ನೂ ಮಹತ್ವದ್ದೆಂದರೆ, ಸಾಹಿತ್ಯ ರಚನೆಯ ಅವನ ಸಾಮರ್ಥ್ಯವು ಆತನ, ಹರಿತವಾದ ಹಾಗೂ ಸಮರ್ಥಕ ವಿಮರ್ಶೆಯಿಂದ, ಸರಿದೂಗಲ್ಪಟ್ಟಿತ್ತು. ತಾನು ಎಷ್ಟು ಎತ್ತರದವರೆಗೆ ಏರಬಲ್ಲೆನೆಂಬುದರ ಕಲ್ಪನೆಯೂ ಆತನಿಗಿತ್ತು. ತನ್ನ ಕಾಲದ ಸುವಿಖ್ಯಾತ ಸಾಹಿತಿಯನ್ನು ಪ್ರಸ್ತಾಪಿಸುತ್ತ ವಿಕ್ಟರ್ ಹ್ಯೂಗೋ ಆಗ ಬರೆದಿದ್ದ, ''ಆದರೆ ಚಾತ್ಯೂಬ್ರಿಯಾಂದ ಆಗುವೆ, ಇಲ್ಲವಾದರೆ ಯಾರೂ ಅಲ್ಲ,'' ಆತನಿಗಾಗ ಹದಿನೈದನೆಯ ವರ್ಷ.

ಚಾತ್ಯೂಬ್ರಿಯಾಂದ (Chateubriand) ಆಗ 'ಲ ಕಾನ್ಸರ್ವೇತ್ಯೂರ' ಎಂಬ ಪತ್ರಿಕೆಯ ಸಂಪಾದಕನಾಗಿದ್ದ. ವಿಕ್ಟರ ಮತ್ತು ಆತನ ಸೋದರರು, ಆಬೆಲ, ಮತ್ತು ಯುಬೇನೆ, 'ಲ ಕಾನ್ಸರ್ವೇತ್ಯೂರ ಲಿತರೇರ' ಎಂಬ ಮ್ಯಾಗಝಿನ್ ಪ್ರಾರಂಭಿಸಿದರು. ಮುಂದೆ ಕೇವಲ 16 ತಿಂಗಳಲ್ಲಿ ಯುವಸಾಹಿತಿ ವಿಕ್ಟರ ಹ್ಯೂಗೋ, 112 ಲೇಖನಗಳನ್ನು ಮತ್ತು 22 ಕವನಗಳನ್ನು ಬೇರೆ ಬೇರೆ 11 ಕಾವ್ಯನಾಮಗಳಡಿಯಲ್ಲಿ ಬರೆದ. ಹಾಗೆ ನೋಡಿದರೆ, ಆ ಪತ್ರಿಕೆಯ ಬೆನ್ನೆಲುಬಿನಂತೆ ಇವನೇ ಪರಿಶ್ರಮವಹಿಸಿ, ಅದಕ್ಕೆ ಬೇಕಾದ ಸಾಹಿತ್ಯವನ್ನು ಸಮೃದ್ಧವಾಗಿ ಒದಗಿಸಿದ. ಹ್ಯೂಗೋನ ಪತ್ರಿಕೋದ್ಯಮದ ಈ ಪ್ರತಿಭೆ ನಿಜಕ್ಕೂ ಅಮೋಘವಾಗಿತ್ತು. ಆತ, ಎಷ್ಟೊಂದು ವೈವಿಧ್ಯಪೂರ್ಣವಾಗಿ ಬರೆದನು! ಎಷ್ಟು ವಿಷಯಗಳ ಕುರಿತು ಬರೆದ! ಎಂಬುದನ್ನು ಗಮನಿಸಿದರೆ, ಆಶ್ಚರ್ಯವಾಗದಿರದು. ನಾಟಕವಿರಲಿ, ವಿಮರ್ಶೆಯಿರಲಿ, ವಿದೇಶಿ ವಾಙ್ಮಯವಿರಲಿ, ರಾಜಕಾರಣವಿರಲಿ, ಪ್ರತಿಯೊಂದರಲ್ಲೂ ಆತನು ಪಡೆದಿದ್ದ ತಿಳುವಳಿಕೆ, ಹಾಗೂ ಪ್ರೌಢಿಮೆಗಳು ಅವನ ಪ್ರತಿಭೆಯ ಅಸಾಮಾನ್ಯತೆಗೆ ಸಾಕ್ಷಿಯಾಗಿದ್ದವು.

ವಿಕ್ಟರ್ ಹ್ಯೂಗೋ 21 ವರ್ಷದವನಾಗುವ ಹೊತ್ತಿಗೆ, ಆಗಲೇ ವಿಖ್ಯಾತ ಸಾಹಿತಿಯೆಂದು ಕೀರ್ತಿ ಪಡೆದಿದ್ದ. 'ಐಸ್‌ಲ್ಯಾಂಡಿನ ಹ್ಯಾನ್' ಎಂಬುದು ಹ್ಯೂಗೋ ಪ್ರಕಟಿಸಿದ ಮೊದಲನೆ ಕಾದಂಬರಿಯಾಗಿತ್ತು. ಅದನ್ನೋದಿದ ಮೇಲೆ, ಕವಿ, ಆಲ್‌ಫ್ರೆಡ್ ದ ವಿನಿ, ಅದನ್ನು ಹೊಗಳುತ್ತ ಬರೆದರು: ''ಇದೊಂದು ಸುಂದ

ರವಾದ ಕೃತಿ, ಬಹು ದೊಡ್ಡ, ಮತ್ತು ಚಿರ ಕಾಲ ನೆನಪಿಡುವಂಥ ಕೃತಿ.'' ಆಮೇಲೆ, ಒಂದರ ಹಿಂದೊಂದರಂತೆ, ವಿಕ್ಟರ್ ಹ್ಯೂಗೋ ಕೃತಿಗಳನ್ನು ಬರೆದು ಪ್ರಕಟಿಸಿದ. ತನ್ನ 24ನೆಯ ವಯಸ್ಸಿಗೆ, 'ಬಗ್ ಜಾರ್ಗಲ' ಎಂಬ ಕಾದಂಬರಿ ಬರೆದ. ಒಂದು ವರ್ಷದ ನಂತರ, 'ಕ್ರಾಮ್‌ವೆಲ್' ಎಂಬ ಪದ್ಯನಾಟಕ ಬಂದಿತು. 'ಓರಿಯೆಂಟೇಲ್ಸ್', ಎಂಬ ಪದ್ಯ ಗಳು, 'ಮೇರಿಯನ ದಿ ಲೋರ್ಮಿ' ಎಂಬ ಪದ್ಯ ನಾಟಕ ಹಾಗೂ 'ಮರಣ ದಂಡನೆ' ಕೈದಿಯ ಕೊನೆ ದಿನ': ಎಂಬ ಕಾದಂಬರಿ, ಇವೆಲ್ಲವೂ ಆತನು 27 ವರ್ಷದವನಿದ್ದಾಗ ಹೊರಬಂದವು. ವಿಕ್ಟರ್ ಹ್ಯೂಗೋ 'ನಾದಾ ಮದ ಗೂನ' ಬರೆದಾಗ ಆತನಿಗೆ 28 ವರ್ಷ ಗಳು. ಆ ಕೃತಿಯನ್ನು ಆತ ಬರಿಯ ಆರು ತಿಂಗಳಲ್ಲಿ ಬರೆದು ಮುಗಿಸಿದರೂ, ಮಧ್ಯ ಯುಗದ ಪ್ಯಾರಿಸ್ಸಿನ ವೀಕ್ಷಣೆ ಹಾಗೂ ಅಧ್ಯ ಯನಕ್ಕೆ ಮೂರು ವರ್ಷ ಹಿಡಿದಿದ್ದವು. ತನ್ನ ಈ ಮಹಾಕಾವ್ಯದಂಥ ಕೃತಿಯನ್ನು ಬರೆದು ಮುಗಿಸಲು, ಅವನು ಒಂದು ಉಪಾಯ ಕೈಕೊಂಡ: ತನ್ನ ಎಲ್ಲ ಬಟ್ಟೆ ಬರೆಗಳನ್ನು ಒಂದು ಟ್ರಂಕಿನಲ್ಲಿ ಹಾಕಿ ಅದಕ್ಕೆ ಕೀಲಿ ಜಡಿದ. ಹಾಗೂ ಮೊಳಕಾಲವರೆಗೆ ಇಳಿಬಿದ್ದ ಸ್ವೆಟರ್ ಒಂದನ್ನ ಹಾಕಿಕೊಂಡು, ತನ್ನನ್ನು ತಾನೆ ಒತ್ತಾಯಿಸುತ್ತ, ಬರೆಯಲಾರಂಭಿಸಿದ. ಹ್ಯೂಗೋ ಆ ಕೃತಿಯಲ್ಲಿ ಸುಂದರಿ ಯೆಸಮೆ ರಾಲ್ಡ, ಹಾಗೂ ಗೂನು ಬೆನ್ನಿನ ಕ್ವಾಸಿಮೋ ಡೊರ ಸಾಹಸಗಳನ್ನು ವರ್ಣಿಸಿದ್ದಾನೆ. ಅವ ನ್ನೋದಿದ ಮೇಲೆ, ವಿಖ್ಯಾತ ಫ್ರೆಂಚ್ ಕವಿ ಆಲಫೋನ್ಸ ದ ಲಮಾರ್ಕ್ ಬರೆದನು, ''ಶೇಕ್ಸ್‌ಪಿಯರನೆ, ಕಾದಂಬರಿಯಾಗಿ ಬಂದ ಹಾಗಿದೆ. ಅದು ಮಧ್ಯಯುಗದ ಮಹಾಕಾವ್ಯ ವಾಗಿದೆ.''

ಮೂವತ್ತು ವರ್ಷಗಳ ತರುವಾಯ, ವಿಕ್ಟರ್ ಹ್ಯೂಗೋ, ತನ್ನ ಎಲ್ಲ ಶಕ್ತಿ ಸಾಮ ರ್ಥ್ಯಗಳನ್ನು ಸಂಗ್ರಹಿಸಿ, 'ಲ ಮಿಸರಬಲೆ' ಎಂಬ ಕೃತಿ ರಚಿಸಿದ. ಅದು 'ಜೀನವಾಲಜೀನ ನ ದುರದೃಷ್ಟಗಳ ಹಾಗು ನುಂಗಿಕೊಂಡ ಅನ್ಯಾಯಗಳ ವಿಸ್ತಾರ ಕುಸುರುಗೆಲಸದ ಕಥೆ ಯಾಗಿದೆ. ಫಾಂತೀನ ಮತ್ತು ಆಕೆಯ ಮಗಳ, ಕಣ್ಣೀರಿನ ಮಹಾಕಾವ್ಯವಾಗಿದೆ. ಅದನ್ನು ಬರೆ ಯುವ ಹೊತ್ತಿಗೆ, ಹ್ಯೂಗೋನ ಕೀರ್ತಿ ಶಿಖ ರಕ್ಕೆ ಮುಟ್ಟಿತ್ತು. ಫ್ರೆಂಚ್ ಪ್ರಭುತ್ವದ ದೊಡ್ಡ ದೊಡ್ಡ ಅಧಿಕಾರಿಗಳು, ಅವನ ಸಮಯಕ್ಕೆ ಕಾದುಕೊಂಡು, ಸಂದರ್ಶನ ಪಡೆಯಲು ಬರುತ್ತಿದ್ದರು. 'ನಿಮ್ಮ ಕ್ರಿಯಾಶೀಲ ಬರೆಹಕ್ಕೆ ತೊಂದರೆ ಕೊಡುತ್ತಿದ್ದೇವೆ' ಎಂದು ಕ್ಷಮೆ ಕೋರುತ್ತಿದ್ದರು. ಹ್ಯೂಗೋನ ಕೃತಿಗಳು ಮುದ್ರಣಾಲಯದಿಂದ ಹೊರಬೀಳುವ ದೊಂದೇ ತಡ, ಪ್ರತಿಗಳೆಲ್ಲ ಆಗಿಂದಾಗ ಖರ್ಚಾಗಿ, ಎಷ್ಟೋ ಓದುಗರಿಗೆ ಸಿಗದೆ ಹೋಗುತ್ತಿದ್ದವು. ಕೆಲವೊಮ್ಮೆಯಂತೂ ಮುಂಜಾವಿನಲ್ಲಿ ಬಿಡುಗಡೆಯಾದ ಪ್ರತಿಗಳು, ಮಧ್ಯಾಹ್ನಕ್ಕೂ ಸಿಗುತ್ತಿರಲಿಲ್ಲ.

ಹ್ಯೂಗೋನ ಜೀವನ ಚರಿತ್ರೆ ಬರೆದವ ರಲ್ಲಿ ಮುಖ್ಯರೆಂದರೆ ಖ್ಯಾತ ಫ್ರೆಂಚ್ ಲೇಖಕ, ಆಂದ್ರೆ ಮಾಲ್ರಾ. ಅವನು ತನ್ನ 15ನೆ ವರ್ಷ ದಲ್ಲಿ, ಹ್ಯೂಗೋನ ಕೃತಿ ಓದಲಾರಂಭಿಸಿದ. ಆತ ಜೀವಮಾನದುದ್ದಕ್ಕೂ, ಹ್ಯೂಗೋನ ಎಲ್ಲ ಕೃತಿಗಳನ್ನು ಓದಿದ್ದ. ಓದಿದ ಹಾಗೆಲ್ಲ, ಅವುಗಳನ್ನು ಬರೆದವನಲ್ಲಿಯೂ, ಅವನ ಕೃತಿ ಗಳಲ್ಲೂ, ಆತನ ಪ್ರತಿಭೆಯ ಹೊಸ ಹೊಸ ಅಂಶಗಳೇ ಮಾಲ್ರಾಗೆ ಕಂಡವು. ಹ್ಯೂಗೋನ ಸಾಹಿತ್ಯಕ ಪ್ರತಿಭೆಯ ಕುರಿತು, ಯಾರದೂ ಎರಡನೆ ಮಾತೇ ಇರಲಿಲ್ಲ ನಿಜ. ಆದರೆ, ವಿಕ್ಟರ್ ಹ್ಯೂಗೋ ಮಾತ್ರ, ವೈರುಧ್ಯಗಳ ಮೂಟೆಯೆ ಆಗಿದ್ದನು. ಹ್ಯೂಗೋನಲ್ಲಿದ್ದ ಒಂದು ಲೋಪವೆಂದರೆ, ಆತ ಸ್ತ್ರೀಲಂಪಟನಾ ಗಿದ್ದುದು. ತನ್ನ 20ನೆ ವರ್ಷದಲ್ಲೆ ಆತ ಆಡಿಲ್ ಫೌಚರ್ ಎಂಬಾಕೆಯಲ್ಲಿ ಅನುರಕ್ತ ನಾಗಿ ಅವಳನ್ನು ಮದುವೆಯಾಗಿದ್ದನು ಅವಳ ಬಗೆಗಿನ ತನ್ನ ಪ್ರೀತಿಯನ್ನು ಅಭಿವ್ಯಕ್ತಗೊ

ಳಿಸಿ, ಸುಂದರವಾದ ಎಷ್ಟೊ ಪದ್ಯಗಳನ್ನು ಬರೆದಿದ್ದಾನೆ. ಅವನ ಪ್ರಣಯಗೀತೆಗಳ ಕೆಲ ಸಾಲುಗಳನ್ನಂತೂ ಮರೆಯುವ ಹಾಗೆಯೆ ಇಲ್ಲ.

'ನಾನು ನೆರಳಲ್ಲಿ ನಡೆಯುವಾಗ
ನನ್ನ ಕೈ ಹಿಡಿಯುವವಳು - ನೀನೆ,
ಮತ್ತು ಸ್ವರ್ಗದ ಕಿರಣಗಳು, ಆಗ
ನಿನ್ನ ಕಣ್ಣುಗಳಿಂದ ಹೊಮ್ಮಿ ನನ್ನನ್ನೂ
ತಲುಪುವವು.'

ಹೀಗಿದ್ದರೂ, ಎಂಟೇ ವರ್ಷಗಳಲ್ಲಿ, ದಂಪತಿಗಳು, ಬೇರೆ ಬೇರೆ ಮಂಚಗಳಲ್ಲೆ ಒರಗಿದರು. ಮುಂದೊಮ್ಮೆ ವಿಕ್ಟರ್ ಒಬ್ಬ ನಟಿ, ಜೂಲಿಯೆಟ್ ದ್ರೂಯೆಳನ್ನು ಕಂಡನು. ಆಕೆಯೂ, ಅವನು ವರ್ಣಿಸಿದಂತೆ, ''ಕಪ್ಪು ಕಣ್ಣುಗಳ, ಪೇಲವ, ಯುವತಿ; ಎತ್ತರ ನಿಲುವು, ಆದರೂ ಕಣ್ಣು ಕುಕ್ಕುವವಳು,'' ಆಗಿದ್ದಳು. ಆಕೆಯನ್ನು ತನ್ನ 'ಉಪಪತ್ನಿ' ಯೆಂದು ಇಟ್ಟುಕೊಂಡಿದ್ದರೂ, ಹೆಂಡತಿಯ ಕುರಿತು ಬರೆದಷ್ಟೆ ಸುಂದರ ಪದ್ಯಗಳನ್ನು ಅವಳ ಬಗೆಗೂ ಬರೆದಿದ್ದಾನೆ. ಅವರ ಈ ಸಂಬಂಧ ಪ್ರಪಂಚಕ್ಕೇ ಗೊತ್ತಿತ್ತು. ಆಡಿ ಲ್‌ಳೂ ಗೊತ್ತು. ಅವಳೂ ಅಷ್ಟೆ, ವಿಕ್ಟರನ ಜೀವದ ಗೆಳೆಯ, ಸಾಹಿತಿ ಚಾರ್ಲಿಸ ಸೇಂಟ್ ಬ್ಯೂವೆನೊಂದಿಗೆ, ಕಳ್ಳ ಸಂಬಂಧವನ್ನ ಬೆಳೆಸಿದ್ದಳು. ಜ್ಯೂಲಿಯೆಟ್‌ಳೊಂದಿಗೆ ಪ್ರಣಯ ನಡೆಯುತ್ತಿದ್ದ ಕೆಲ ತಿಂಗಳುಗಳಲ್ಲೆ, ವಿಕ್ಟರ್, ಯುವ ಪತ್ರಕರ್ತೆ, 'ಲಿಯಾನಿ ಬಾಯರ್ಡ' ಳೊಂದಿಗೆ, ಹಾದರ ನಡೆಸಿದಾಗ ಸಿಕ್ಕುಬಿದ್ದ. ತನ್ನ ಜೀವನದ ಕೊನೆಯ ವರ್ಷಗಳಲ್ಲಿ, ತನ್ನ ಈ 'ಸುದೈವದ ಅವಕಾಶ'ಗಳನ್ನು ಗಮನಿಸಿ, ಬೇರೊಂದು ಡೈರಿಯಲ್ಲಿ ಇವುಗಳ ಬಗ್ಗೆ ಬರೆದಿಟ್ಟನು. ಅದು ಅಕಸ್ಮಾತ್ತಾಗಿ, ಜ್ಯೂಲಿಯೆಟ್ಟಳ ಕೈಗೆ ಬಿದ್ದರೂ, ಅವಳಿಗೆ ವಿಷಯ ಗೊತ್ತಾಗಬಾರದೆಂದು ಸ್ಪಾನಿಶ್‌ನಲ್ಲಿ ಬರೆದಿದ್ದ. ಹಣದ ವಿಷಯದಲ್ಲೂ ವಿಕ್ಟರ್ ಹೀಗೆಯೆ ಇದ್ದ. ಆತ, 30 ವರ್ಷದವನಾಗುವ ಹೊತ್ತಿಗೆ, ಶ್ರೀಮಂತನಾಗಿದ್ದನೇನೋ ನಿಜ. ಆದರೆ, ಆಡಿಲ್‌ಗೆ ದಿನದ ವೆಚ್ಚವನ್ನೆಲ್ಲ ಬರೆದಿ



ಡಲು ಒತ್ತಾಯಿಸಿದ್ದನಲ್ಲದೆ, ಪ್ರತಿ ಸಂಜೆಯಲ್ಲಿ, ತಾನೆ ಲೆಕ್ಕಪತ್ರವನ್ನೆಲ್ಲ ತಪಾಸು ಮಾಡುತ್ತಿದ್ದ. ಜ್ಯೂಲಿಯೆಟ್ ಆತನ ಕೈ ಬರಹದ ಪ್ರತಿಗಳನ್ನು ದಿನಾ ನಕಲು ತೆಗೆಯುತ್ತಿದ್ದರೂ, ಒಮ್ಮೆ ಆಕೆ ಹಲ್ಲುಪುಡಿಯ ಒಂದು ಡಬ್ಬಿ ಖರೀದಿಸಿದ್ದಕ್ಕೆ, ರೇಗಿ ಕೂಗಾಡಿದ. ಇನ್ನೊಮ್ಮೆ ಆಕೆ ಹೊಸ ಶಾಲನ್ನು ತೆಗೆದುಕೊಂಡದ್ದನ್ನು ಆಕ್ಷೇಪಿಸಿದ. ನಿಜಸಂಗತಿಯೆಂದರೆ, ಆಕೆ ಹಳೆಯ ಶಾಲಿಗೇ ಹೊಸ ಆಕಾರ ಕೊಟ್ಟಿದ್ದಳು. ತನ್ನ ಕಾಲದಲ್ಲೇ ವಿಕ್ಟರ್ ಹ್ಯೂಗೋ ತುಂಬ ಉದಾರಿಯಾದವನೆಂದು ಖ್ಯಾತನಾಗಿದ್ದನು. ನೆರೆಹೊರೆಯಲ್ಲಿ ಅಗತ್ಯವಿದ್ದ ತಾಯಂದಿರಿಗೆಲ್ಲ, ಅವರ ಕಂದಮ್ಮಗಳಿಗೆ ಬೆಚ್ಚನೆಯ ಬಟ್ಟೆ ಹಂಚುತ್ತಿದ್ದ. ಇನ್ನುಳಿದ ಬಡವರಿಗೆ, ಇದ್ದಲು, ಹಾಗೂ ಮಾಂಸವನ್ನು ಕೊಡಿಸುತ್ತಿದ್ದನು. ವಾರಕ್ಕೊಮ್ಮೆ ತನ್ನ ಮನೆಗೆ, ನಾಲ್ವತ್ತು ಬಡಮಕ್ಕಳನ್ನು ಕರೆಸಿ ಊಟ ಬಡಿಸುತ್ತಿದ್ದ. ತನ್ನ ಜೀವಮಾನವೆಲ್ಲ ನೇರ, ಪ್ರಾಮಾಣಿಕ, ನ್ಯಾಯಪರ, ಉಲಕೋಚಿ ಸ್ವಭಾವದ ವಿಕ್ಟರನಿಗೆ, ರಾಜಕೀಯದ ಕುಟಿಲ ಅರ್ಥವೆ ಆಗುತ್ತಿದ್ದಿಲ್ಲ. 1848ರಲ್ಲಿ ಆತ ಕಾನ್ಸರ್ವೇಟದವನಾಗಿ, ಫ್ರಾನ್ಸಿನ, ರಾಷ್ಟ್ರೀಯ ಅಸೆಂಬ್ಲಿಗೆ ಆರಿಸಿ ಬಂದಾಗ, ಪ್ಯಾರಿಸ್, ರಕ್ತಕ್ರಾಂತಿಯ, ಮಡುವಿನಲ್ಲಿ ಸಿಲುಕಿತ್ತು. ''ನಾನು ಬಲಾಢ್ಯರ ವಿರುದ್ಧ, ದುರ್ಬಲರ ಪರವಾಗಿದ್ದೇನೆ ಹಾಗೂ ಅರಾಜಕತೆಯ ವಿರುದ್ಧ, ವ್ಯವಸ್ಥೆಯ ಪರವಾಗಿದ್ದೇನೆ,'' ಎಂದು ಸಾರಿ, ಕಾನ್ಸರ್ವೇಟಿವ್ ಹಾಗು ಎಡಪಂಥೀಯರನ್ನೂ ಅಂಜಿಸಿದ್ದ. ಆದರೆ ಜ.ಚೇನ್ ಬಾವ್ಯೆಸಟ ಕಾವನಾಕ, ನಿರ್ದಯವಾಗಿ ಬಂಡಾಯ ಹತ್ತಿಕ್ಕಿದಾಗ, ಹ್ಯೂಗೋ ರಾಜಕೀಯ ಕೈದಿಗಳ ಪರವಾಗಿದ್ದ. ಆತ ಪತ್ರಿಕಾ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾದಾಗ ಆಕ್ಷೇಪಿಸಿದ. ತರುವಾಯದ ದಿನಗಳಲ್ಲಿ, ಆತ, ಬಡತನದ ವಿರುದ್ಧ ಹೋರಾಡಿದನು. ಪ್ಯಾರಿಸ್ಸಿನಲ್ಲೂ ಉಳಿದ ನಗರಗಳಲ್ಲೂ, ಕೊಳೆಗೇರಿಗಳಿಗೆ ಸ್ವತಃ ಹೋಗಿ, ಬೇಕು ಬೇಡ ವಿಚಾರಿಸಿದ. ಮತದಾನದ ಹಕ್ಕುಗಳನ್ನು ನಿರ್ಬಂಧಿಸಲು ಯತ್ನಿಸಿದಾಗ, ವಿಕ್ಟರ್, ಸಾರ್ವತ್ರಿಕ ಮತದಾನದ ಪರವಾಗಿ ಧ್ವನಿಯೆತ್ತಿದ. ದೈಹಿಕ ಶಿಕ್ಷೆಯನ್ನೂ, ದೇಶಭ್ರಷ್ಟಗೊಳಿಸುವುದನ್ನೂ ಅವನು ವಿರೋಧಿಸಿದನು. ಆಗ ಆತನಿಗೆ ಟಿಕೆಟು ನೀಡಿದ ಪಕ್ಷವೇ, ಅವನಿಗೆ ಇನ್ನೊಮ್ಮೆ ಟಿಕೆಟ ನೀಡಲು ನಿರಾಕರಿಸಿತು.

ಮೊದಮೊದಲು ರಾಯಲಿಸ್ಟ ಇದ್ದ ವಿಕ್ಟರ್ ಹ್ಯೂಗೋ, ಮುಂದೆ ರಿಪಬ್ಲಿಕನ್ ಆದನಲ್ಲದೆ, 1851ರ ಡಿಸೆಂಬರಿನಲ್ಲಿ ರಾಯಲಿಸ್ಟ, ಸಂಚು ಯಶಸ್ವಿಯಾದಾಗ ಹ್ಯೂಗೋ ಪ್ಯಾರಿಸ್ಸನ್ನೇ ತೊರೆದು ಭೂಗತನಾದನು. ಅವನನ್ನು ಸೆರೆಹಿಡಿದು, ಗುಂಡಿಕ್ಕಿ ಕೊಲ್ಲುವ ಭಯವೂ ಇತ್ತು. ಮುಂದೆ 19 ವರ್ಷ ಆತ ಅಜ್ಞಾತ ವಾಸದಲ್ಲಿರಬೇಕಾಯಿತು. ಇದು ತನ್ನ ರಾಜಕೀಯ ನಂಬಿಕೆಗೆ ಆತ ಕೊಡಬೇಕಾದ ದಂಡವಾಗಿತ್ತು. ಮೊದಲು ಬೆಲ್ಜಿಯಮ್ಮಿನಲ್ಲಿ ತರುವಾಯ, ಜೆರ್ಸಿದ್ವೀಪ, ಕೊನೆಗೆ ಗೆರ್ನಸಿಯಲ್ಲಿ, ಅಜ್ಞಾತನಾಗಿದ್ದರೂ, ಅದೇನೂ ಅವನನ್ನು ಸುಮ್ಮನಾಗಿಸಲಿಲ್ಲ. ಎಂದಿಗೂ ಆತ ಮಾನವ ಹಕ್ಕುಗಳು, ಹಾಗು ಸ್ವಾತಂತ್ರ್ಯದ ಪರವಾಗಿಯೇ ದನಿಯೆತ್ತಿದ. ಅವನ ಪ್ರಚಾರ ಪುಸ್ತಕಗಳಂತೂ, ಅವನಿಗೆ ರಾಜಕೀಯ ಸ್ಥಾನಮಾನ ತಂದಿತ್ತವು. ಕ್ರಮೇಣ ಅವನು ಪ್ರಗತಿಯ ಪುರೋಹಿತರಿಗೆಲ್ಲ, ವಿವೇಕದ ಧ್ವನಿಯಾದನು. ಆಡಿಲೆ ಎಷ್ಟು ಬೇಡವೆಂದರೂ ಹ್ಯೂಗೋ ಗೆರ್ನಸಿ ದ್ವೀಪದಲ್ಲಿ ಜಮೀನು ಖರೀದಿಸಿ ಅಲ್ಲೇ ಮನೆ ಕಟ್ಟಿ ನೆಲೆಸಿದ. ಕವಿ ಹ್ಯೂಗೋ, ಬೆಳಗಿಡೀ, ತನ್ನ ನಿವಾಸದ ಮೇಲಿನ ಕೋಣೆಯಲ್ಲಿ ಕೂತು ಬರೆಯುತ್ತಿದ್ದನು. ಮಧ್ಯಾಹ್ನ ಜ್ಯೂಲಿಯೆಟ್ ಜತೆ ಓಡಾಡುತ್ತಿದ್ದನು. ಆಕೆಗೂ ಪಕ್ಕದಲ್ಲೆ ಒಂದು ಮನೆ ಕಟ್ಟಿಸಿ ಕೊಟ್ಟಿದ್ದನು. ಮತ್ತು ಸಂಜೆಗಳನ್ನು ಉಳಿದ ರಾಜಕೀಯ

ನಿರಾಶ್ರಿತರೊಡನೆ, ಇಸ್ಪೆಟಿನಲ್ಲೂ ಆಟಗಳಲ್ಲೂ ಕಳೆಯುತ್ತಿದ್ದನು. ಫ್ರಾನ್ಸಿನಿಂದ ಬರುತ್ತಿದ್ದ ಸಂದರ್ಶಕರನ್ನೂ ಆಗಾಗ ಭೇಟಿ ಮಾಡುತ್ತಿದ್ದ.

1870, ಸಪ್ಟಂಬರ್ 5ರಂದು 3ನೆ ರಿಪಬ್ಲಿಕ್ ಘೋಷಣೆ ಆದಾಗ, ಹ್ಯೂಗೋ ತಾಯ್ನಾಡಿಗೆ ಮರಳಿದ. ತನ್ನನ್ನು ಜನ ಗುರುತಿಸಿಯಾರು ಎಂದು ಅಂಜಿ, ಫ್ರಾನ್ಸ್ ತೊರೆದವನಿಗೆ, ಈಗ ತನ್ನನ್ನು ನೋಡಲು ಅಸಂಖ್ಯ ಜನ ಕಾದಿರುವರೆಂದು ತಿಳಿದಿದ್ದ. ಅವನಿದ್ದ ಗಾಡಿ, ಪ್ಯಾರಿಸ್ ಸ್ಟೇಶನ್ನಿನಲ್ಲಿ ಬಂದಾಗ ಜನರು ಅವನ ಹಾಡುಗಳನ್ನು ಹಾಡಿದರು. ಕಣ್ತುಂಬ ನೀರು ತಂದ ಹ್ಯೂಗೋ ಹೇಳಿದ, ''ಹತ್ತೊಂಬತ್ತು ವರ್ಷಗಳ ಅಜ್ಞಾತವಾಸದ ನೋವನ್ನು ಈ ಒಂದು ಗಂಟೆಯಲ್ಲೇ ನೀವು ಕರಗಿಸಿಬಿಟ್ಟಿರಿ.''

ವಯಸ್ಸಾಗುತ್ತಿದ್ದ ಕವಿಗೆ, ಈಗ ದುಃಖಗಳೂ ಮುತ್ತಿಕೊಂಡವು. ಅವನ ಮೊದಲನೆಯ ಮಗುವಿದ್ದಾಗಲೇ ತೀರಿಕೊಂಡಿತು. ಅವನ ಮಗಳು, ಲಿಯೊಪೊಲ್ಡೀನೆ, 19ನೆ ವಯಸ್ಸಿನಲ್ಲೇ ಮುಳುಗಿ ಸತ್ತಳು. ಅವನ ಹೆಂಡತಿ ಆಡಿಲ್ 1868ರಲ್ಲಿ ಕಣ್ಮುಚ್ಚಿದಳು. ಮೊಮ್ಮಗ ಚಾರ್ಲ್ಸ ಕೂಡ ತೀರಿಕೊಂಡನು. ಅವನ ಇಬ್ಬರು ಮಕ್ಕಳು, ಚಾರ್ಲ್ಸ, ಮತ್ತು ಫ್ರಾಂಕೂಯ್ ವಿಕ್ಟರ ಕೆಲ ತಿಂಗಳುಗಳಲ್ಲೆ ಮೃತರಾದರು. ಮಗಳು ಅಡಿಲೆ, ಐದು ಮಕ್ಕಳಲ್ಲಿ ಉಳಿದಾಕೆ ಅವಳೊಬ್ಬಳೆ. ಅರ್ಧ ಹುಚ್ಚಿಯಾಗಿ ಮುಂದೆ ಆಸ್ಪತ್ರೆಯಲ್ಲೆ ಅವಳನ್ನೂ ಸೇರಿಸಬೇಕಾಯಿತು. ''ನಾನು ಆತ್ಮದಲ್ಲಿ ವಿಶ್ವಾಸ ಹೊಂದಿರಲಿಲ್ಲವಾದರೆ ಇನ್ನೊಂದು ಕ್ಷಣವೂ ಬದುಕಿರುತ್ತಿದ್ದಿಲ್ಲ,'' ಎಂದಿದ್ದಾನೆ ಆತ.

ಅವನ ಬಳಿ, ಜ್ಯೂಲಿಯಟ್ ಹಾಗೂ, ಮೊಮ್ಮಕ್ಕಳು, ಜೇನ ಹಾಗು ಚಾರ್ಲ್ಸ, ಅವನ ಮುಪ್ಪಿನಲ್ಲಿ ಸಂತೈಸುವ ಸಂಗಾತಿಗಳಾಗಿದ್ದರು. ವಿಕ್ಟರ್ ಹ್ಯೂಗೋ ತನ್ನ 79ನೆ ಹುಟ್ಟು ಹಬ್ಬ ಆಚರಿಸಿದಾಗ, ಅವರು ಅವನ ಬಳಿಯಲ್ಲೆ ಇದ್ದರು. ಫ್ರಾನ್ಸಿನ ಪ್ರಧಾನಿಯಲ್ಲದೆ ಮುಖ್ಯನಗರಗಳಿಂದ ಆಯ್ದ ನಿಯೋಗಗಳು ಅವನನ್ನು ಅಭಿನಂದಿಸಲು ಬಂದಿದ್ದವು. ಆರು ಲಕ್ಷ ಜನ ಅವನ ಮನೆಯ ಬಳಿಯಿಂದ ಶಿಸ್ತಿನ ಕವಾಯತ್ತಿನಲ್ಲಿ ಸಾಗಿಹೋದರು. 21 ಮೇ, 1885ರಂದು, ವಿಕ್ಟರ್ ಹ್ಯೂಗೋ, ಮೊಮ್ಮಕ್ಕಳನ್ನು ತನ್ನ ಪ್ಯಾರಿಸ್ಸಿನ ಮನೆಗೆ ಕರೆಸಿಕೊಂಡನು. ಮುದುಕ ಅವರನ್ನು ಮುದ್ದಿಸಿ ಹೇಳಿದನು, ''ಸುಖಿಯಾಗಿರಿ; ನನ್ನ ನೆನಪಿರಲಿ ಹಾಗೂ ನನ್ನನ್ನು ಪ್ರೀತಿಸಿರಿ.'' ಮರುದಿನ ಮಧ್ಯಾಹ್ನವೇ ಫ್ರಾನ್ಸಿನ ಮಹಾಕವಿ ಕೊನೆಯುಸಿರೆಳೆದ. ಆತನ ಕೊನೆಯ ಮಾತುಗಳು: ''ನನಗೆ ಕಪ್ಪಾದ ಬೆಳಕು ಕಾಣುತ್ತಿದೆ.''

ಐವತ್ತೆರಡು ವರ್ಷಗಳ ತರುವಾಯ, ಸ್ಪೇನಿನ ಅಂತರ್‌ಯುದ್ಧದಲ್ಲಿ, ಫ್ರಾಂಕೊನ ವಿರುದ್ಧ ಹೋರಾಡುತ್ತಿದ್ದ ಯೋಧರ ಚೀಲಗಳಲ್ಲಿ 'ಲ ಮಿಸರೆಬಲ'ದ ಪ್ರತಿಗಳಿದ್ದುದು ಕಂಡುಬಂತು. ಎರಡನೆ ಮಹಾಯುದ್ಧದ ಕಾಲಕ್ಕೆ, ಫಾಸಿಸ್ಟ್ ವಿರೋಧಿ ಫ್ರೆಂಚ್ ಕೂಟ ಯೋಧರು ವಿಕ್ಟರ್ ಹ್ಯೂಗೋ ಗುಂಪೆಂದೆ ತಮ್ಮನ್ನು ಕರೆದುಕೊಂಡಿದ್ದರು. 1944ರಲ್ಲಿ ಚಾರ್ಲ್ಸ ಡಿಗಾಲ್ ಫ್ರೆಂಚ್ ಮಹಿಳೆಯರಿಗೆ, ಮತದಾನದ ಹಕ್ಕು ನೀಡುವಾಗ, 1872ರಷ್ಟು ಮೊದಲೆ, ವಿಕ್ಟರ್ ಹ್ಯೂಗೋ ಆ ಬಗ್ಗೆ ಹೋರಾಡಿದ್ದನ್ನು ನೆನಪಿಸಿಕೊಟ್ಟರು. 1981ರಲ್ಲಿ ಫ್ರಾನ್ಸಿನಲ್ಲಿ ಮರಣದಂಡನೆ ರದ್ದು ಪಡಿಸಿದಾಗಲೂ ವಿಕ್ಟರ ಹ್ಯೂಗೋ ಆ ಬಗ್ಗೆ ಕಂಡ ಕನಸು ನನಸಾಯಿತು. ನೂರುವರ್ಷಗಳ ನಂತರವೂ, ವಿಕ್ಟರ್ ಹ್ಯೂಗೋ ನಮ್ಮ ಕಾಲದವನಂತೆ ಅನಿಸುವುದೇ, ಅವನ ಪ್ರತಿಭೆಯ ಮುಖ್ಯ ಲಕ್ಷಣವಾಗಿದೆ.

# ಚಂದ್ರನಿಗೆ ಭ್ರಾತೃಯೋಗ

*– ಕರಿಗಿರಿ ನರಸಿಂಹಮೂರ್ತಿ*

ನಮ್ಮ ಚಂದ್ರ ಭೂಮಿಗೆ ಮೂರು ಲಕ್ಷ ಕಿಲೋ ಮೀಟರ್ ದೂರದಲ್ಲಿದ್ದಾನೆ. ಅವನಿಗೆ ಈಗ ಭ್ರಾತೃ ಲಾಭವಾಗುವ ನಿರೀಕ್ಷೆ ಇದೆ! ಹಾಗಾದರೆ, ಚಂದ್ರನ ತಾಯಿಯು ಈಗ ಗರ್ಭವತಿಯಾಗಿದ್ದಾಳೆಯೆ? ಎಂಬುದಾಗಿ ನೀವು ಪ್ರಶ್ನಿಸಿದರೆ, ''ಹೌದು!'' ಎಂಬುದಾಗಿ ಆಧುನಿಕ ಖಗೋಳ ವಿಜ್ಞಾನದ ಉತ್ತರವನ್ನು ನೀವು ಪಡೆಯುತ್ತೀರಿ!

ಚಂದ್ರನು ಭೂಮಿಯ ಉಪಗ್ರಹವಾಗಿರುವುದರಿಂದ, ಭೂಮಿಯ ಆಕರ್ಷಣ ಶಕ್ತಿಯು ಚಂದ್ರನನ್ನು ಹಿಡಿದುಕೊಂಡಿರುತ್ತದೆ. ಚಂದ್ರನು ಭೂಮಿಯ ಸುತ್ತಲೂ ಸುತ್ತುತ್ತಾ ಇದ್ದಾನೆ. ಅವನು ಪಶ್ಚಿಮದಿಂದ ಪೂರ್ವಕ್ಕೆ ತನ್ನ ಕಕ್ಷೆಯ ಮೇಲೆ ಓಡುತ್ತಿದ್ದಾನೆ. ಇದು ಎಲ್ಲರೂ ಬಲ್ಲ ವಿಷಯ.

ಚಂದ್ರ ಕಕ್ಷೆಯಲ್ಲಿ ಎರಡು ಸ್ಥಳಗಳಲ್ಲಿ ಎರಡು ''ಚಂದ್ರನಂತಹ'' ಉಪಗ್ರಹಗಳು ''ಗರ್ಭಾವಸ್ಥೆ''ಯಲ್ಲಿ ಇರುತ್ತವೆ ಎಂಬುದಾಗಿ ಆಧುನಿಕ ಚಂದ್ರಕಕ್ಷಾ ವಿಮರ್ಶಕರು ಸಂಶೋಧನೆ, ಪರಿಶೋಧನೆಗಳನ್ನು ಮಾಡಿ ಕಂಡುಹಿಡಿದಿದ್ದಾರೆ.

ಸೂರ್ಯ, ಚಂದ್ರ ಮತ್ತು ಭೂಮಿಯ ಪರಸ್ಪರ ಗುರುತ್ವಾಕರ್ಷಣ ಶಕ್ತಿಗಳು ಚಂದ್ರನ ಕಕ್ಷೆಯ ಮೇಲೆ ಎರಡು ಸ್ಥಳಗಳಲ್ಲಿ ''ಸಮಶಕ್ತಿತೋಲನಾ ಸ್ಥಿತಿ''ಯಲ್ಲಿ ಸಂಧಿಸುತ್ತವೆ. ಆದುದರಿಂದ ಆ ಸ್ಥಳಗಳಲ್ಲಿ ವಿಶ್ವಾಣುಗಳ ಧೂಳುಗಳು (Cosmic dust) ಕೇಂದ್ರೀಕೃತವಾಗಿ ''ಭ್ರೂಣಾವಸ್ಥೆ''ಯಲ್ಲಿ ಇದ್ದು, ಮುಂದೆ ಸಾವಿರಾರು ಅಥವಾ ಲಕ್ಷಾಂತರ ವರ್ಷಗಳಲ್ಲಿ ಅವುಗಳು ಉಪಗ್ರಹಗಳಾಗಬಹುದಾದ ನಿರೀಕ್ಷೆಯಿದೆ.

ವಿಶ್ವಾಣುಗಳ ಧೂಳುಗಳು ಅನಂತ ಆಕಾಶದಲ್ಲಿ ತೇಲಿಬರುತ್ತಾ ಇರುವಾಗ, ಯಾವ ಗ್ರಹ ಅಥವಾ ನಕ್ಷತ್ರದ ಗುರುತ್ವಾಕರ್ಷಣದ ವ್ಯಾಪ್ತಿಗೆ ಬಂದರೂ, ಅವುಗಳನ್ನು ಆ ಗ್ರಹ ಅಥವಾ ಆ ನಕ್ಷತ್ರ ಸೆಳೆದುಕೊಂಡು ತನ್ನ ಹೊಟ್ಟೆಗೆ ಸೇರಿಸಿಕೊಂಡುಬಿಡುತ್ತದೆ !

ಅದೇ ವಿಶ್ವಾಣುಗಳ ಧೂಳುಗಳು ಮೂರು (ಗ್ರಹಗಳ) ಗುರುತ್ವಾಕರ್ಷಣ ಶಕ್ತಿಗಳ ಸಮತೋಲನ ಸ್ಥಳಕ್ಕೆ ಬಂದಾಗ ಅವುಗಳು ಅಲ್ಲಿಯೇ ನಿಂತು ಪರಸ್ಪರ ಸಂಗಮವಾಗಿ ಬೆಳೆಯುತ್ತಾ ಬರುತ್ತವೆ. ''ಇಂತಹ ಎರಡು ಸ್ಥಾನಗಳು ಚಂದ್ರನ ಕಕ್ಷೆಯಲ್ಲಿ ಇರುತ್ತವೆ. ಆ ಸ್ಥಳಗಳಲ್ಲಿ ವಿಶ್ವಾಣುಗಳ ಧೂಳುಗಳು ಸಾವಿರಾರು ವರ್ಷದಿಂದ ಬೆಳೆಯುತ್ತಿವೆ. ಎಂಬುದಾಗಿ ಆಧುನಿಕ, ಚಂದ್ರಕಕ್ಷಾ ವಿಮರ್ಶಕ, ಖಗೋಳ ಶಾಸ್ತ್ರಜ್ಞರು ಕಂಡು ಹಿಡಿದಿರುತ್ತಾರೆ. ''ಚಂದ್ರ ಕಕ್ಷೆಯಲ್ಲಿ ಚಂದ್ರನಿಂದ ಪೂರ್ವಕ್ಕೂ ಪಶ್ಚಿಮಕ್ಕೂ ಅರವತ್ತು, ಅರವತ್ತು ಅಂಶಗಳ ಅಂತರದಲ್ಲಿ ಇರುವ ಈ ಭ್ರೂಣಗಳನ್ನು ನಾವು ಬರಿಗಣ್ಣಿನಿಂದಲೇ ನೋಡಬಹುದಾಗಿದೆ'' ಎಂಬುದಾಗಿ ಅವರು ಹೇಳುತ್ತಾರೆ.

ಈ ಭ್ರೂಣಗಳು ಈಗ ವೃತ್ತಾಕಾರವಾಗಿ ಒಂದು ಕೇಂದ್ರದ ಸುತ್ತಲೂ ಬೆಳೆಯುತ್ತಾ ಅಥವಾ ಕೇವಲ ಮೇಘಾಕಾರವಾಗಿ ಒಂದು

ಪ್ರತಿ ಹುಣ್ಣಿಮೆಯೂ ರಾತ್ರಿ 12 ಗಂಟೆಯಲ್ಲಿ ಈ ಯೋಗವು ಬರುವುದನ್ನು ಎಲ್ಲರೂ ವೀಕ್ಷಿಸಬಹುದು.




★ "ಚಂದ್ರಾಗ್ರಜ" ಎಂದರೆ ಚಂದ್ರನಿಗಿಂತಲೂ ನಾಲ್ಕು ಗಂಟೆ ಮುಂಚಿತವಾಗಿ ಪೂರ್ವಕ್ಷಿತಿಜದಲ್ಲಿ ಉದಯಿಸುವ "ಭ್ರೂಣ"ಇರುವ ಸ್ಥಳ.

★ "ಚಂದ್ರಾನುಜ" ಎಂದರೆ ಚಂದ್ರೋದಯವಾದ ಮೇಲೆ ನಾಲ್ಕು ಗಂಟೆ ಕಳೆಯುವಾಗ ಪೂರ್ವ ದಿಕ್ಕಿನಲ್ಲಿ ಉದಯಿಸುವ ಎರಡನೆಯ "ಭ್ರೂಣ"ಇರುವ ಸ್ಥಳ.

ಗೂಡುತ್ತಾ ಬಂದಿರುತ್ತವೆ. ಅವುಗಳ ಕೇಂದ್ರದಲ್ಲಿ "ಸ್ವಗುರುತ್ವಾಕರ್ಷಣ" ಕ್ರಿಯೆಯು ಪ್ರಾರಂಭವಾದ ನಂತರ ಅವುಗಳು ವೃತ್ತಾಕಾರವನ್ನು ಪಡೆದು ಕೇಂದ್ರದ ಸುತ್ತಲೂ ತಿರುಗಲು ಪ್ರಾರಂಭಿಸುತ್ತವೆ. ಚಂದ್ರ ಕಕ್ಷೆಯಲ್ಲಿ ಚಂದ್ರನ ಹಿಂಭಾಗ ಮುಂಭಾಗಗಳಲ್ಲಿ ಅರವತ್ತು ಅಂಶಗಳ ಅಂತರದಲ್ಲಿ ಎಂಬುದಾಗಿ ಹೇಳಿದರೆ, ಚಂದ್ರ ಕಕ್ಷೆಯಲ್ಲಿ ಚಂದ್ರನ ವೇಗವನ್ನು ಅನುಸರಿಸಿಕೊಂಡು ಈ ಭ್ರೂಣಗಳೆರಡೂ ಭೂಮಿಯ ಸುತ್ತಲೂ ತಿರುಗುತ್ತಿವೆ ಎಂಬುದಾಗಿ ಸಹಜವಾಗಿಯೇ ಎಲ್ಲರಿಗೂ ಅರ್ಥವಾಗುತ್ತದೆ.

ಚಂದ್ರಕಕ್ಷಾ ಮೀಮಾಂಸಕರಾಗಿದ್ದ ಹಿಂದೂ ಖಗೋಳ ವಿಜ್ಞಾನಿಗಳು ಪರಿವೀಕ್ಷಣೆಗಳನ್ನು ನಡೆಸಿ ಸಾವಿರಾರು ವರ್ಷಗಳ ಹಿಂದೆಯೇ ಕೆಲವು ವಿಷಯಗಳನ್ನು ಕಂಡು ಹಿಡಿದಿರುತ್ತಾರೆ. ಅವುಗಳ ಒಂದು ಪಟ್ಟಿಯನ್ನು ನಾವು ಈಗ ವಾಚಕರಿಗೆ ಕೊಡುತ್ತಿದ್ದೇವೆ.

1. ಚಂದ್ರಕಕ್ಷೆಯಲ್ಲಿ ಚಂದ್ರನಿಗೆ ಪೂರ್ವ ದಿಕ್ಕಿನಲ್ಲಿ ಎಂಬತ್ತು ಅಂಶಗಳ ಅಂತರದಲ್ಲಿ "ನೈಧನ ತಾರಾ" ವ್ಯೂಹವು ಇರುತ್ತದೆ.

2. ಚಂದ್ರಕಕ್ಷೆಯಲ್ಲಿ ಚಂದ್ರನಿಗೆ ಪಶ್ಚಿಮ ದಿಕ್ಕಿನಲ್ಲಿ ಎಪ್ಪತ್ತು ಅಂಶಗಳ ಅಂತರದಲ್ಲಿ "ವೈನಾಶಕ" ತಾರಾ ವ್ಯೂಹವು ಇರುತ್ತದೆ.

3. ಚಂದ್ರನ ಕಕ್ಷೆಯಲ್ಲಿ ವಿಷ ಮತ್ತು ಅಮೃತ ಸ್ಥಾನಗಳು ಇರುತ್ತವೆ.

4. ಚಂದ್ರನ ಕಕ್ಷೆಯಲ್ಲಿ "ಉಡುಕೂಪ" "ತಿಥಿಕೂಪ"ಗಳೆಂಬ ನಿಪಾಕ ಸ್ಥಳಗಳು ಇರುತ್ತವೆ.

5. ಭೂಮಿಯಿಂದ ಚಂದ್ರಕಕ್ಷೆಯವರೆಗೂ ಇರುವ ಗೋಲಾಕಾರ ಪ್ರದೇಶದಲ್ಲಿ ಸೋಮಗೋಳವೆಂಬ ರಸವರ್ಧಕಕ್ರಿಯೆ ನಡೆಯುತ್ತಿರುವ "ಜೀವಧಾನಿ" ಇರುತ್ತದೆ. ●


ಚಿಕ್ಕ ಪರೀಕ್ಷೆ


OPERATION THEATRE
ಆಪರೇಶನ್ ಸಕ್ಸೆಸ್.....
ಧನ್ಯವಾದಗಳು ಡಾಕ್ಟರ್
ನನ್ನ ಮಗನ ಪ್ರಾಣ
ಉಳಿಸಿದಿರಿ.

ವೀರಣ್ಣ. ಗಾಂಜಿ


OPERATION THEAT
!?
..... ಆದರೆ ಇನ್ನೂ ಒಂದು ..
ಚಿಕ್ಕ ಪರೀಕ್ಷೆ ಇದೆ.


OPERATION THEATR
ಆಪರೇಶನ್ ಸಮಯದಲ್ಲಿ
ಹೊಟ್ಟೆಯೊಳಗೆ ಸಲಕರಣೆಗಳೇನಾದರೂ
ಉಳಿದಿವೆಯೆ? .... ಅಂತ ಪರೀಕ್ಷಿಸಬೇಕು.

# ಸಹ ಪ್ರಯಾಣಿಕರು

ಮೂಲ: ರಸ್ಕಿನ್ ಬಾಂಡ್
ಕನ್ನಡಕ್ಕೆ: ವೆಂಕಟೇಶ ಇಬ್ರಾಹಿಂಪೂರ

ರೋಹನಾ ಬರುವವರೆಗೂ ಟ್ರೇನಿನ ಕಂಪಾರ್ಟಮೆಂಟಿನಲ್ಲಿ ನಾನೊಬ್ಬನೇ ಇದ್ದೆ. ಆ ಸ್ಟೇಶನ್ ಬರುತ್ತಲೇ ಸ್ಟೇಶನ್ನಿನಲ್ಲಿ ಒಬ್ಬ ಹುಡುಗಿ ಹತ್ತಿದಳು. ಅವಳೊಂದಿಗಿದ್ದವರು ಬಹುಶಃ ಅವಳ ಪಾಲಕರಿರಬೇಕು. ಅವರು ಅವಳ ಪ್ರಯಾಣದ ಬಗ್ಗೆ ಬಹಳಷ್ಟು ಕಾತರರಾಗಿದ್ದಂತೆ ಕಂಡಿತು. ಅವರಲ್ಲಿ ಒಬ್ಬ ಹೆಂಗಸು ಸಾಮಾನುಗಳನ್ನು ಇಟ್ಟುಕೊಳ್ಳುವುದರ ಬಗ್ಗೆ, ಕಿಟಕಿಯಿಂದ ಹೊರಗೆ ತಲೆ ಹಾಕದಿರುವುದರ ಬಗ್ಗೆ, ಅಪರಿಚಿತರ ಹತ್ತಿರ ಮಾತನಾಡದಿರುವುದರ ಬಗ್ಗೆ ಹೇಳುತ್ತಲೇ ಇದ್ದಳು.

ನಾನು ಕುರುಡನಾದ್ದರಿಂದ ಆ ಹುಡುಗಿ ಹೇಗಿದ್ದಳೆಂದು ಬಣ್ಣಿಸಲಾರೆ. ಆದರೆ ಅವಳ ಚಪ್ಪಲಿಗಳು ಹಿಮ್ಮಡಕ್ಕೆ ಬಡಿಯುವ ಸದ್ದನ್ನು ಕೇಳಿ ಅವಳು ಚಪ್ಪಲಿಗಳನ್ನು ಹಾಕಿದ್ದಾಳೆಂದು ಊಹಿಸಿದೆ. ಜೊತೆಗೆ ಅವಳ ಧ್ವನಿ ಮಾತ್ರ ನನ್ನನ್ನು ಬಹಳ ಸೆಳೆಯಿತು.

ಟ್ರೇನು ಸ್ಟೇಶನ್ ಬಿಡುತ್ತಿದ್ದಂತೆ ಕೇಳಿದೆ, ''ನೀವು ಡೆಹ್ರಾಡೂನಿಗೆ ಬರುತ್ತಿದ್ದೀರಾ?''

ಬಹುಶಃ ನಾನು ಮೂಲೆಯ ಕತ್ತಲಲ್ಲಿ ಕುಳಿತುಕೊಂಡಿರಬೇಕು. ಏಕೆಂದರೆ ನನ್ನ ಧ್ವನಿ ಅವಳನ್ನು ನಡುಗಿಸಿದಂತೆ ತೋರಿತು.

''ಈ ಕಂಪಾರ್ಟಮೆಂಟಿನಲ್ಲಿ ನಾನೊಬ್ಬಳೇ ಇರುವುದು ಎಂದುಕೊಂಡಿದ್ದೆ,'' ಎಂದು ಆಕೆ ಸ್ವಲ್ಪ ಆಶ್ಚರ್ಯಚಕಿತ ಧ್ವನಿಯಿಂದ ಹೇಳಿದಳು.

ಕೆಲವೊಮ್ಮೆ ಒಳ್ಳೆಯ ದೃಷ್ಟಿ ಇರುವ ಜನರು ತಮ್ಮ ಎದುರಿಗೆ ಏನಿರುತ್ತದೆಂಬುದನ್ನು ತಿಳಿಯುವ ಗೋಜಿಗೂ ಹೋಗುವುದಿಲ್ಲ. ನಿಜ ಹೇಳಬೇಕೆಂದರೆ ಕಣ್ಣಿದ್ದವರಿಗಿಂತ ಕುರುಡರೇ ತಮ್ಮ ಸುತ್ತಲಿನ ಪ್ರಪಂಚವನ್ನು ತಮ್ಮ ಉಳಿದ ಇಂದ್ರಿಯಗಳಿಂದ ಹೆಚ್ಚು ಗಮನವಿಟ್ಟು ನೋಡಿರುತ್ತಾರೆ.

''ನಾನು ನಿಮ್ಮನ್ನು ನೋಡಿರಲಿಲ್ಲ. ಆದರೆ ನೀವು ಬರುವ ಸದ್ದು ಮಾತ್ರ ಕೇಳಿದೆ,'' ಎಂದೆ. ನಾನು ಕುರುಡನೆಂದು ಅವಳಿಗೆ ಗೊತ್ತಾಗಕೂಡದೆಂಬ ನನ್ನ ಪ್ರಯತ್ನ ಫಲಕಾರಿಯಾಗಬಲ್ಲದೆ? ಎಂದು

ಸಂದೇಹವಾಯಿತು. ನಾನು ಕುಳಿತಲ್ಲೇ ಕುಳಿತಿದ್ದರೆ ಆ ಫಲ ವಂಚಿಸುವುದರಲ್ಲೇನೂ ಹೆಚ್ಚುಗಾರಿಕೆ ಕಾಣಲಿಲ್ಲ.

''ನೀವು ಎಲ್ಲಿಗೆ ಹೊರಟಿದ್ದೀರಿ? ನಾನಂತೂ ಸಹಾರನಪುರ ಸ್ಟೇಶನ್ನಿನಲ್ಲಿ ಇಳಿಯುತ್ತೇನೆ. ಅಲ್ಲಿ ನಮ್ಮ ಚಿಕ್ಕಮ್ಮ ಕಾಯುತ್ತಿರುತ್ತಾರೆ,'' ಅವಳು ಹೇಳಿದಳು.

ನಾನು ಡೆಹ್ರಾಡೂನಿಗೆ, ನಂತರ ಅಲ್ಲಿಂದ ಮಸ್ಸೂರಿಗೆ ಹೋಗುತ್ತೇನೆಂದು ಉತ್ತರಿಸಿದೆ.

''ಓಹ್, ನೀವು ಬಹಳ ಅದೃಷ್ಟವಂತರು, ನನಗೂ ಮಸ್ಸೂರಿಗೆ ಹೋಗುವುದೆಂದರೆ ಬಹಳ ಇಷ್ಟ. ಅಲ್ಲಿಯ ಬೆಟ್ಟಗಳೆಂದರೆ ನನಗೆ ಪಂಚಪ್ರಾಣ.''

''ಹೌದು, ಅವುಗಳನ್ನು ನೋಡಲು ಇದೇ ಯೋಗ್ಯ ಸಮಯ,'' ನಾನು ಹೇಳಿದೆ. ನನಗೆ ದೃಷ್ಟಿ ಇದ್ದಾಗಿನ ನೆನಪಿನ ಬಲದಿಂದ ಆ ಬೆಟ್ಟಗಳ ಮೇಲಿನ ಹಿಮ, ಅದನ್ನು ಪ್ರತಿಫಲಿಸುವ ಸೂರ್ಯ, ರಾತ್ರಿ ಬೆಂಕಿಯ ಮುಂದೆ ಕುಳಿತು ಬ್ರಾಂಡಿ ಹೀರುವ ದೃಶ್ಯಗಳನ್ನೆಲ್ಲಾ ವರ್ಣಿಸಿದೆ. ಆದರೆ ಈ ಸಮಯದಲ್ಲಿ ಪ್ರವಾಸಿಗಳು ಇರದೇ ದಾರಿಯೆಲ್ಲಾ ಮರುಭೂಮಿಯಂತಾಗಿರುತ್ತದೆ.

ನಾನಾಡಿದುದಕ್ಕೆ ಏನೂ ಪ್ರತಿಕ್ರಿಯಿಸದೇ ಅವಳು ಮೂಕಳಂತೆ ಕುಳಿತಿದ್ದಳು. ಬಹುಶಃ ಅವಳು ನನ್ನನ್ನು ರೋಮ್ಯಾಂಟಿಕ್ ಫೂಲ್ ಎಂದು ತಪ್ಪಾಗಿ ತಿಳಿದಳೋ ಏನೋ.

ನಾನು ಸುಮ್ಮನೆ ಕುಳಿತುಕೊಳ್ಳಲಾರದೇ ''ಹೊರಗೆ ಏನು ಕಾಣಿಸುತ್ತಿದೆ?'' ಎಂದು ಒಂದು ತಪ್ಪು ಪ್ರಶ್ನೆ ಕೇಳಿದೆ. ಆದರೆ ಅವಳಿಗೆ ಅದೊಂದು ವಿಚಿತ್ರ ಪ್ರಶ್ನೆ ಎಂದು ಅನ್ನಿಸಲೇ ಇಲ್ಲ. ನನಗೆ ಕಣ್ಣು ಕಾಣುವುದಿಲ್ಲವೆಂದು ಅವಳಿಗೆ ತಿಳಿದುಬಿಟ್ಟಿತೇನೋ ಎಂದು ಆತಂಕವೆನಿಸಿತು. ಆದರೆ ಅವಳ ಮುಂದಿನ ಪ್ರಶ್ನೆ ನನ್ನ ಸಂದೇಹಕ್ಕೆ ಪರಿಹಾರವಾಯಿತು. ''ನೀವೇ ಕಿಟಕಿಯ ಮೂಲಕ ನೋಡಬಹುದಲ್ಲವೆ?''



ಆಕೆ ಹೇಳುತ್ತಿದ್ದಂತೆ ಬರ್ತಿನಿಂದ ಸರಿಯುತ್ತಾ ಕಿಟಕಿಯ ಪಕ್ಕಕ್ಕೆ ಬಂದು ಹೊರಗಿನದನ್ನೇನೋ ನೋಡುತ್ತಿರುವಂತೆ ನಟಿಸತೊಡಗಿದೆ.

ಟೆಲಿಗ್ರಾಫ್ ಕಂಬಗಳು, ಗಿಡಗಳು, ಹಿಂದೆ ಸಾಗುತ್ತಿರುವ ದೃಶ್ಯ ನನ್ನ ಮನಸ್ಸಿನಲ್ಲಿ ಮೂಡುತ್ತಿರುವಂತೆ ಭಾಸವಾಯಿತು. ಕೇಳಲೇ ಬೇಕೆಂದು ಕೇಳಿದೆ: "ನೀವು ಗಮನಿಸಿದಿರಾ? ನಾವು ಇಲ್ಲಿಯೇ ಕುಳಿತಿದ್ದರೂ ಮರಗಿಡಗಳು ಚಲಿಸುತ್ತಿರುವಂತೆ ಕಾಣುತ್ತದೆಯಲ್ಲವೆ?"

"ಆ ಥರ ಪ್ರತಿಸಲವೂ ಆಗುತ್ತದೆ. ಅದರಲ್ಲೇನು ವಿಶೇಷವಿದೆ?"

ಕಿಟಕಿಯಿಂದ ಮುಖ ತಿರುಗಿಸಿ ಆ ಹುಡುಗಿಯತ್ತ ನೋಡಿದೆ. ನಂತರ ಕ್ಷಣ ಹೊತ್ತು ಇಬ್ಬರೂ ಮಾತನಾಡದೇ ಕುಳಿತೆವು.

"ನಿಮ್ಮ ಮುಖ ತುಂಬಾ ಕುತೂಹಲಕಾರಿಯಾಗಿದೆ" ಮಾತಿನಲ್ಲಿ ಸ್ವಲ್ಪ ಧೈರ್ಯವನ್ನು ತಂದುಕೊಳ್ಳುತ್ತಾ ನುಡಿದೆ. ಕೆಲವು ಹುಡುಗಿಯರು ಹೊಗಳಿಕೆಯನ್ನು ಮೆಚ್ಚುವುದಿಲ್ಲವೆಂದು ತಿಳಿದು ಸ್ವಲ್ಪ ಸುರಕ್ಷಿತವಾಗಿಯೇ ಮಾತನಾಡಿದೆ.

ಆಕೆ "ಹಾಗೆ ಕರೆಸಿಕೊಳ್ಳಲು ನನಗೆ ತುಂಬಾ ಖುಷಿಯಾಗುತ್ತದೆ. ನನ್ನ ಮುಖ ಸುಂದರವಾಗಿದೆಯೆಂದು ಹಲವು ಸಲ ಕೇಳಿ ಬೇಜಾರಾಗಿಬಿಟ್ಟಿದ್ದರಿಂದ ನೀವು ಹೇಳಿದ್ದು ನನಗೆ ಖುಷಿ ತಂದಿತು," ಎಂದಾಕೆ ಆಹ್ಲಾದಕರವಾಗಿ ನಗುತ್ತಾ ಹೇಳಿದಳು.

"ಓಹ್, ನಿನಗೆ ಮೋಹಕವಾದ ಮುಖ ಇದೆಯೇ" ಎಂದು ಮನಸ್ಸಿನಲ್ಲಿಯೇ ಅಂದುಕೊಂಡು "ಸುಂದರವಾದ ಮುಖವು ಕುತೂಹಲಕಾರಿಯೂ ಆಗಿರಬಹುದಲ್ಲವೆ?" ಎಂದು ಗಟ್ಟಿಯಾಗಿ ಅವಳಿಗೆ ಕೇಳುವಂತೆ ಹೇಳಿದೆ.

"ನೀವು ತುಂಬಾ ಚೆನ್ನಾಗಿ ಮಾತನ್ನಾಡುತ್ತೀರಾ. ಆದರೂ ನೀವು ಸ್ವಲ್ಪ ರಿಜರ್ವ್ಡ್ ಥರಾ ಕಾಣಿಸುತ್ತೀರಲ್ಲಾ."



ಅವಳ ಈ ಮಾತಿಗೆ ಉತ್ತರವನ್ನೇನೂ ಕೊಡದೆ ಮಾತಿನ ಜಾಡನ್ನೇ ಬದಲಿಸಿದೆ. "ಇನ್ನು ಸ್ವಲ್ಪ ಸಮಯದಲ್ಲಿ ನಿಮ್ಮ ನಿಲ್ದಾಣ ಬಂದೇ ಬಿಡುತ್ತದೆ."

"ಅಬ್ಬ! ಅಂತೂ ಬಂದೇ ಬಿಟ್ಟಿತೆ! ನನಗಂತೂ ಟ್ರೇನಿನಲ್ಲಿ ಒಂದೆರಡು ಗಂಟೆಗಳಿಗಿಂತ ಹೆಚ್ಚಿಗೆ ಕೂಡ್ರಲೂ ಆಗುವುದಿಲ್ಲ."

ಆದರೆ ನನಗೆ ಮಾತ್ರ ಅವಳ ಪರ್ವತ ಶ್ರೇಣಿಯೋಪಾದಿಯ ವಾಗ್ಝರಿಯನ್ನು ಕೇಳುತ್ತ ಇನ್ನೂ ಬೇಕಾದಷ್ಟು ಸಮಯ ಕಳೆಯಬಲ್ಲೆ ಎನಿಸಿತು. ಅವಳು ಬೇಕಾದರೆ ಟ್ರೇನಿನಿಂದ ಇಳಿದ ತಕ್ಷಣ ನಮ್ಮಿಬ್ಬರ ಈ ಚಿಕ್ಕ ಮಿಲನವನ್ನು ಮರೆಯಬಹುದು. ಆದರೆ ನನಗೆ ಮಾತ್ರ ಈ ನೆನಪು ಪ್ರಯಾಣದುದ್ದಕ್ಕೂ ಅಲ್ಲದೇ ಅದರ ನಂತರದ ಕಾಲದಲ್ಲೂ ಇರಬಲ್ಲದೆನಿಸಿತು.

ರೈಲುಗಾಡಿಯ ಕೂಗು ಕೇಳಿಸಿತು. ಉರುಳುವ ಬಂಡಿಯ ಗಾಲಿಗಳು ತಮ್ಮ ಶಬ್ದ ಮತ್ತು ಲಯವನ್ನು ಬದಲಿಸಿಕೊಂಡವು. ಆ ಹುಡುಗಿ ತನ್ನ ಲಗೇಜುಗಳನ್ನು ಒಂದೆಡೆ ಕೂಡಿಸಲು ಎದ್ದಳು. ನನಗೆ ಆ ಕ್ಷಣದಲ್ಲಿ

ಅವಳು ತನ್ನ ತಲೆಗೂದಲನ್ನು ಎಳೆದು ಕಟ್ಟಿದ್ದಾಳೋ ಅಥವಾ ಬೆನ್ನಿನ ಇಕ್ಕೆಲಗಳಲ್ಲೂ ಹರಡಿಕೊಂಡಿದ್ದಾಳೋ ಅಥವಾ ಸಣ್ಣಗೆ ಬಾಬ್ ಮಾಡಿಸಿಕೊಂಡಿದ್ದಾಳೊ ಎಂದು ತಿಳಿಯುವ ಕುತೂಹಲವಾಯಿತು.

ಟ್ರೇನು ನಿಧಾನವಾಗಿ ನಿಲ್ದಾಣವನ್ನು ಸಮೀಪಿಸಿತು. ಹೊರಗೆ ಕೂಲಿಗಳು, ಪೇಪರ್ ಮಾರುವವರ ಕೂಗಾಟ ಕೇಳಿಸಿತು. ಜೊತೆಗೆ ದೊಡ್ಡ ದನಿಯಲ್ಲಿ ಮಾತನಾಡುವ ಒಬ್ಬ ಹೆಂಗಸಿನ ದನಿಯೂ ನಾವು ಕುಳಿತಿದ್ದ ಬಾಗಿಲ ಹತ್ತಿರ ತೇಲಿಬಂತು. ಬಹುಶಃ ಅದು ಆ ಹುಡುಗಿಯ ಸಂಬಂಧಿಯಿಂದ ಬಂದದ್ದಾಗಿರಬೇಕು.

ಗುಡ್ ಬೈ ಹೇಳುತ್ತ ಹುಡುಗಿ ಬಾಗಿಲತ್ತ ಸಾಗಿದಳು. ನನ್ನ ಹತ್ತಿರ ಬರುತ್ತಿರುವಂತೆ ಅವಳ ಕೂದಲಿನ ಸುವಾಸನೆ ನನ್ನ ಮೂಗಿಗೆ ಬಡಿಯಿತು. ಅವಳ ಕೂದಲುಗಳನ್ನು ಕೈಯಿಂದ ಸವರಬೇಕೆಂದು ಆಸೆಯಾಯಿತು. ಅಷ್ಟರಲ್ಲಿ ಅವಳು ಮುಂದೆ ಸಾಗಿಬಿಟ್ಟಿದ್ದಳು. ಆದರೆ ಅವಳ ಕೂದಲಿನ ಸುವಾಸನೆ ಮಾತ್ರ ಅವಳು ನಿಂತಿದ್ದ ಸ್ಥಳದಿಂದ ಬರುತ್ತಲೇ ಇತ್ತು.

ಬೋಗಿಯ ಬಾಗಿಲ ಹತ್ತಿರ ಸ್ವಲ್ಪ ಗೊಂದಲವೆದ್ದಿತು. ರೈಲಿನೊಳಗೆ ಬರುತ್ತಿದ್ದ ವ್ಯಕ್ತಿಯೊಬ್ಬ ಯಾರಿಂದಲೋ ಕ್ಷಮಾಪಣೆ ಕೇಳಿದ ನಂತರ ಬೋಗಿಯ ಬಾಗಿಲು ಮುಚ್ಚಿ ಹೊರಗಿನ ಸಂಪರ್ಕ ಕಡಿದುಕೊಂಡಿತು. ಮತ್ತೆ ನನ್ನ ಬರ್ತಗೆ ಹಿಂದಿರುಗಿದೆ.

ಗಾರ್ಡ್ ಶೀಟಿ ಊದುತ್ತಲೇ ರೈಲು ಕ್ರಮೇಣ ತನ್ನ ವೇಗವನ್ನು ಹೆಚ್ಚಿಸಿಕೊಳ್ಳುತ್ತ ಅದರ ಗಾಲಿಗಳು ಮತ್ತೆ ತಮ್ಮ ಲಯಬದ್ಧತೆಯನ್ನು ಪಡೆದವು.

ನಿಧಾನವಾಗಿ ಕಿಟಕಿಯ ಬಳಿ ಸರಿದು, ನನಗೆ ಸದಾಕಾಲವೂ ಕತ್ತಲೆ ಎನಿಸಿದ ಬೆಳಕಿನ ಪ್ರಪಂಚವನ್ನು ನೋಡುತ್ತ ಕುಳಿತೆ. ಇದೀಗ ಬಂದ ಸಹಪ್ರಯಾಣಿಕನೊಂದಿಗೆ ಮಾತು ಬೆಳೆಸುವ ಅವಕಾಶ ಸಿಕ್ಕಿತು.

''ಕ್ಷಮಿಸಿ, ಇದೀಗ ಇಳಿದ ಪ್ರಯಾಣಿಕಳಷ್ಟು ನಿಮ್ಮೊಂದಿಗೆ ಬೆರೆಯಲಾರೆ'' ಎಂದೆನ್ನುತ್ತ ಆತ ಸಂಭಾಷಣೆ ಪ್ರಾರಂಭಿಸಿದ.

''ಅವಳು ಬಹಳ ಮೋಹಕ ಹುಡುಗಿ, ಆಕೆ ತನ್ನ ತಲೆಕೂದಲನ್ನು ಹೇಗೆ ಕಟ್ಟಿಕೊಂಡಿದ್ದಳೆಂದು ಗಮನಿಸಿದಿರಾ?'' ಎಂದು ನಾನವನನ್ನು ಕೇಳಿದೆ.

''ನೆನಪಿಲ್ಲ; ಆದರೆ ಅವಳ ಕಣ್ಣುಗಳನ್ನು ಮಾತ್ರ ಅವಲೋಕಿಸಿದೆ. ಆಕೆಗೆ ತುಂಬಾ ಆಕರ್ಷಕವಾದ ಕಣ್ಣುಗಳಿದ್ದವು. ಆದರೆ ದುರ್ದೈವಕ್ಕೆ ಅವು ಎಳ್ಳಷ್ಟೂ ಉಪಯೋಗಕ್ಕೆ ಬರುವಂತಿರಲಿಲ್ಲ. ಅವಳು ಪೂರ್ತಿ ಕುರುಡಿ. ನೀವದನ್ನು ಗಮನಿಸಲಿಲ್ಲವೇ?'' ಎಂದ.

ನಾನು ದಿಙ್ಮೂಢನಾದೆ.



- ಮಂಗಳಗೌರಿ

# ಹಲ್ಲುಗಳಿಗೇಕೆ ಕ್ಯಾಲ್ಸಿಯುಂ ಬೇಕು?

ಕಲ್ಲಿನಂತೆ ಗಡುಸಾದ ದೇಹವಿರುವ ಯಾವುದಾದರೂ ಪ್ರಾಣಿಯನ್ನು ನೀವು ನೋಡಿದ್ದೀರಾ? ಜಗತ್ತಿನ ಎಲ್ಲ ಜೀವ ರಾಶಿಗಳಿಗೂ ಮೃದುವಾದ ದೇಹವಿರುತ್ತದೆ, ಆದರೆ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳಲು ಅಥವಾ ತಮಗೆ ಬೇಕಾದ ಒರಟು ಪದಾರ್ಥಗಳನ್ನು ತಿನ್ನಲು ಅನುವಾಗುವಂತೆ ಎಲ್ಲಾ ಪ್ರಾಣಿಗಳಿಗೂ ಒಂದು ಗಟ್ಟಿಯಾದ ಅಂಗ ಇದೆ. ಸಮುದ್ರದಲ್ಲಿ ಸಿಗುವ ಶಂಖ, ಗಂಡಾನೆಯ ದಂತ, ಅಷ್ಟೇಕೆ ನಮ್ಮ ಹಲ್ಲುಗಳು ಕೂಡಾ ಗಟ್ಟಿ ತಾನೆ?

ಜಗತ್ತಿನ ಶೇಕಡಾ 98ರಷ್ಟು ಪ್ರಾಣಿಗಳ ಈ ಗಟ್ಟಿ ಅಂಗ ರಚಿತವಾದದ್ದು ಕ್ಯಾಲ್ಸಿಯಂನಿಂದಲೇ. ಕ್ಯಾಲ್ಸಿಯಂ ಏಕೆ? ಹಾಗೆ ನೋಡಿದರೆ ಇದು ಭೂಮಿಯಲ್ಲಿ ಹೇರಳವಾಗಿ ಸಿಗುವ ವಸ್ತುವೂ ಅಲ್ಲ. ಮಾತ್ರವಲ್ಲದೆ ಗಟ್ಟಿ ಸಂಯುಕ್ತವಾಗುವ ಪದಾರ್ಥವೂ ಅಲ್ಲ. ತರ್ಕಬದ್ಧವಾಗಿ ನಮ್ಮ ಹಲ್ಲುಗಳೂ, ಬಸವನ ಉಳದ ಬೆನ್ನ ಮೇಲಿರುವ ಚಿಪ್ಪುಗಳೂ ಎಲ್ಲೆಡೆ ಧಾರಾಳವಾಗಿ ಸಿಗುವ ಸಿಲಿಕಾನ್ ಎಂಬ ಮೂಲವಸ್ತುವಿನಿಂದಾಗಬೇಕಿತ್ತು. ಅಲ್ಲದೆ ಇದು ಕ್ಯಾಲ್ಸಿಯಂ ಸಂಯುಕ್ತಕ್ಕಿಂತಲೂ ಗಟ್ಟಿ. ಇನ್ನೂ ಗಟ್ಟಿಯಾದ ಪದಾರ್ಥ ಬೇಕೆಂದಿದ್ದರೆ ವಜ್ರವನ್ನೇ ನಿಸರ್ಗದಿಂದೆತ್ತಿ ಬಳಸಬಹುದಿತ್ತಲ್ಲ?

ಇದಕ್ಕೆಲ್ಲಾ ಕಾರಣ ಹುಡುಕುವುದು ವಿಜ್ಞಾನಿಗಳ ಕೆಲಸ. ಪ್ರಾಣಿಗಳಿಗೆ ಮೊಟ್ಟ ಮೊದಲು ಹಲ್ಲು ಮೂಡಿದ್ದು ಎಂಬತ್ತು ಲಕ್ಷ ವರ್ಷಗಳಿಗಿಂತಲೂ ಹಿಂದೆ. ಆಗೆಲ್ಲಾ ಅವು ಸಮುದ್ರದಲ್ಲೇ ಇದ್ದವು. ಆ 'ಕಾರ್ಬೋನಿಫೆರಸ್' ಕಾಲದಲ್ಲಿ ಭೂಮಿಯ ಹೊರಮೈಮೇಲೆಲ್ಲಾ ಹೆಚ್ಚಾಗಿ ಸುಣ್ಣದ ಕಲ್ಲುಗಳೇ ಇದ್ದವು. ಸಮುದ್ರದಲ್ಲೂ ಸುಣ್ಣದ ಪ್ರಮಾಣ ಹೆಚ್ಚು. ಅದಕ್ಕೇ ಆಗಿನ ಜಲಚರಗಳು ಹೆಚ್ಚಾಗಿ ಸಿಕ್ಕ ಪದಾರ್ಥಗಳನ್ನೇ ಬಳಸಿ ಆಯುಧ, ಕವಚ ಮಾಡಿಕೊಂಡವು.

ಪ್ರಾರಂಭದಲ್ಲಿ ಹೀಗಾಯಿತೆಂದರೆ ವಂಶ ಪಾರಂಪರ್ಯವಾಗಿ ಅದೇ ಗುಣ ಬೆಳೆದು ಬರಬೇಕು ತಾನೆ? ಕ್ರಮೇಣ ಭೂಮಿಯ ಮೇಲ್ಭಾಗದ ಸುಣ್ಣದ ಕಲ್ಲಿನ ಕವಚ ಕರಗಿ ನೀರಿನೊಂದಿಗೆ ಬೆರೆತು ಸಮುದ್ರ ಸೇರಿತು. ಸಮುದ್ರದ ಜೀವಿಗಳಿಗೆ ಕಾಲು ಬಂದು ರೆಕ್ಕೆ ಬಂದು ದಡ ಹತ್ತಿದರೂ ಕ್ಯಾಲ್ಸಿಯಂ ಸಂಯುಕ್ತದಿಂದಾದ ಹಲ್ಲು ಮಾತ್ರ ಹಾಗೆಯೇ ಉಳಿಯಿತು. (ಆಧಾರದಿಂದ) ●



# ಕಿಟಕಿಯಲ್ಲಿ ಕಂಡ ದೃಶ್ಯಗಳು...

**ಅರಳುವ ಮುನ್ನವೇ ನಲುಗಿದ ಪುಟ್ಟ ಕಲಾಕಾರನೊಬ್ಬನ ದೃಷ್ಟಿ - ಸೃಷ್ಟಿ**

*ಮುರಳೀಧರ ಖಜಾನೆ*

ಬ್ಯಾಂಕುಗಳು ಕಲಾಪ್ರದರ್ಶನವನ್ನು ನಡೆಸುವುದನ್ನಾಗಲಿ, ಅಥವಾ ಕಲಾಪ್ರದರ್ಶನದಂಥ ಸಂಗತಿಗಳ ಮೇಲೆ ಹಣಹೂಡುವುದಾಗಲಿ ಕೇಳಿದ್ದೀರಾ?

ಅಂಥ ಸಂದರ್ಭವೊಂದು 'ಬ್ಯಾಂಕ್ ಆಫ್ ಟ್ರಾವೆಂಕೂರ್'ಗೆ ಬಂತು. ಅದಕ್ಕಾಗಿ ಬ್ಯಾಂಕಿಗೆ ಹೆಮ್ಮೆಯೂ ಇದೆ. ಏಕೆಂದರೆ ಈ ಕಲಾಪ್ರದರ್ಶನಕ್ಕೆ ದೊರೆತ ಪ್ರತಿಕ್ರಿಯೆ ಅದ್ಭುತವಾಗಿತ್ತು. ಈ ಚಿತ್ರಕಲಾ ಪ್ರದರ್ಶನ ನೋಡಿದ ಪ್ರೇಕ್ಷಕರು ಮೂಕರಾದರು. ಕೆಲವರು ಏನೋ ಕಳೆದುಕೊಂಡಂತೆ ಗಳಗಳನೆ ಅತ್ತರೆ, ಇನ್ನು ಕೆಲವರು ಅಳುನುಂಗಿಕೊಂಡು ಮೌನವಾಗಿಯೇ ದುಃಖಿಸಿದರು. ಇದು ಅತಿಚಿಕ್ಕ ವಯಸ್ಸಿನಲ್ಲಿಯೇ ಚಿತ್ರ ಕಲೆಯಲ್ಲಿ ತನ್ನ ಸಾರ್ವಭೌಮತ್ವವನ್ನು ಮೆರೆದು, ಮಿಂಚಿ, ಅರಳುವ ಮುನ್ನವೇ ಮುರುಟಿಹೋದ ಸುಂದರ ಮಗುವೊಂದಕ್ಕೆ ಸಂದ ಶ್ರದ್ಧಾಂಜಲಿ.

ಈ ಪ್ರದರ್ಶನದ ಕಲಾವಿದ ಏಳು ವರ್ಷವಷ್ಟೇ ಬದುಕಿ ಮರೆಯಾದ ಪುಟ್ಟ ಕಿಶೋರ ಎಡ್ಮಂಡ್ ಥಾಮಸ್ ಕ್ಲಿಂಟ್. ಈ ಅವಧಿಯಲ್ಲಿ ಕ್ಲಿಂಟ್ ರಚಿಸಿದ ಚಿತ್ರಗಳ ಸಂಖ್ಯೆ 20,000! ಏಪ್ರಿಲ್ 1983ರಲ್ಲಿ ಸಾವನ್ನಪ್ಪುವವರೆಗೂ ಕ್ಲಿಂಟ್ ಅಷ್ಟೊಂದು ರೇಖಾಚಿತ್ರ, ವರ್ಣಚಿತ್ರಗಳನ್ನು ರಚಿಸಿದ್ದ. ಕ್ಲಿಂಟ್‌ನ ತಂದೆ ತಾಯಿ ಬಹಳ ಕಷ್ಟದಿಂದ ಅವುಗಳನ್ನು ಒಟ್ಟುಗೂಡಿಸಿಟ್ಟಿದ್ದರು. ಇವುಗಳಲ್ಲಿ ಅತಿಶ್ರೇಷ್ಠವೆನಿಸಿದ 150 ಆಯ್ದ ಕಲಾಕೃತಿಗಳ ಪ್ರದರ್ಶನವೇ ತ್ರಿವೆಂದ್ರಂನಲ್ಲಿ ನಡೆದದ್ದು.

ಕ್ಲಿಂಟ್ ತನ್ನ ಏಳು ವರ್ಷಗಳ ಯಾತನೀಯ ಬದುಕಿನ ಬಹುಪಾಲು (ಮೇ 1976 - ಏಪ್ರಿಲ್ 1983) ಆಸ್ಪತ್ರೆ ಹಾಗೂ ಮನೆಯ ನಡುವೆ ಅಲೆಯುವುದರಲ್ಲೇ ಕಳೆದ. ಈತನನ್ನು ಕಾಡಿ ಸೆಳೆದೊಯ್ದದ್ದು ಮೂತ್ರಕೋ





ಶಕ್ಕೆ ಸಂಬಂಧಪಟ್ಟ ಒಂದು ತೀವ್ರತರ ಕಾಯಿಲೆ. ಈ ಅಲೆದಾಟದ ನಡುವೆಯೂ ಆಸ್ಪತ್ರೆ, ಮನೆ, ಹಾಗೂ ಆಸ್ಪತ್ರೆಗೆ ಕರೆದೊಯ್ಯುವ ವಾಹನದ ಕಿಟಕಿಯಲ್ಲಿ ಕಾಣುವ ದೃಶ್ಯಗಳು, ಇವನ ಮನಸ್ಸಿನಲ್ಲಿ ದಳಬಿಟ್ಟು, ಅರಳಿ, ಸ್ಫೂರ್ತಿಯ ಸೆಲೆಯಾಗಿ ಗರಿಗೆದರಿದಾಗ ಕ್ಲಿಂಟ್‌ನ ಕೈಯಿನ ಕುಂಚ ಕುಣಿದು ಮೂಡಿದ ಬಿಂಬಗಳವು. ಚಿತ್ರ ರಚನೆಯ ಬಗ್ಗೆ ಕ್ಲಿಂಟ್‌ನಲ್ಲಿ ಎಂಥ ಒತ್ತಡವಿತ್ತೆಂದರೆ, ಅವನನ್ನು ನರಕಯಾತನೆಗೆ ಒಳಪಡಿಸಿದ ಕಾಯಿಲೆ ಅವನ ಬಲಗೈ ಬೆರಳುಗಳನ್ನು ಸತ್ವಹೀನವಾಗಿಸಿದಾಗ ಕ್ಲಿಂಟ್ ತನ್ನ ಎಡಗೈಯಿಂದ ಚಿತ್ರ ರಚಿಸಲು ಪ್ರಾರಂಭಿಸಿದ. ಆದರೆ ಏಕೋ ಜವರಾಯನಿಗೆ ಹೆಮ್ಮರಗಳ

ಗಿಂತ ಈ ಪುಟ್ಟ ಸಸಿಯೇ ಪ್ರಿಯವಾಯಿ ತೇನೋ. ಅರಳುವ ಪ್ರತಿಭೆಯನ್ನು ಚಿವುಟಿ ಎಳೆದೊಯ್ದು.

"ಮುಗ್ಧ ಬಾಲಕನೊಬ್ಬನ ಮನಸ್ಸಿನ ಅಂತರಾಳದಲ್ಲಿ ಸಂವೇದನೆಗಳು ಇಷ್ಟೊಂದು ಸೂಕ್ಷ್ಮವಾಗಿ, ಇಷ್ಟೊಂದು, ಅದ್ಭುತವಾಗಿ, ಪಕ್ವವಾಗಿ ಕೆಲಸ ಮಾಡಿವೆಯೆಂದರೆ ನಂಬುವುದೇ ಅಸಾಧ್ಯ" ಎಂದರು ಕೇರಳದ ಶ್ರೇಷ್ಠ ಕಲಾವಿಮರ್ಶಕಿ, ಹಾಗೂ ಕವಯಿತ್ರಿ, ಸುಗತ ಕುಮಾರಿ.

"ತಾನು ಕಂಡು ಕೇಳಿದ ಸಂಗತಿಗಳಿಗೆ ಮೂರ್ತರೂಪ ಕೊಡುವಲ್ಲಿ ಕ್ಲಿಂಟ್ ಹಲವಾರು ಮಾಧ್ಯಮಗಳಲ್ಲಿ ಪ್ರಯತ್ನಿಸಿರುವುದರಿಂದ ಆತನ ಕೃತಿಗಳನ್ನು ಆಯ್ಕೆ ಮಾಡುವುದು ಕಷ್ಟದ ಕೆಲಸ" ಎನ್ನುವುದು ಇನ್ನೂ ಕೆಲವು ಕಲಾವಿಮರ್ಶಕರ ಅಭಿಪ್ರಾಯವಾಗಿತ್ತು.

"ಕ್ಲಿಂಟ್‌ನ ಕಲಾಕೃತಿಗಳ ಪ್ರದರ್ಶನ ಪುಟ್ಟ ಪ್ರತಿಭಾನ್ವಿತ ಕಲಾಕಾರನೊಬ್ಬನಿಗೆ ನಾವು ಸಲ್ಲಿಸುವ ನಮ್ರ ಶ್ರದ್ಧಾಂಜಲಿ" ಎಂಬುದು ಸ್ಟೇಟ್‌ಬ್ಯಾಂಕ್ ಆಫ್ ಟ್ರಾವೆಂಕೂರ್‌ನ ಮ್ಯಾನೇಜಿಂಗ್ ಡೈರೆಕ್ಟರ್ ಷಣ್ಮುಖ ವಡಿವೇಲು ಅವರ ನುಡಿ.

ಕ್ಲಿಂಟ್‌ನ ತಂದೆತಾಯಿಗಳು ಈ ಪುಟ್ಟ ಕಲಾವಿದನ ನೆನಪಿಗಾಗಿ ಹಾಗೂ ಇವನಂಥ ಇತರ ಪುಟ್ಟ ಪ್ರತಿಭಾನ್ವಿತ ಕಲಾಕಾರರ ಅನುಕೂಲಕ್ಕಾಗಿ ಟ್ರಸ್ಟೊಂದನ್ನು ಸ್ಥಾಪಿಸಲು ನಿರ್ಧರಿಸಿದ್ದಾರೆ. ಸ್ಟೇಟ್‌ಬ್ಯಾಂಕ್ ಆಫ್ ಟ್ರಾವೆಂಕೂರ್ ಸಹ ಇದಕ್ಕೆ ಸಮ್ಮತಿಸಿದೆ. 'ಯೂನಿಸೆಫ್' ಈಗ ಕ್ಲಿಂಟ್‌ನ ಚಿತ್ರಕೃತಿಗಳನ್ನು ಗ್ರಿಟಿಂಗ್ಸ್‌ಗಳಿಗಾಗಿ ರೂಪಾಂತರಿಸಲಿದೆ. ಇದರಿಂದ ಬರುವ ಲಾಭ ಕ್ಲಿಂಟ್ ಟ್ರಸ್ಟ್‌ಗೆ. ಅಲ್ಲದೆ ಕ್ಲಿಂಟ್‌ನ ತಂದೆತಾಯಿಗಳು ಮಗನ ಕಲಾಕೃತಿಗಳ ಪ್ರದರ್ಶನವನ್ನೂ ದೇಶದ ಎಲ್ಲಾ ಪ್ರಮುಖ ನಗರಗಳಲ್ಲೂ ನಡೆಸಲು ನಿಶ್ಚಯಿಸಿದ್ದಾರೆ.● (ಆಧಾರ)

## ಹವಾಮಾನ

*ಟಿಬೆಟಿನ ಬಹಳಷ್ಟು ಭಾಗಗಳ ಹವಾಮಾನ ಎಷ್ಟು ಶುಷ್ಕವಾಗಿದೆಯೆಂದರೆ ಅಲ್ಲಿ ಧಾನ್ಯಗಳನ್ನು ಹಾಳಾಗದಂತೆ ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲ ಸಂಗ್ರಹಿಸಿಡಬಹುದು. ಒಣಗಿಸಿದ ಮಾಂಸವನ್ನು ಮತ್ತು ಬೆಣ್ಣೆಯನ್ನು ಕಡಿಮೆಯೆಂದರೂ ಒಂದು ವರ್ಷ ಕಾಲ ಕಾಯ್ದಿಡಬಹುದು. ಟಿಬೇಟಿನ ಬಹಳಷ್ಟು ಭಾಗ ಮರಗಳಿಲ್ಲದ ಎತ್ತರದ ಪ್ರಸ್ಥಭೂಮಿ. ಅಲ್ಲಿನ ಹವಾಮಾನ ಶುಷ್ಕವಾಗಿದ್ದರೂ ಏಶಿಯದ ಪ್ರಮುಖ ನದಿಗಳ ಮೂಲ ಸ್ಥಾನವಾಗಿದೆ.*

*ಎನ್. ರಾಜಶೇಖರ ನಾಯಕ*

---

## ಖಾಲಿ ಜೇಬು

*ಒಬ್ಬಾತ ಬೆಳಗಿನ ವಾಕಿಂಗ್ ಹೊರಟಿದ್ದ. ಆಗ ಓರ್ವ ದರೋಡೆಕೋರ ಅವನ ದಾರಿಗೆ ಅಡ್ಡಗಟ್ಟಿ, ಚಾಕುವನ್ನು ತೋರಿಸುತ್ತಾ,*

*"ನಿನ್ನ ಹತ್ತಿರ ಇರುವ ದುಡ್ಡನ್ನೆಲ್ಲಾ ಇತ್ತ ಕೊಡು" ಎಂದು ಜೋರಾಗಿ ಕಿರುಚಿದ. ವಾಕಿಂಗ್ ಹೊರಟವಾತ "ನನ್ನ ಹತ್ತಿರ ದುಡ್ಡು ಹೇಗೆ ಇರುತ್ತದಪ್ಪಾ? ಈಗಾಗಲೇ ನನಗೆ ಮದುವೆಯಾಗಿದೆ" ಎಂದು ಹೇಳಿದವನೇ ತನ್ನ ವಾಕಿಂಗ್ ಮುಂದುವರೆಸಿದ.*

— ಎಸ್. ವಿಶ್ವನಾಥ್

*ಮುನಿಯಾಲ್ ಗಣೇಶ್ ಶೆಣೈ*

# ನಿರೀಕ್ಷೆ

ಮೊನ್ನೆ ಕಚೇರಿಯಲ್ಲಿ ನನ್ನ ಹೆಸರಿಗೊಂದು ಪತ್ರ ಬಂತು. ಪತ್ರದಲ್ಲಿ ಹೀಗೆ ಬರೆದಿತ್ತು:

''ಅಪ್ಪ, ಇದೇ ಗುರುವಾರ ಹನ್ನೊಂದನೆಯ ತಾರೀಕು ನನಗೆ ಕರೆದು ಹಿಡಿಯಲು ಅನುಕೂಲವಾಗುವಂತಹ ಹೆಸರೊಂದನ್ನು ಇಡುವ ನಾಮಕರಣೋತ್ಸವವನ್ನು ನಡೆಸಲು ಹಿರಿಯರು ನಿಶ್ಚಯಿಸಿರುವುದರಿಂದ ನೀನು ಹೊರಟುಬರತಕ್ಕದ್ದು.

ಇತಿ ನಿನ್ನ ಪ್ರೀತಿಯ
ಪ್ರಥಮ ಪುತ್ರಿ

ಪತ್ರ ಓದುತ್ತಿದ್ದಂತೆಯೇ ನನಗೆ ಮದುವೆಯಾಗಿರುವುದೂ, ಪತ್ನಿ ತವರೂರಿನಲ್ಲಿರುವದೂ, ನನಗೆ ಆಟವಾಡಲೆಂದು ದೇವರು ಇತ್ತೀಚೆಗೆ ಒಂದು ಮಗುವನ್ನು ಕರುಣಿಸಿರುವುದೂ ಒಟ್ಟೊಟ್ಟಿಗೆ ನೆನಪಾದವು. ಜೊತೆಗೆ ನನ್ನ ಮಗಳು ಜನ್ಮ ತಾಳಿದ ಮೂರನೇ ದಿನಕ್ಕೆ ಶುದ್ಧಗನ್ನಡದಲ್ಲಿ ಬರೆಯುವಷ್ಟು ಬುದ್ಧಿವಂತಳಾಗಿರುವುದನ್ನು ನೋಡಿ ಸಂತೋಷವಾಯಿತು. ಜೊತೆಗೆ ನನ್ನ ತಾಯಿ ನನ್ನ ಬಗ್ಗೆ ಹೇಳುತ್ತಿದ್ದ ವಿಷಯ ನೆನಪಾಯಿತು: ನನಗೆ ಚಹಾ ಎಂದರೆ ಬಲು ಇಷ್ಟ. ನಾನು ಹುಟ್ಟಿದ ಕೂಡಲೇ ಎಲ್ಲಾ ಮಕ್ಕಳು ಮಾಡುವಂತೆ ಕಿಟಾರನೆ ಅಳದೆ, ಡೆಲಿವರಿ ಮಾಡಿದ ವೈದ್ಯೆಯ ಎದೆ ಮೇಲಿನ ಬ್ಯಾಡ್ಜನ್ನು ಓದಿ, ''ಡಾಕ್ಟರ್ ಕಮಲಮ್ಮನವರೇ, ನನಗೊಂದು ಚಮಚ ಚಹಾ ಬೇಕು'' ಎಂದು ಹೇಳಿದ್ದೆನಂತೆ. ಡಾಕ್ಟರ್ ಕಮಲಮ್ಮ ಕೂಡಲೇ ಮೂರ್ಛೆ ಹೋದರೆಂದೂ, ದಾದಿಯರ ಶುಶ್ರೂಷೆಯಿಂದ ಗುಣಮುಖರಾದರೆಂದೂ, ಆದರೆ ಅಪ್ಪಿತಪ್ಪಿಯೂ ನಮ್ಮ ವಾರ್ಡಿನ ಕಡೆ ಮುಖ ಹಾಕಲಿಲ್ಲವೆಂದೂ ಅಮ್ಮ ಹೇಳುತ್ತಿದ್ದರು.

ತಳ ಇಲ್ಲದ ಸೇರಿನಲ್ಲಿ ಅಳೆಯುತ್ತಿದ್ದೇನೆಂದು ನೀವು ನನಗೆ ಹೇಳಬಹುದು. ಆದರೆ ನೀವು ಬೆಂಗಳೂರಿನ ಯಾವುದೇ 'ಪಾಶ್'' ದೇವಾಲಯಕ್ಕೆ ಹೋಗಿ ನೋಡಿ. ದಂಪತಿಗಳು ಎಂತಹ ಮಗುವನ್ನು ಕೊಡೆಂದು ದೇವರನ್ನು ಕೇಳುತ್ತಾರೆಂದು ನಿಮಗೇ ಗೊತ್ತಾಗುತ್ತದೆ: ''ದೇವರೇ, ಹುಟ್ಟುವಾಗಲೇ ಎಬಿಸಿಡಿಯನ್ನೂ, ಮಮ್ಮಿ - ಡ್ಯಾಡಿ ಇತ್ಯಾದಿಗಳನ್ನು ಮುದ್ದಾಗಿ ಹೇಳುವ ಮಗುವನ್ನು ಕೊಡು,'' ''ದೇವರೆ, ಎಂಜಿನಿಯರಿಂಗ್ ಎಂಟ್ರನ್ಸ್ ಪರೀಕ್ಷೆಯಲ್ಲಿ ಪಾಸಾಗುವಂತಹ ಮಗುವನ್ನು ಕೊಡು'' ಮೊದಲಾದಂತಹ ಕೋರಿಕೆಗಳು ನಿಮಗೆ ಕೇಳಿಸುತ್ತವೆ.

ಮತ್ತೊಮ್ಮೆ ಮಗಳ ಪತ್ರ ಓದಿದೆ. ಥೇಟ್ ತನ್ನ ಅಮ್ಮನದೇ ಅಂದರೆ ನನ್ನ ಹೆಂಡತಿ ಸುಜಾತಳದೇ ಹಸ್ತಾಕ್ಷರ! ಆದರೆ ಸುಜಾತಳ

ಹಾಗೆ ನೇರವಾದ ಸಾಲಿನಲ್ಲಿ ಬರೆದಿರಲಿಲ್ಲ. ಸಾಲುಗಳು ಅಂಕುಡೊಂಕಾಗಿದ್ದವು. ಎಲ್ಲ ಪುಟ್ಟ ಮಕ್ಕಳಂತೆ ನನ್ನ ಮಗಳೂ ಪೆನ್ಸಿಲಿನಲ್ಲಿ ಬರೆದಿದ್ದಳು. ಊರಿಗೆ ಹೋಗುವಾಗ ಅವಳಿಗೆ ಒಂದು ಪೆನ್ ಸೆಟ್ ತೆಗೆದುಕೊಂಡು ಹೋಗಬೇಕೆಂದು ತೀರ್ಮಾನಿಸಿದೆ.

ಪತ್ರದ ಕೊನೆಯಲ್ಲಿ ಮಗಳ ಹೆಸರಿಲ್ಲದ್ದು ನೋಡಿದಾಗ ತಿಳಿಯಿತು ಅವಳಿಗಿನ್ನೂ ಹೆಸರಿಟ್ಟಿಲ್ಲವೆಂದು. ಏನೆಂದು ಹೆಸರಿಡುವುದೆಂದು ಹೊಳೆಯಲಿಲ್ಲ. ಮಕ್ಕಳನ್ನು ಹಡೆಯುವುದಕ್ಕಿಂತ ಕಷ್ಟದ ಕೆಲಸ ಈ ಹೆಸರಿಡುವುದು. ಕೂಡಲೆ ನನಗೆ ನನ್ನ ಮಿತ್ರ ಗೋವಿಂದನ ನೆನಪಾಯಿತು. ಅವನಿಗೂ ಇತ್ತೀಚೆಗೆ ಒಬ್ಬ ಮಗಳು ಹುಟ್ಟಿದ್ದಳು. ಅವನೂ ನಾನೂ ಹೈಸ್ಕೂಲಿನಲ್ಲಿ ಓದುತ್ತಿರುವಾಗಲೇ ಅವನಿಗೆ ತನ್ನ ಮಕ್ಕಳಿಗೆ ಏನೆಂದು ಹೆಸರಿಡಬೇಕೆಂಬ ತಲೆ ತಿನ್ನುವ ಸಮಸ್ಯೆ ಕಾಡುತ್ತಿತ್ತು. ನಮ್ಮ ಶಾಲೆಯಲ್ಲಿ ಹಾಜರಿ ಹಾಕುವಾಗ ಪ್ರತಿಯೊಬ್ಬ ವಿದ್ಯಾರ್ಥಿಯ ಹೆಸರನ್ನೇ ಕೂಗುತ್ತಿದ್ದರು. ಸಂಖ್ಯೆಯನ್ನಲ್ಲ. ಆ ಕ್ರಮ ಈಗಲೂ ಆ ಶಾಲೆಯಲ್ಲಿದೆ. ಪ್ರತಿ ದಿನವೂ ಅಧ್ಯಾಪಕರು ನಮ್ಮ ತರಗತಿಯಲ್ಲಿ ''ಕೆ.ಟಿ.ಅರಿಷಡ್ವರ್ಗ ವಿಜಯೇತ ಕುಮಾರ''ನಿಂದ ಆರಂಭವಾಗುವ ವಿದ್ಯಾರ್ಥಿಗಳ ಹೆಸರುಗಳನ್ನು ಕರೆಯುವಾಗಲೆಲ್ಲ ಗೋವಿಂದ ತನ್ನ ಅತ್ಯಂತ ಸಾಮಾನ್ಯವಾದ ಹೆಸರಿಗಾಗಿ ಪರಿತಪಿಸುತ್ತ ನಿಟ್ಟುಸಿರುಬಿಡುತ್ತ, ತನ್ನ ಹೆಸರು ಕರೆದಾಗ ಮೆಲ್ಲನೆದ್ದು ''ಎಸ್ ಮಿಸ್'' ಎಂದಾಗ ಅಧ್ಯಾಪಕರನ್ನು ಸೇರಿಸಿ ಎಲ್ಲರೂ ನಗಲಾರಂಭಿಸಿದಾಗ ''ಎಸ್ ಮೇಡಂ'' ಎಂದು ಹೇಳಿ ಕೂರುತ್ತಿದ್ದ. ತನ್ನ ಮಕ್ಕಳಿಗೆಲ್ಲ ಸೊಗಸಾದ ಹೆಸರುಗಳನ್ನಿಡುವುದೇ ಅವನ ಜೀವನದ ಪರಮ ಧ್ಯೇಯವಾಗಿತ್ತು. ನಾನು ಅವನಿಗೆ ಫೋನ್ ಮಾಡಿದೆ. ಅವನೇ ಫೋನ್ ಎತ್ತಿದ. ನಾನು ಹೇಳಿದೆ: ''ಗೋವಿಂದ, ನನ್ನ ಮಗಳಿಗೆ ಒಂದು ಹೆಸರು ಇಡಬೇಕು. ನೀನು



ಯಾವುದಾದರೂ ಸೂಚಿಸುತ್ತೀಯಾ?''

ಗೋವಿಂದ ಹೇಳಿದ: ''ಗಣೇಶ, ನನ್ನ ಹತ್ತಿರ ಸುಮಾರು ಎರಡು ಸಾವಿರ ಪುಟಗಳ ಪುಸ್ತಕದಲ್ಲಿ ಒಳ್ಳೆಯ ಹೆಸರುಗಳನ್ನು ಬರೆದಿಟ್ಟಿದ್ದೇನೆ. ಅದನ್ನು ಕೊಡುತ್ತೇನೆ. ನಿನಗಿಷ್ಟವಾದ ಹೆಸರನ್ನು ನೀನೇ ಆಯ್ದುಕೋ. ಆದರೆ ಅಲ್ಲಲ್ಲಿ ಹಸಿರು ಬಣ್ಣದಲ್ಲಿ ಗುರ್ತು ಮಾಡಿರುವ ಹೆಸರುಗಳನ್ನು ನೀನು ತೆಗೆದುಕೊಳ್ಳಬೇಡ. ಅವು ನನ್ನ ಮಕ್ಕಳಿಗಾಗಿ ಕಾದಿರಿಸಿದ ಹೆಸರುಗಳು.''

ನಾನು ಒಪ್ಪಿದೆ. ''ಗೋವಿಂದ, ನಿನ್ನ ಮಗಳಿಗೆ ಏನೆಂದು ಹೆಸರಿಟ್ಟಿದ್ದೀಯಾ?'' ಎಂದು ಕೇಳಿದೆ.

ಗೋವಿಂದ ಹೇಳಿದ: ''ಭಾರತ ಜನನಿಯ ತನುಜಾತೆ ಜಯ ಹೇ ಕರ್ನಾಟಕ ಮಾತೆ.''

ನಾನು ನನ್ನ ಪ್ರಶ್ನೆ ಅವನಿಗೆ ಸರಿಯಾಗಿ ಕೇಳಿಸಲಿಲ್ಲವೆಂದು ಭಾವಿಸಿ ಮತ್ತೊಮ್ಮೆ ಕೇಳಿದೆ. ಗೋವಿಂದ ''ಗಣೇಶ, ನನ್ನ ಮಗಳ ಹೆಸರು 'ಭಾರತ ಜನನಿಯ ತನುಜಾತೆ ಜಯಹೇ ಕರ್ನಾಟಕ ಮಾತೆ' ಎಂದು. ಯಾಕೋ ಚೆನ್ನಾಗಿಲ್ಲವೇನೋ?''

ಆ ಹೆಸರು ಬಲು ಸೊಗಸಾಗಿರುವುದಾಗಿಯೂ ಆದರೆ ಅವನು ತನ್ನ ಹೆಸರುಗಳ ಬೃಹತ್ ಕೋಶವನ್ನು ಕಳುಹಿಸುವ ಅಗತ್ಯವಿಲ್ಲವೆಂದೂ ಹೇಳಿ ಫೋನ್ ಕೆಳಗಿಟ್ಟೆ.

ಸುಜಾತ ತೌರಿನತ್ತ ಹೊರಟ ಕೂಡಲೆ ನನ್ನ ಕಚೇರಿಯ ಹೆಂಗಸರೆಲ್ಲ ತಾವೇ 'ಲೇಬರ್ ಪೇನ್' ಅನುಭವಿಸುವವರಂತೆ ನಿತ್ಯವೂ ''ಏನ್ರೀ, ಊರಿಂದ ಪತ್ರ ಬಂತೇ?'' ಎಂದು ಕೇಳುತ್ತಿದ್ದರು. ಇವರಿಗೇ ಹೇಳಿ ಯಾವುದಾದರೂ ಹೆಸರು ಸೂಚಿಸಲು ಕೇಳೋಣವೆಂದುಕೊಂಡೆ.

ಆರು ಮಕ್ಕಳ ತಂದೆ ಶ್ರೀನಿವಾಸರಾಯರ ಮುಂದೆ ನನ್ನ ಸಮಸ್ಯೆ ಹೇಳಿಕೊಂಡಾಗ ಅವರು ಪಟಪಟನೆ ಹೆಸರುಗಳನ್ನು ಹೇಳಲಾರಂಭಿಸಿದರು. ನನಗೆ ಯಾವುದೂ ಇಷ್ಟವಾಗಲಿಲ್ಲ. ಅವರು ಕೊನೆಕೊನೆಗೆ 'ಪ್ರೈಸ್ ಆಫ್ ಇಂಡಿಯಾ', 'ಮತ್ಸ್ಯಗಂಧಿನಿ', 'ಶಾಶ್ವತಿ', 'ಡಬಲ್ ರೋಸ್' ಎನ್ನುವ ಹೆಸರುಗಳನ್ನು ಹೇಳಿದಾಗ ನನಗೆ ಅನುಮಾನವಾಯಿತು. ನನ್ನ ಅನುಮಾನಕ್ಕೆ ಮತ್ತೊಂದು ಕಾರಣ, ಅವರು ಹೆಸರುಗಳನ್ನು ಹೇಳುವಾಗ ಒಂದು ಪುಟ್ಟ ಪುಸ್ತಕವನ್ನು ನೋಡುತ್ತಿದ್ದುದು. ಅದೇನೆಂದು ಕೇಳಿದಾಗ, ಶ್ರೀನಿವಾಸರಾಯರು ''ರೇಸ್ ಬುಕ್ ಮಾರಾಯಾ'' ಎಂದು ಹೇಳಿ ಕುದುರೆಯಂತೆ ನಕ್ಕರು.




''ಸ್ವಾಮಿ, ನನಗೆ ಹುಟ್ಟಿರುವುದು ಒಂದು ಮಗುವೇ ವಿನಾ ಕುದುರೆ ಮರಿಯಲ್ಲ'' ಎಂದು ಹೇಳಿ ಹೊರನಡೆದೆ. ಏನು ಮಾಡಲೂ ತೋಚದೆ, ಯಾವ ಹೆಸರೂ ಸಿಗದೆ ಊರಿಗೆ ಹೊರಟೆ.

ಶಿರಿಯಾರದ ಮಾವನ ಮನೆ ತಲುಪಿದೆ. ಮನೆ ಮೌನವಾಗಿತ್ತು. ಆದರೆ ಮನೆಯ ಹಿಂದಿನ ಬಾವಿಕಟ್ಟೆಯ ಬಳಿ ಹೆಂಗಸರ ಕೂಟ ಸೇರಿತ್ತು. ಮೆಲ್ಲನೆ ಮನೆಯೊಳಗೆ ಹೋದೆ. ಮಂಚದ ಮೇಲೆ ಜಗತ್ತಿನ ಅತ್ಯಂತ ಸುಂದರ




ವಾದ ಮಗುವೊಂದು ಮಲಗಿತ್ತು. ಸದ್ದಾಗದಂತೆ ನಡೆದರೂ ಅದು ಕಣ್ಣು ಬಿಟ್ಟಿತು. ಮುಗುಳ್ನಕ್ಕು, ''ಹಲೋ ಅಪ್ಪಾ, ಹೇಗಿದ್ದೀಯಾ?'' ಎಂದಿತು. ನಾನು 'ಬೆಬೆಬೆಬೆ' ಎಂದೆ.

ಮಗು, ''ನಿನಗೆ ಮಾತನಾಡಲು ಬರುತ್ತೆ ಎಂದು ಅಮ್ಮ ಹೇಳಿದಳಲ್ಲ?'' ಎಂದಿತು.

ನಾನು ನನ್ನ ನಡುಕವನ್ನು ಸ್ವಲ್ಪ ನಿಯಂತ್ರಿಸಿಕೊಂಡು, ಬೆವರು ಒರೆಸಿಕೊಳ್ಳುತ್ತ, ''ಮಾ - ಮಾ - ಮಾತು ಬರುತ್ತೆ. ಸ್ವಲ್ಪ ನೀ - ನೀರು ಕುಡಿದು ಬರುತ್ತೇನೆ,'' ಎಂದೆ.

''ಆಗಲಿ'' ಎಂದು ಅಪ್ಪಣೆ ನೀಡಿದಳು ಮಗಳು.

ಅಡುಗೆ ಮನೆಯತ್ತ ಹೋಗಬೇಕೆಂದುಕೊಳ್ಳುವಷ್ಟರಲ್ಲಿ ಮಗಳು ಮತ್ತೆ ಕರೆದಳು,

''ಮಗುವಿಗೆ ಮುತ್ತು ಕೊಡಬೇಕೆಂದು ನಾನೇ ಹೇಳಬೇಕಾ ಅಪ್ಪ?'' ನಾನು ಮೆಲ್ಲಗೆ ಅವಳತ್ತ ಸರಿದು ಎರಡೂ ಕೆನ್ನೆಗೆ ಮುತ್ತಿಟ್ಟೆ.

''ಹೂಂ, ಈಗ ಹೋಗಿ ನೀರು ಕುಡಿ, ಆದರೆ ನಿನ್ನ ಗಡ್ಡ ಮೀಸೆ ಬಹಳ ಉದ್ದ ಆಗಿದೆ. ನನಗೆ ಇದು ಇಷ್ಟವಿಲ್ಲ,'' ಎಂದಳು.

ಸಂಜೆ ನಾಮಕರಣದ ಸಮಯ. ನಾನು ಮಾವನ ಮನೆಯ ಕತ್ತಲ ಕೋಣೆಯಲ್ಲಿ ಒಬ್ಬನೇ ಕೂತಿದ್ದೆ. ಹೆಂಗಸರ ಕೂಟ ನನ್ನ ಮಗಳಿಗೆ ತಮತಮಗೆ ತೋಚಿದ ಸಲಹೆಗಳನ್ನು ಧಾರೆ ಎರೆಯುತ್ತಿದ್ದರು. ಯಾರೋ ಏನೋ ಕೇಳಿದರು. ನನ್ನಾಕೆ ''ಮಗೂಗೆ ಏನ್ರೀ ಹೆಸರಿಡೋದು?'' ಎಂದು ಕೇಳಿದಂತಾಯಿತು. ನಾನು ಕತ್ತಲಲ್ಲಿ ಎಡವುತ್ತ ನಡೆದೆ. ಹಣೆಗೇನೋ ಬಡಿಯಿತು. ನನ್ನಾಕೆ ಮತ್ತೊಮ್ಮೆ ಅದೇ ಪ್ರಶ್ನೆ ಕೇಳಿದಾಗ, ''ದೀಪ ತಾ'' ಎಂದೆ. ಆಕೆ ದೀಪ ತರಲಿಲ್ಲ. ನಾನು ಹಾಗೂ ಹೀಗೂ ಮಾಡಿ ಕತ್ತಲಕೋಣೆಯಿಂದ ಹೊರಬಂದಾಗ ಮಗುವಿಗೆ ''ದೀಪಿಕಾ'' ಎಂದು ಹೆಸರಿಟ್ಟು ಆಗಿತ್ತು.

●

ರೂಪಾಯಿಯ ಮೌಲ್ಯ ಭರದಿಂದ ಇಳಿಮುಖವಾಗುತ್ತಿರುವ ಇಂದಿನ ದಿನಗಳಲ್ಲಿ ಐದು ಪೈಸೆಯನ್ನು ಕೇಳುವವರಾರು ? ಸಿಟಿಬಸ್ಸಿನಲ್ಲಿ ಎಪ್ಪತ್ತೈದು ಪೈಸೆ ಟಿಕೇಟಿಗೆ ಒಂದು ರೂಪಾಯಿ ಕೊಟ್ಟರೆ ವಾಪಸ್ಸು ದೊರೆಯುವ ಚಿಲ್ಲರೆ ಇಪ್ಪತ್ತು ಪೈಸೆ. ಅರ್ಧ ಲೀಟರ್ ಡೈರಿ ಹಾಲಿಗೆ ಎರಡೂವರೆ ರೂಪಾಯಿ ಕೊಟ್ಟರೆ ವಾಪಸು ಸಿಗುವ ಚಿಲ್ಲರೆ ಇಪ್ಪತ್ತು ಪೈಸೆ ! ಹಣ ಕೊಡುವಾಗ ಐದು ಪೈಸೆ ಕಡಿಮೆಯಾದರೆ ಬಸ್ಸಿನ ಕಂಡಕ್ಟರಾಗಲಿ, ಹಾಲಿನವನಾಗಲಿ ಅದನ್ನು ಬಿಟ್ಟು ಬಿಡಲು ಒಪ್ಪುವುದಿಲ್ಲ. ಆದರೆ ಚಿಲ್ಲರೆ ಪಡೆಯುವಾಗ ಐದು ಪೈಸೆ ಕಡಿಮೆಯಾದಲ್ಲಿ ಮೌನವಾಗಿರಬೇಕು. ಅಕಸ್ಮಾತ್ತಾಗಿ ಅದನ್ನು ಕೇಳಿದರೆ ಎಲ್ಲರೆದುರು 'ಕಂಜೂಸ್' ಪಟ್ಟ ಬರುತ್ತದೆ. ಹನಿಹನಿಗೂಡಿದರೆ ಹಳ್ಳವಾಗಬಹುದೇನೋ ನಿಜ, ಆದರೆ ಅದರ ಉಪಯೋಗ ಯಾರಿಗೆ?

— ಜಿ. ರಾಮಣ್ಣ ಆಲೆಟ್ಟಿ

# ನೆಪೋಲಿಯನ್‌ನಿಗೆ ಮಣಿದ

# ರಾಟಿಸ್ಟನ್

ರಾಟಿಸ್ಪನ್ ಒಂದು ಸುಭದ್ರ, ಬಲಿಷ್ಠ ಕೋಟೆ. ನೆಪೋಲಿಯನ್ ಬೊನಾಪಾರ್ಟನ ದಂಡು ಅದರ ಮೇಲೆ ದಾಳಿ ಮಾಡಿದೆ. ಫ್ರೆಂಚ್ ಸೇನೆ ಮುತ್ತಿಗೆ ಹಾಕಿ ನಿಕರದ ಹೋರಾಟ ನಡೆಯಿಸಿದೆ. ಅಲ್ಲಿಂದ ಒಂದೆ ರಡು ಮೈಲು ದೂರ ಬಯಲಲ್ಲಿ ಒಂದು ದಿಬ್ಬವೇರಿ ನಿಂತು ಯುದ್ಧದ ಆಗುಹೋಗು ದಿಟ್ಟಿಸುತ್ತಿದ್ದಾನೆ ಸೇನಾಪತಿ ನೆಪೋಲಿಯನ್

ವಾಡಿಕೆಯ ಠೀವಿ. ಸೆಟೆದ ನಿಡಿದಾದ ನಿಲುವು. ನಿಲುವಂಗಿಯ ಗುಂಡಿಗಳೆಲ್ಲ ತೆರೆದು ಎದೆ ಹೊಟ್ಟೆ ತುಸು ಮುಂದೆ ಕಾಣು ತ್ತವೆ. ಮುಂದೆ ಬಾಗಿ ನೋಡುತ್ತಿರುವ ಮೂಲಕ ಕೈಯಲ್ಲಿ ದುರ್ಬೀನು. ಆಗಾಗ್ಗೆ ಕಣ್ಣಿಗೆ ಹಚ್ಚಿ ದೂರದ ಘನಘೋರ ಕದನ ವನ್ನು ನಿರೀಕ್ಷಿಸುತ್ತಿದ್ದಾನೆ. ತೋಪುಗಳ ಗರ್ಜನೆ, ಹೊಗೆ ಮೋಡಗಳ ದಟ್ಟಣೆ, ನಡು ನಡುವೆ ಇಣುಕುವ ಬಿಸಿಲಿಗೆ ಮಿಂಚುವ ಯುದ್ಧದ ದೃಶ್ಯಗಳ ನೋಟದಿಂದ ನೆಪೋಲಿ ಯನ್‌ನ ಆತುರ ಕಣ್ಣುಗಳಿಗೆ ತೃಪ್ತಿ. ನೆಟ್ಟ ದಿಟ್ಟಿಯಿಂದ ಕೋಟೆಯನ್ನು ಗಮನಿಸುತ್ತಿ ದ್ದಾನೆ. ತುಸು ಕಾಲು ಅಗಲಿಸಿ ಕೈಗಳನ್ನು ಬೆನ್ನಿಗೆ ಆನಿಸಿ, ಕದನದ ಕೊನೆಯೇನಾದೀ ತೆಂದು ಅವನಿಗೆ ಕಾತರ.

ಆದರೆ ನೆಪೋಲಿಯನ್‌ನಿಗೆ ತನ್ನ ದಂಡಿ ನಲ್ಲಿ ಪ್ರತಿಯೊಬ್ಬ ಸಿಪಾಯಿಯಲ್ಲಿ ಅಪಾರ ನಂಬಿಗೆ. ಅವರಿಗೂ ಹಾಗೆಯೇ, ತಮ್ಮ ಸೇನಾಪತಿ, ಅಪ್ರತಿಮ ಯೋಧನಲ್ಲಿ. ದೂರ ನಿಂತು ನೋಡುತ್ತಿದ್ದರೂ ಸರಿ. ಅವನ ದೃಷ್ಟಿ ಕ್ಷೇಪಕ್ಕೆ ಅವರ ಮೈಯಲ್ಲಿ ಸಾವಿರ ಆನೆಗಳ ಬಲ ಉಕ್ಕಿ ಬರುವುದು. ತಮ್ಮ ದೊರೆಯ ಕಣ್ಣ ಕೌತುಕದಲ್ಲಿ ಕಾಳಗಕ್ಕೆ ನುಗ್ಗುವುದೇ ಅವರಿಗೊಂದು ಹಬ್ಬ. ಅದೇ ಒಂದು ಉನ್ಮಾ ದಕ ಉತ್ತೇಜನ. ಈ ಫ್ರೆಂಚ್ ಸೇನೆಯಿಂದ

*ಗೌರೀಶ ಕಾಯ್ಕಿಣಿ*

ಈ ಚಕ್ರವರ್ತಿ ಏನೆಲ್ಲ ಸಾಹಸ, ಅಸಮಪರಾ ಕ್ರಮ ಎಷ್ಟು ಸಲ ಮಾಡಿಸಿಲ್ಲ! "ನನ್ನ ದಂಡನ್ನು ಏನೂ ತಡೆಹಿಡಿಯಲಾರದು! ಅಡ್ಡ ನಿಂತ ಆಲ್ಪ ಪೆರೆನೀಜ ಪರ್ವತಗಳು ನನ್ನ ದಂಡಿನ ಮುಂದೆ ಕರಗುವವು!" ಇಂದು ನೆಪೋಲಿಯನ್‌ನ ಭರವಸೆ. ಅಶಕ್ಯವೆಂಬ ಶಬ್ದವೆ ಅವನಿಗೆ ಗೊತ್ತಿದ್ದಿಲ್ಲ. "ಅದು ಬರೆ ಮೂರ್ಖರ ನಿಘಂಟುವಿನಲ್ಲಿ!" ಎಂದು ಅವನ ಉದ್ಗಾರ. ಅವನ ದಂಡು ದುಡುಕಿ ದಲ್ಲಿ ದಾಳಿ. ದಾಳಿ ಇಟ್ಟಲ್ಲಿ ದಿಗ್ವಿಜಯ!



ಈಗಲೂ ಹಾಗೆಯೇ. ರಾಟಿಸ್ಬನ್ ಕೈವಶವಾಗಲೇ ಬೇಕು. ದಿವಸವೆಲ್ಲಾ ಹೋರಾಟ ಸಾಗಿದೆ. ಇನ್ನೂ ಕೋಟೆ ಎಲೆ ಎತ್ತಿ ನಿಂತಿದೆ. ಅದು ಬಗ್ಗಲೇ ಬೇಕು. ಆದರೂ ನೆಪೋಲಿಯನ್‌ನಿಗೆ ಚಿಂತೆ ತಪ್ಪಿಲ್ಲ. ಅತ್ತ ಹೋರಾಟ ತೀವ್ರವಾಗಿದೆ. ಉಗ್ರವಾಗುತ್ತಿದೆ. ಇತ್ತ ಸೇನಾಪತಿ ವ್ಯಗ್ರನಾಗಿದ್ದಾನೆ. ಇಲ್ಲಿ, ನೆಪೋಲಿಯನ್ ನಿಂತಲ್ಲಿ, ಕೇಳಿ ಬರುತ್ತಿದೆ ರಣಕೋಲಾಹಲ, ತೋಪುಗಳ ಕಿವಿಗಚಿಕ್ಕುವ ಸದ್ದು.

ಅಷ್ಟರಲ್ಲಿ ಅದಾರು? ಒಬ್ಬ ಯುವ ಯೋಧ ಅಶ್ವಾರೋಹಿ. ಆ ಮದ್ದು ಗುಂಡುಗಳ ಹೊಗೆಯ ಕಾರ್ಮೋಡಗಳೊಳಗಿನಿಂದ ಕಾಣಿಸಿಕೊಳ್ಳುತ್ತಾನೆ. ಅವನ ಕುದುರೆ ಭರದಿಂದ ಆ ರಣರಂಗದಿಂದ ಇತ್ತ ಕಡೆಗೇ ಧಾವಿಸುತ್ತಿದೆ. ಹೌದು, ಈತ ಫ್ರೆಂಚ್ ಸೈನಿಕನೇ; ಸೆಟೆದು ಕೂತು ಬಿಗುಮಾನದಿಂದ ಕುದುರೆಯನ್ನು ಓಡಿಸುತ್ತ ಇತ್ತ ಕಡೆಗೇ ಬರುತ್ತಿದ್ದಾನೆ. ಏನು ಸಮಾಚಾರ ತರುತ್ತಿದ್ದಾನೆ? ಅಶುಭವವೇನೂ ಇರಲಾರದು, ಈತ ಜೋಲು ಮೋರೆ ಹಾಕಿಲ್ಲ.

ನೋಡುತ್ತಿದ್ದಂತೆ ಆ ಎಳೆವಯದ ಅಶ್ವಾರೋಹಿ ಹತ್ತಿರ ಬಂದ. ನೇರ ನೆಪೋಲಿಯ

ನ್‌ನ ಎದುರಿಗೇ ಬಂದು ನಿಂತ. ಕಿಡಿ ಕಾರುವ ಕಣ್ಣು. ಕೆಂಪೇರಿದ ಮೋರೆ. ನಡುಗುವ ಕೈ ಧ್ವಜ ಹಿಡಿದಿದ್ದು "ದೊರೆಗಳೇ, ಗೆಲುವು ನಮ್ಮದು. ಕ್ರಾಂತಿ ಅಮರವಾಗಲಿ! ಚಕ್ರವರ್ತಿ ನೆಪೋಲಿಯನ್‌ರಿಗೆ ಜಯವಾಗಲಿ!" ಅವಡುಗಚ್ಚಿ ಈ ವೀರ ಯುವಕ ಕೂಗಿದ. (ಫ್ರೆಂಚ್ ರಾಜ್ಯಕ್ರಾಂತಿಯಿಂದ ನೆಪೋಲಿಯನ್‌ನ ದಿಗ್ವಿಜಯ ಮುಂದುವರಿದಿತ್ತು. ಅದೀಗ ಯುರೋಪವನ್ನೆಲ್ಲ ಗೆದ್ದು ವ್ಯಾಪಿ ಸಾಮ್ರಾಜ್ಯ ಸ್ಥಾಪನೆಗೆ ಅಣಿಯಾಗಿದ್ದರೂ ಕ್ರಾಂತಿಯ ಘೋಷಣೆಯನ್ನೇ ಮಾಡುತ್ತಿತ್ತು!)

"ಭಲೆ, ವೀರ ತರುಣ! ಶಾಭಾಸ್, ಉತ್ತಮ ಸುದ್ದಿ ತಂದಿ!" ಎನ್ನುತ್ತ ನೆಪೋಲಿಯನ್ ಆ ಸೈನಿಕನ ಬೆನ್ನು ಚಪ್ಪರಿಸಲು ತೋಳು ಚಾಚಿದಂತೆ ಆ ತರುಣ ಕುದುರೆಯಿಂದ ಕೆಳಗೆ ಕುಸಿದ. ನೆಪೋಲಿಯನ್ ಅವನನ್ನು ದಿಟ್ಟಿಸಿದ. "ಇದೇನು, ಗಾಯಗೊಂಡಿಯಾ?" ಒಮ್ಮೆಲೆ ಗಾಬರಿಯಿಂದ ಮೃದು ಮಾತಿನಲ್ಲಿ ನೆಪೋಲಿಯನ್ ಕೇಳಿದ. ಮರಿಯ ಮೋರೆಯ ಕಸಿವಿಸಿ ಕಂಡು ತಾಯಿ ಗರುಡನ ಕಣ್ಣು ಮಂಜಾದವು. ಹನಿಯುದುರಿದವು.

ತರುಣ ಯೋಧನ ಮೋರೆ ಕಪ್ಪಿಟ್ಟು ಕಂಗೆಟ್ಟಿತ್ತು. ಆತ ನಿಂತಲ್ಲಿಯೇ ಕುಸಿದನು. ಆದರೂ ಸೆಟೆದು ನೀಳವಾಗಿ ನಿಲ್ಲಲು ಹೆಣಗಿದನು. ಜೀವದ ಹಂಗುದೊರೆದ ದಿಟ್ಟ ದರ್ಪದ ನಗೆ!

"ದೊರೆ, ಗಾಯವಲ್ಲ. ಬೆನ್ನು ಸೀಳಿದೆ. ಎದೆಯೊಡೆದಿದೆ. ಆದರೂ ನನ್ನ ಜನ್ಮ ಸಾರ್ಥಕ. ದೊರೆಯ ಸೇವೆಗೆ ಸಂದೆ! ನೆಪೋಲಿಯನ್‌ನಿಗೆ ಜಯವಾಗಲಿ!... ಕ್ರಾಂತಿ ಚಿ-ರಾ-ಯು -!"

ಮುಂದೆ ಮಾತೇ ಹೊರಡದಾಯಿತು. ತನ್ನ ದೊರೆಯ ತೆಕ್ಕೆಯಲ್ಲಿ ದೇಹವಿಟ್ಟ. ●

## ಜಾಣ

***ಪಾಪು (ರಸ್ತೆಯಲ್ಲಿ ಅಳುತ್ತ): ಊಂ....ಊಂ.....ಊಂ.....ಊಂ....***

***ಹಾದಿಗ: ಮಗೂ! ಯಾಕಪ್ಪಾ ಅಳ್ತಾ ಇದ್ದೀಯಾ?***

***ಪಾಪು: ನನ್ನ ಇಪ್ಪತ್ತೈದು ಪೈಸೆ ಕಳೆದು ಹೋಗಿದೆ ಅಂಕಲ್.***

***ಹಾದಿಗ: (ಜೇಬಿನಿಂದ 25 ಪೈಸೆ ನಾಣ್ಯ ತೆಗೆದುಕೊಡುತ್ತ) ತೂಗೋ, ಅಳು ನಿಲ್ಲಿಸು. ಮನೆಗೆ ಹೋಗು.***

***ಪಾಪು ಮತ್ತೆ ಅಳಲು ಶುರು ಮಾಡಿದ.***

***ಹಾದಿಗ: ಅರೆ, ಇನ್ನೂ ಯಾಕೆ ಅಳ್ತಿದ್ದಿಯೋ? ಈಗೇನಾಯ್ತು ಮತ್ತೆ?***

***ಪಾಪು: ಊಂ....ಊಂ.... ಮನೆ ಹೋದರೆ 'ಇಪ್ಪತ್ತೈದು ಪೈಸೆಗೆ ಬದಲು ಒಂದು ರೂಪಾಯಿ ಕಳೆದ್ಹೋಯ್ತು ಅಂತ ಯಾಕೆ ಹೇಳಲಿಲ್ಲ. ಅವ್ರಿಗೆ?' ಅಂತ ಅಮ್ಮ ಹೊಡೀತಾಳೆ. ಅದಕ್ಕೇ ಊಂ.... ಊಂ......***

**ಎಸ್.ವಿಶ್ವನಾಥ**

ನೀನು ಹುಟ್ಟಿದಾಗಿನ ದಿನವನ್ನು ನೆನಪಿಗೆ ತಂದುಕೋ. ಆಗ ಎಲ್ಲರೂ ನಗುತ್ತಿದ್ದರು. ನೀನು ಅಳುತ್ತಿದ್ದೆ. ಆದರೆ ನೀನು ಸತ್ತಾಗ ಉಳಿದವರು ಅಳಬೇಕು, ನೀನು ನಗುತ್ತಾ ಹೋಗುತ್ತಿರಬೇಕು. ಅಂಥ ಬಾಳ್ವೆಯನ್ನು ಬಾಳು.

'ಸಾದಿ'

(ಸಂಗ್ರಹ: ಎಸ್. ವಿಶ್ವನಾಥ್)

ಉರ್ದು ವ್ಯಂಗ್ಯ

# ಒಳ್ಳೇದು! ಅದನ್ನೇ ತಿನ್ನುತ್ತಿರಿ...

ಕಿವುಡ ಮಹಾಶಯನೊಬ್ಬ ಸಾಹೇಬರ ಕ್ಷೇಮ ಸಮಾಚಾರ ವಿಚಾರಿಸುವುದಕ್ಕಾಗಿ ಹೋದ. ಸಾಹೇಬರ ಮನೆಯಲ್ಲಿ ಯಾವ ರೀತಿಯಲ್ಲಿ ವಾರ್ತಾಲಾಪ ಮಾಡಬೇಕೆಂಬುದನ್ನು ಯೋಚಿಸುತ್ತಾ ಮಾರ್ಗ ಸವೆಸಿದ. 'ಈಗ ಹೇಗಿದ್ದೀರಿ?' ಎಂದು ಕೇಳುತ್ತೇನೆ. ರೋಗಿಯು 'ಈಶ್ವರನ ಕೃಪೆಯಿಂದ ಇಷ್ಟರ ಮಟ್ಟಿಗಿದ್ದೇನೆ' ಎನ್ನುತ್ತಾರೆ. 'ಯಾರಲ್ಲಿ ಚಿಕಿತ್ಸೆ ಪಡೆಯುತ್ತಿದ್ದೀರಿ?' ನನ್ನ ಪ್ರಶ್ನೆ ಇದು. ಯಾರಾದರೂ ಡಾಕ್ಟರರ ಅಥವಾ ಪಂಡಿತರ ಹೆಸರನ್ನು ಹೇಳುತ್ತಾರೆ. ಆಗ ನಾನು 'ಹೌದಾ.....! ಒಳ್ಳೆಯದು. ಅವರ ಕೈಗುಣ ಚೆನ್ನಾಗಿದೆ' ಎನ್ನುತ್ತೇನೆ. ಮತ್ತೆ ನಾನೇ 'ಊಟ ಉಪಚಾರದ ಬಗ್ಗೆ ಹೇಗೆ?' ಎನ್ನುತ್ತೇನೆ. ಅದಕ್ಕೆ ರೋಗಿಯು 'ಗಂಜಿ ತಿನ್ನಲು ಹೇಳಿದ್ದಾರೆ' ಎನ್ನುತ್ತಾನೆ. ಏಕೆಂದರೆ ಸಾಮಾನ್ಯವಾಗಿ ರೋಗಿಗಳಿಗೆ ಇದನ್ನೇ ಆಹಾರವಾಗಿ ತೆಗೆದುಕೊಳ್ಳಲು ಹೇಳುವುದು ವಾಡಿಕೆ. 'ಒಳ್ಳೆಯದು' ಎಂದು ನಾನು ಉತ್ತರಿಸುವೆ.

ಅಷ್ಟರಲ್ಲಿ ಮನೆ ಬಂತು. ಆ ಮಹಾಶಯ ಮನೆಯೊಳಗೆ ಕಾಲಿಡುತ್ತಿದ್ದಂತೆಯೇ ನಮಸ್ಕಾರ ಹೇಳಿ ರೋಗಿಯ ಕುಶಲವನ್ನು ವಿಚಾರಿಸಿದ. ರೋಗಿಯು ತನ್ನ ಸ್ಥಿತಿ ಬಹಳ ಗಂಭೀರವಾಗಿರುವುದಾಗಿ ತಿಳಿಸಿದಾಗ ಆ ಕಿವುಡ ಮಹಾಶಯ, ''ಒಳ್ಳೆಯದು. ಈಶ್ವರನ ಕೃಪೆ,'' ಎಂದು ಉತ್ತರಿಸಿದರು. ''ಔಷಧೋಪಚಾರ ಯಾರು ಮಾಡುತ್ತಿದ್ದಾರೆ?'' ಎಂದು ಮುಂದಿನ ಪ್ರಶ್ನೆ. ಇದಕ್ಕೆ ಸಿಟ್ಟಿಗೆದ್ದ ರೋಗಿಯು ಕೋಪದಿಂದ, ''ಯಮದೂತ'' ಎಂದುತ್ತರಿಸಿದ. ಆ ಮಹಾಶಯ ಬಹಳ ಸಂತೋಷಗೊಂಡವನಂತೆ, ''ಒಳ್ಳೆಯದು.... ಅವನು ಬಹಳ ಅನುಭವಸ್ಥ'' ಎಂದ. ''ಊಟ ತಿಂಡಿ ಹೇಗೆ'' ಎಂದು ಮತ್ತೆ ಮಹಾಶಯ ಕೇಳಲು ರೋಗಿಯು ಉರಿದು ಬೀಳುವಂತೆ ''ಬೂದಿ'' ಎಂದ. ಕಿವುಡ ಮಹಾಶಯ ''ಬಹಳ ಒಳ್ಳೆಯದು. ಇದನ್ನೇ ತಿನ್ನುತ್ತಿರಿ. ಸರಿಯಾಗುತ್ತೆ... ಆಯ್ತು ಒಳ್ಳೆಯದಾಗಲಿ, ನಾನಿನ್ನು ಬರುತ್ತೇನೆ'' ಎನ್ನುತ್ತಾ ಮುಂದೆ ನಡೆದ. ●

ಮೂಲ: ಇಜ್ನೆ ಇನ್ಶಾ

ಕನ್ನಡಕ್ಕೆ: ಎಸ್. ಕಲ್ಯಾಣ

# ಅವ್ವನನ್ನು ನೆನೆದು

ಗೆಳೆಯ
ನನ್ನ ಹೆತ್ತವ್ವ ಒಡಲ ಜೀವ ಸೆಲೆ ಇನ್ನಿಲ್ಲ.
ಉತ್ತರ ಕ್ರಿಯೆಯ ಕಪ್ಪು ಕಾರ್ಡಿನಲಿ ಛಾಪಿಸಿದೆ:
''ಸ್ವರ್ಗಸ್ಥ''ಳಾದಳು.
ಅರ್ಥವಾಗದ ಲೋಕಗಳು ಅರ್ಥಕಾಣದ ಪ್ರಶ್ನೆಗಳು,
ಮತ್ತೆಲ್ಲಿ ನೆಲೆಯಾದಳು
ಭೂತಲವೆ ಅಥವಾ ಭೂತೈಕ್ಯವೆ
ರಾಡಿ ಮನ ತಿಳಿಯುತ್ತಿಲ್ಲ.
ಅಪ್ಪ ನಡೆಸಿದ ಇರುಳ ದುರುಳತನ
ತಪ್ಪದ ಗರ್ಭಸ್ಫೋಟ ಹರಿದ ನೆತ್ತರ ಹೊನಲು
ಚರ್ಮ ಸುಲಿದ ನೋವು ನಿತ್ಯ ಮೌನ ವ್ಯಥೆಯ ಸಾಲು ಸಾಲು
ನಿಧಾನವಾಗಿ ಗೆದ್ದಲು ಹತ್ತಿದ ದೇಹ ವ್ಯಾಧಿ ಹಾವುಗಳ ವಾಲು
ಮೂಳೆಯ ಸಂದು ಸಂದಿನಲಿ ಹರಿದು ಬಿಗಿದುಕೊಂಡ ನರಗಳ ಆಲದ ಬಿಳಲು
ಐವತ್ತಕ್ಕೆ ಮುಪ್ಪು ಅಡರಿ ಮೌನವಾಗಿ ಜೀವ ಒಪ್ಪಿಸಿದವಳಿಗೆ
ಸಂದ ಪ್ರಶಸ್ತಿ: ''ಮುತ್ತೈದೆ ಸಾವು.''
ಮರ ಬಳಸಿ ಗಿರಿ ಹತ್ತಿ ವರಬೇಡಿದ ಫಲ
ಉಳಿದೊಂದೆ ಕೂಸು ಹಾಲುಗಲ್ಲದಲಿ ಮೂಡಿತ್ತು ಹಲವಾರು ಕನಸು.
ಲಾಲಿ ಹಾಡಿದ ಕೊರಳು ಗೋಳು ಹಾಡನು ನಿರೀಕ್ಷಿಸಿರಲಿಲ್ಲ
ಕವಲು ಹಾದಿಯಲಿ ನಡೆದ ಮಗ ಮಡಿಲು ತುಂಬಿ ಉರಿದಿತ್ತು ಕೆಂಡ
ಬೆನ್ನಡಿಯಾಗಿ ಬಿದ್ದ ಕೀಟದ ಕಾಲ್ಗಳಿಗೆ ನೆಲ ದಕ್ಕಲಿಲ್ಲ.
ಗಂಡ-ಮಗ ನಿರ್ಜೀವ ಕೊರಡುಗಳೆರಡು
ನಡುವೆ ಉಯ್ಯಾಲೆ ಏರಿದ ನಿಟ್ಟುಸಿರ ಬಾಳಾಯ್ತು ಬರಡು.

ಗೆಳೆಯ ನನ್ನವ್ವ ಈಗಿಲ್ಲ
ಬರಿದೆ ಕೊರಗು ಮನ ಮನೆಯಲ್ಲೆಲ್ಲ
ಸಂತೆ ಮುಗಿದ ಮೈದಾನದ ತುಂಬ ನಾಯಿ ಕಾಗೆಗಳು
ಉರಿದು ತಣ್ಣಗಾದ ಒಲೆಗಳು ಗೂಟಕಿತ್ತ ಹಳ್ಳಗಳು
ಸದ್ದುಗದ್ದಲದ ಸಂತೆಗೆ ಬಂದು ಹೋದವರೆಷ್ಟು
ಉಳಿದವರಾರು.. ಲೆಖ್ಖ ತಿಳಿದೀತು ಯಾರಿಗೆ..
ಆದರೆ ಗೆಳೆಯ ನೋಡಲಿ!
ಬಯಲು ನೀರವದಲ್ಲಿ
ರಶೀದಿ ಹರಿವ ಸುಂಕಿಗ ಒಬ್ಬನೆ
ಕಾದು ಕೂತಿದ್ದಾನೆ...
ಮುಂದಿನ ಸಂತೆಗೆ.

– ಮಾ. ವರದರಾಜು

- ಉದಯರವಿ

# ತಾಯ್ತನ: ದೈವದತ್ತವರವೋ ಪ್ರಕೃತಿಯ ಕೊಡುಗೆಯೋ?

**ಭೂ**ಮಿಗಿಂತ ಹಿರಿದಾದ ವಸ್ತು ಯಾವುದು? ಎಂದು ಯಕ್ಷ ಪ್ರಶ್ನಿಸಿದಾಗ ಧರ್ಮರಾಜ 'ತಾಯಿ' ಎಂದು ಉತ್ತರಿಸಿದಂನಂತೆ. ಮನುಕುಲಕ್ಕೆ ಮಾತೃತ್ವವು ಬಹುದೊಡ್ಡ ವರ. ತಾಯ್ತನದ ಹಿರಿಮೆಯನ್ನು ವಿವರಿಸಲು ನಮ್ಮ ಪೂರ್ವಜರು 'ಮಾತೃದೇವೋಭವ' ಎಂದದ್ದು ಉತ್ಪ್ರೇಕ್ಷೆಯೇನಲ್ಲ.

ಆದರೆ ತಾಯ್ತನವು ಮನುಕುಲಕ್ಕೆ ಮಾತ್ರ ಸಂದ ಬಳುವಳಿಯಲ್ಲ. ಪಕ್ಷಿ ಹಾಗೂ ಪ್ರಾಣಿ ಸಂಕುಲಗಳಲ್ಲೂ ತಾಯ್ತನದ ಮಹತ್ತ್ವವನ್ನು ಕಾಣಬಹುದು.

ಹೆಸರಾಂತ ಮನಶ್ಶಾಸ್ತ್ರಜ್ಞರೂ ಪ್ರಾಣಿ ಪ್ರವರ್ತನ ಸಂಶೋಧಕರೂ ಆದ ಬ್ರಿಫಾಲ್ಟ್‌ರು ಹೇಳುವಂತೆ, "ಹಾಗೆ ನೋಡುತ್ತ ಹೋದರೆ, ನಿಸರ್ಗದಲ್ಲಿ ತಂದೆತನವೆಂಬುದೇ ಇಲ್ಲ. ಏಕೆಂದರೆ ಮಕ್ಕಳ ಪಾಲನೆ ಪೋಷಣೆಯಲ್ಲಿ ಗಂಡು ನೇರವಾಗಿ ಭಾಗಿಯಾಗುವುದಿಲ್ಲ. ಸಸ್ತನಿಗಳಲ್ಲಿ ಪೋಷಕ ಸಂಬಂಧವು ಕೇವಲ ತಾಯಿ ಮತ್ತು ಆಕೆಯ ಸಂತಾನಕ್ಕೆ ಸೀಮಿತವಾಗಿರುತ್ತದೆ. ಶೈಶವಾವಸ್ಥೆಯಲ್ಲಿರುವ ಯಾವುದೇ ಸಸ್ತನಿಯು ಸಹಾಯ ಮತ್ತು ಸಂರಕ್ಷಣೆಗಾಗಿ ತಂದೆಯನ್ನು ಅವಲಂಬಿಸುವುದಿಲ್ಲ. ಇದು ಪ್ರಾಣಿಗಳು, ಪಕ್ಷಿಗಳು ಹಾಗೂ ಸಸ್ತನಿಗಳಲ್ಲಿ ಪ್ರಚಲಿತವಿರುವ ಜಗನ್ನಿಯಮ. ಅಷ್ಟೇ ಅಲ್ಲ, ಹಲವಾರು ಸಂದರ್ಭಗಳಲ್ಲಿ ಹೆಣ್ಣು ತನ್ನ ಸಂತತಿಯನ್ನು ಸಲಹುವದರೊಂದಿಗೆ ಕುಟುಂಬದ ಯಜಮಾನನನ್ನೂ ಪೋಷಿಸುವು ಕಂಡು ಬಂದಿದೆ."

ಸಸ್ತನಿಗಳಲ್ಲಿ ಮರಿಗಳ ಪಾಲನೆ ಪೋಷಣೆಯ ಸಂಪೂರ್ಣ ಜವಾಬ್ದಾರಿಯು ತಾಯಿಯ ಮೇಲೆ ಬೀಳುವ ಕಾರಣ, ನಿಸರ್ಗವು ತಾಯಂದಿರಲ್ಲಿ ತಮ್ಮ ಮಕ್ಕಳ ಮೇಲೆ ಅವಿಚ್ಛಿನ ಪ್ರೇಮವನ್ನಿರಿಸುವ ವ್ಯವಸ್ಥೆಯನ್ನು ಮಾಡಿದೆ. ಸ್ವಾಭಾವಿಕವಾಗಿ ತಾಯ್ತನದ ಮಹದೋದ್ದೇಶವೂ ಇದೇ ಆಗಿದೆ.

ಈ ದಿಸೆಯಲ್ಲಿ ಪ್ರಾಣಿ ಪ್ರವರ್ತನ ಪ್ರವೃತ್ತಿಶಾಸ್ತ್ರವು ಹೆಚ್ಚಿನ ಬೆಳಕನ್ನು ಬೀರುತ್ತದೆ. ನಿಸರ್ಗದಲ್ಲಿ ತಾಯ್ತನದ ಪ್ರಭಾವ ಹಾಗೂ ಸಂತಾನಾಭಿವೃದ್ಧಿಗೆ ಆದರಿಂದ ಸಂದ ಉಪಯೋಗಗಳೇನು? ಎಂಬ ಬಗ್ಗೆ ಹಲವಾರು ಪ್ರಯೋಗಗಳನ್ನು ನಡೆಸಲಾಗಿದೆ.

ತಾಯಿ ಮಗುವಿನ ಸಂಬಂಧವನ್ನು ಅರಿಯಲು ಪ್ರಯೋಗಶಾಲೆಗಳಲ್ಲಿ ಆಗ ತಾನೆ

ಹುಟ್ಟಿದ ಮಂಗದ ಮರಿಗಳನ್ನು ತಾಯಿಯಿಂದ ಬೇರ್ಪಡಿಸಿ ವಿವಿಧ ವಸ್ತುಗಳಿಂದ ತಯಾರು ಮಾಡಿದ ಹಲವಾರು 'ತಾಯಿ'ಯ ಮಾದರಿಗಳ ಬಳಿ ಬಿಡಲಾಯಿತು. ಅವುಗಳಿಗೆ ಹಸಿವಾದಾಗ 'ಬದಲಿ' ತಾಯಿಯ ಬಳಿ ಆಹಾರವು ಸಿಗುವ ಹಾಗೆ ಏರ್ಪಾಡನ್ನೂ ಮಾಡಲಾಗಿತ್ತು. ಹೀಗೆ ತಯಾರು ಮಾಡಿದ ಎರಡು ಬದಲಿ ತಾಯಿಗಳಲ್ಲಿ ಒಂದು ತುಪ್ಪಳದಂತಹ ಮೃದುವಾದ ಬಟ್ಟೆಯ ಹೊರಮೈಯುಳ್ಳದ್ದು, ಮತ್ತೊಂದು ಲೋಹದಿಂದ ರಚಿತವಾದದ್ದಾಗಿತ್ತು. ಈ 'ಮಾದರಿ'ಗೆ ಹೊದಿಸಿದ್ದ ವಸ್ತ್ರದ ಮೇಲ್ಮೈಯು ನಿಜವಾದ ತಾಯಿಯ ತುಪ್ಪಳದಂತೆಯೇ ಇದ್ದುದರಿಂದ ಮರಿಗಳು ಮೃದುವಾದ ಬಟ್ಟೆಯನ್ನು ಹೊದಿಸಿದ್ದ ತಾಯಿಯ ಮಾದರಿ ಬಳಿಯೇ ಹೆಚ್ಚಿನ ಸಮಯವನ್ನು ಕಳೆಯುತ್ತಿದ್ದುದು ಸಹಜ. ಆದ್ದರಿಂದ ಲೋಹದಿಂದ ರಚಿತವಾಗಿದ್ದ ಮಾದರಿಯಲ್ಲಿ ತಮ್ಮ ಪೋಷಣೆಗೆ ಬೇಕಾದ ಆಹಾರವನ್ನು ಪಡೆಯುತ್ತಿದ್ದರೂ ಅವು ಮೃದುವಾದ ಹೊದಿಕೆಯುಳ್ಳ 'ತಾಯಿ'ಯತ್ತಲೇ ಹೆಚ್ಚು ಒಲವು ತೋರಿದವು. ಇದರಿಂದಾಗಿ ಪಾಲನೆಗಿಂತಲೂ ಮೃದುವಾದ ಸ್ಪರ್ಶಾನುಭವದೊಂದಿಗೆ ಸುರಕ್ಷಿತ ಭಾವನೆಯನ್ನೂ ನೀಡುವ ಪೋಷಣೆಯೇ ಮರಿಗಳಿಗೆ ಮುಖ್ಯ ಎಂಬುದು ಸ್ಪಷ್ಟವಾಯಿತು.

ಅಲ್ಲದೆ ಹೀಗೆ ಶೈಶವಾವಸ್ಥೆಯಲ್ಲೇ ತಾಯಿಯಿಂದ ಬೇರ್ಪಡಿಸಲ್ಪಟ್ಟ ಮಂಗಗಳಲ್ಲಿ ವಯಸ್ಸಾದಂತೆಲ್ಲಾ ಸ್ವಾಭಾವಿಕವಾಗಿರಬೇಕಾದ ಲೈಂಗಿಕ ಆಕರ್ಷಣೆಯಂತಹ ಸಹಜ ಪ್ರವೃತ್ತಿಗಳು ಗೋಚರಿಸಲಿಲ್ಲ. ಈ ಹಿಂದೆ ಸಾಕಷ್ಟು ಲೈಂಗಿಕ ಅನುಭವವಿರುವ 'ಜೋಡಿ'ಯೊಂದಿಗೆ ಅವು ಕಲೆತಾಗಲೂ ಅವುಗಳ ಲೈಂಗಿಕ ನ್ಯೂನ್ಯತೆಗಳು ಸರಿಯಾಗಲಿಲ್ಲ.

ಅಂತಹ ಮಂಗಗಳಲ್ಲಿ ಹಲವಕ್ಕೆ ಗರ್ಭಧಾರಣೆಯಾಯಿತು. ಪ್ರಸವವೂ ಆಯಿತು. ತಾಯಿ ಮಂಗವು ಈ ಹಿಂದೆ ಸ್ವತಃ ತಾಯ್ತನದ ಅನುಭವ ಪಡೆದಿರಲಿಲ್ಲವಾದ್ದರಿಂದ ತನ್ನ ಮರಿಯ ಪಾಲನೆ, ಪೋಷಣೆಯನ್ನು ಹೇಗೆ ಮಾಡಬೇಕೆಂಬುದೇ ಅದಕ್ಕೆ ತಿಳಿಯಲಿಲ್ಲವಾದ್ದರಿಂದ ಅಲ್ಲಿಂದ ಮುಂದೆ ಆ ಮಂಗಗಳಿಗೆ ಹುಟ್ಟಿದ ಮರಿಗಳು ತಾಯ್ತನದ ಆರೈಕೆಯಿಂದ ಸಂಪೂರ್ಣ ವಂಚಿತವೂ ಆದವು.

ಮರಿಗಳ ಪಾಲನೆ ಪೋಷಣೆಯ ಭಾರ ಸಂಪೂರ್ಣವಾಗಿ ತಾಯಿಯ ಮೇಲೆ ಬೀಳುವ ಕಾರಣ, ತಾಯಿಗೆ ತನ್ನ ಮರಿಯ ಮೇಲೆ ಎಲ್ಲೆ ಮೀರಿದ ಪ್ರೀತಿಯುಂಟಾಗುವಂತೆ ಮಾಡಲಾದ ವ್ಯವಸ್ಥೆಯು ಒಂದು ನೈಸರ್ಗಿಕ ಕೌಶಲವೆನ್ನಬಹುದು, ಸಹಜ ಪ್ರವೃತ್ತಿಯೆನ್ನಬಹುದು.

ಪ್ರಾಣಿ ಸಂಕುಲದಲ್ಲಿಯೂ ಇದು ಎಷ್ಟು ತೀವ್ರವಾಗಿರುತ್ತದೆಂದರೆ, ಕೆಲವೊಮ್ಮೆ ಅವು ತಮ್ಮ ಮರಿಗಳು ಹಾಗೂ ಬೇರೆ ವರ್ಗಕ್ಕೆ ಸೇರಿದ ಪ್ರಾಣಿಗಳ ಮರಿಗಳ ನಡುವೆ ಯಾವುದೇ ಭೇದಭಾವವನ್ನು ತೋರುವುದಿಲ್ಲ. ತನ್ನೆಲ್ಲ ಮರಿಗಳನ್ನೂ ಕಳೆದುಕೊಂಡ ಬೆಕ್ಕೊಂದು ಮೊಲದ ಮರಿಗಳನ್ನು ಹಾರಿಸಿಕೊಂಡು ಬಂದು ತನ್ನ ಹಾಲನ್ನಿತ್ತು ಸಲಹಿದ ಉದಾಹರಣೆಯೂ ಇದೆ.

ಟೆಕ್ಸಾಸಿನ ಲಕ್ಕಿನ್ ಎಂಬಲ್ಲಿ ಓರ್ವನಿಗೆ ಹಸಿವಿನಿಂದ ಈಗಲೋ ಆಗಲೋ ಸಾಯುವಂತಿದ್ದ ಚಿಗರೆ ಮರಿಯೊಂದು ಸಿಕ್ಕಿತು. ಅದನ್ನು ಮನೆಗೆ ತಂದು ಹಾಲು ಕುಡಿಸಲು ಯತ್ನಿಸಿದ, ಆದರೆ ಪ್ರಯೋಜನವಾಗಲಿಲ್ಲ. ಬೇರೆ ದಾರಿ ಕಾಣದ ಅದನ್ನು ತೆಗೆದುಕೊಂಡು ಹೋಗಿ, ಕೆಲ ದಿನಗಳ ಹಿಂದಷ್ಟೇ ಮರಿ ಹಾಕಿದ್ದ ತಮ್ಮ ಮನೆಯ ನಾಯಿಯ ಬಳಿ ಬಿಟ್ಟ. ಸ್ವಲ್ಪ ಹೊತ್ತಿನಲ್ಲೆ ಆ ಚಿಗರೆ ಮರಿಯು ನಾಯಿ ಮರಿಗಳೊಂದಿಗೆ ಕೂಡಿಕೊಂಡು ನಾಯಿಯ ಮೊಲೆ ಹಾಲು ಕುಡಿಯಲಾರಂಭಿಸಿತು. ಕೆಲದಿನಗಳಲ್ಲೇ ತನ್ನ ದೇಹ ಸ್ವಾಸ್ಥ್ಯವನ್ನೂ ಮರಳಿ ಪಡೆಯಿತು. ಗೋರಿಲ್ಲಾಗಳಲ್ಲಿ ಮಾತೃವಾತ್ಸಲ್ಯ ಎಷ್ಟಿರುತ್ತದೆಂಬು

ದನ್ನು ಬ್ರಿಫಾಲ್ಟ್ ಈ ರೀತಿ ವಿವರಿಸುತ್ತಾರೆ, ''ಗೋರಿಲ್ಲಾ ಮರಿಗಳನ್ನು ಹಿಡಿಯಲು ಇರುವ ಒಂದೇ ಒಂದು ದಾರಿಯೆಂದರೆ, ಆ ಮರಿಗಳ ತಾಯಿಯನ್ನು ಮೊದಲು ಕೊಂದು ಹಾಕುವುದು. ಏಕೆಂದರೆ, ಕೊನೆಯ ಗುಟುಕು ಪ್ರಾಣವಿರುವವರೆಗೂ ಗೋರಿಲ್ಲಾಗಳು ತಮ್ಮ ಮರಿಗಳ ರಕ್ಷಣೆಗಾಗಿ ಹೋರಾಡುತ್ತವೆ. ಒಂದು ವೇಳೆ ತಾಯಿಯ ಹಿಡಿತದಿಂದ ನೀವು ಒಂದು ಮರಿಯನ್ನು ಕಸಿದು ತಂದಿರೆನ್ನಿ. ಆಗ ನಿಮಗೆ ತಿಳಿಯದಂತೆ ತಾಯಿ ಗೋರಿಲ್ಲಾ ನಿಮ್ಮ ಜಾಡನನ್ನುಸರಿಸಿ ಬಂದು, ಸಾಧ್ಯವಾದರೆ ನಿಮ್ಮನ್ನು ಕೊಂದು, ತನ್ನ ಮರಿಯನ್ನು ಕೊಂಡೊಯ್ಯುತ್ತದೆ.''

ತಾಯಿ - ಮಕ್ಕಳ ಸಂಬಂಧದಲ್ಲಿ ಪಕ್ಷಿ ಸಂಕುಲವೂ ಹಿಂದೆ ಬಿದ್ದಿಲ್ಲ (ಈ ನಿಯಮಕ್ಕೆ ಕೋಗಿಲೆ ಒಂದು ಅಪವಾದ.) ತನ್ನ ಆರೈಕೆ ಮಾಡುವ ತಾಯಿಯನ್ನೋ ಅಥವಾ ಅದೇ ಕೈಂಕರ್ಯವನ್ನು ಕೈಗೊಂಡ ಯಾರನ್ನೇ ಆಗಲಿ ಹಿಂಬಾಲಿಸಿ, ಅವು ಹೋದಲ್ಲೆಲ್ಲ ಹಿಂಬಾಲಿಸುವುದು ಹಕ್ಕಿ ಮರಿಗಳ ಸಹಜಗುಣ.

ಈ ದಿಸೆಯಲ್ಲಿ ಹಕ್ಕಿ ಮರಿಗಳು ತಮ್ಮ ತಾಯಿಗೆ ತೋರುವ ನಿಷ್ಠೆಯ ಪರಿಮಾಣವೆಷ್ಟೆಂಬುದನ್ನು ಜರ್ಮನ್ ಜೀವಶಾಸ್ತ್ರಜ್ಞ ಡಾ.ಕಾನ್‌ರಾಡ್ ಲೋರೆನ್ಸ್ ತಾವು ಕೈಗೊಂಡ ಪ್ರಯೋಗಗಳ ಮೂಲಕ ಸ್ಪಷ್ಟಪಡಿಸಿದ್ದಾರೆ.

ಡಾ.ಕಾನ್‌ರಾಡ್ ಲೋರೆನ್ಸ್‌ರವರು, ಕಾವಿಗೆ ಕುಳಿತಿದ್ದ ಬಾತುಗೋಳಿಯ ಬಳಿಯಿಂದ ಈಗಲೋ ಆಗಲೋ ಮರಿಯಾಗುವಂತಿದ್ದ ಹಲವು ಮೊಟ್ಟೆಗಳನ್ನು ಕದ್ದು ತಂದು, ಅವುಗಳನ್ನು ಪ್ರತ್ಯೇಕವಾಗಿ ಇರಿಸಿ ಆ ಮೊಟ್ಟೆಯೊಡೆದು ಮರಿಗಳು ಹೊರಬಂದಾಗ ಅವು ಕಾಣಬಹುದಾದ ಮೊದಲ ಜೀವಿ ತಾನಾಗಿರುವಂತೆ ನೋಡಿಕೊಂಡರು. ಹಾಗೆ ಹೊರ ಬಂದ ಮರಿಗಳನ್ನು ತಾಯಿಯಂತೆ ಪೋಷಿಸುತ್ತಾ ಬಂದರು. ಕೆಲದಿನಗಳಲ್ಲೇ ಅವರು ಎಲ್ಲಿ ಹೊರಟರೂ ಏಳು ಪುಟ್ಟ ಬಾತು ಮರಿಗಳು ಅವರ ಬೆನ್ನಟ್ಟುತ್ತಿದ್ದವು. ಅವರು ನಡಿಗೆಯ ವೇಗ ಹೆಚ್ಚಿಸಿದಂತೆಲ್ಲಾ ಅವು ವೇಗವಾಗಿ ಕುಪ್ಪಳಿಸುತ್ತಾ ಅವರನ್ನು ಹಿಂಬಾಲಿಸಿದವು. ಅವರ ಹಾಗೂ ಬಾತಿನ ಮರಿಗಳ ಹಿಂಡಿನ ಅಂತರ ಹೆಚ್ಚಾದಾಗಲೆಲ್ಲಾ ಅವು ಭಯಭೀತವಾಗಿ ಗಲಿಬಿಲಿಗೊಳ್ಳುತ್ತಿದ್ದವು. ಹಾಗೇ ಮುನ್ನಡೆದು ಅವರು ಒಂದು ಸಣ್ಣ ದೋಣಿಯಲ್ಲಿ ಕುಳಿತು ಸರೋವರ ದಾಟಲಾರಂಭಿಸಿದಾಗ ಬಾತುಮರಿಗಳೂ ನೀರಿನಲ್ಲಿ ಧುಮುಕಿ ಶಿಸ್ತಿನ ಸಿಪಾಯಿಗಳಂತೆ ಅವರನ್ನು ಹಿಂಬಾಲಿಸಿದವು; ಅವುಗಳ ರೆಕ್ಕೆ ಬಲಿತು ಹಾರುವಂತಾದ ಮೇಲೆ ಅವರು ತಮ್ಮ ಪ್ರಯೋಗದ ಅಂತಿಮ ಪರೀಕ್ಷೆಯನ್ನು ಕೈಗೊಂಡರು.

ಅವರು ಒಂದು ಸಣ್ಣ ವಿಮಾನದಲ್ಲಿ ಕುಳಿತು ಆಗಸಕ್ಕೆ ಹಾರಿದರು. ಆಗ ಆ ಬಾತು ಮರಿಗಳು ಗಾಳಿಯಲ್ಲಿ ಎಗರಾಡುತ್ತಾ ವಿಮಾನವನ್ನು (ಸ್ಪರ್ಶಿಸಲು) ಹಿಂಬಾಲಿಸಲು ಶಕ್ತಿ ಮೀರಿ ಹೆಣಗುತ್ತಿದ್ದವು. ಈ ಎಲ್ಲ ಪ್ರಯೋಗಗಳಿಂದ ಪ್ರಾಣಿ ಪಕ್ಷಿಗಳಲ್ಲಿಯೂ ತಾಯ್ತನ ಎಷ್ಟು ಮಹತ್ವದ್ದು ಎಂಬುದು ತಿಳಿದುಬರುತ್ತದೆ. ಹಾಗೂ ಮಾತೃವಾತ್ಸಲ್ಯದಿಂದ ವಂಚಿತವಾದ ಜೀವಿಗಳ ಬಾಳು ಎಷ್ಟು ದುರ್ಭರ ಎಂಬುದೂ ಸ್ಪಷ್ಟವಾಗುತ್ತದೆ. ●

ಪ್ರತಿಯೊಬ್ಬನೂ ಪ್ರತಿದಿನ ಸ್ವಲ್ಪಾದರೂ ಒಳ್ಳೆಯ ಸಂಗೀತ ಕೇಳಬೇಕು, ಒಳ್ಳೆಯ ಕಾವ್ಯ ಓದಬೇಕು, ಒಳ್ಳೆಯ ಚಿತ್ರ ನೋಡಬೇಕು, ಸಾಧ್ಯವಾದರೆ ಕೆಲವು ಒಳ್ಳೆಯ ಶಬ್ದಗಳನ್ನಾಡಬೇಕು.

— ಗಯಟೆ

# ಇದು ನಮ್ಮ ಜೀವ ಇದು ಜೀವನ

ನನಗೆ ಪುಸ್ತಕಗಳನ್ನು ಓದುವ ಮತ್ತು ಶೇಖರಿಸಿಡುವ ಗೀಳು ಚಿಕ್ಕಂದಿನಿಂದ ಉಂಟು. ಯಾರಾದರೂ ಪರಿಚಯಸ್ಥರು, ಪುಸ್ತಕಗಳನ್ನು ಕೇಳಿದ್ದರೆ, ಓದಲು ಕೊಟ್ಟು, ಜೋಪಾನವಾಗಿ ಹಿಂತಿರುಗಿಸುವಂತೆ ಕೇಳಿ ಕೊಳ್ಳುತ್ತಿದ್ದೆ. ಬೆಂಗಳೂರಿನಲ್ಲಿ ನಾನು ವಾಸ ಮಾಡುತ್ತಿರುವ ರೂಮಿಗೆ ಆಗಾಗ ನನ್ನ ಪರಿಚಯದ ಇಂಜನೀಯರಿಂಗ್ ವಿದ್ಯಾರ್ಥಿಗಳು ಬರುತ್ತಿದ್ದರು. ಒಂದು ಸಲ 'ರೀಡರ್ಸ್ ಡೈಜೆಸ್ಟ್'ನ ಒಂದು ಚಿಕ್ಕ ಕೈಪಿಡಿಯನ್ನು ಓದಲು ಕೇಳಿದ್ದರಿಂದ ಕೊಟ್ಟೆ. ಅದು ತಿಂಗಳುಗಳು ಕಳೆದರೂ ಹಿಂದಕ್ಕೆ ಬರಲಿಲ್ಲ. ಅವರ ರೂಮಿಗೆ ನಾನೇ ಹೋಗಿ ಪುಸ್ತಕ ಕೇಳಿದೆ. ಅದನ್ನು ಬೇರೆ ಯಾರೋ ತೆಗೆದುಕೊಂಡು ಹೋಗಿದ್ದು, ಅದು ಹಿಂದಕ್ಕೆ ಬಂದರೆ ನನಗೆ ಕೊಡುವುದಾಗಿ ಹೇಳಿದರು. ಈ ವರೆಗೆ ಆ ಪುಸ್ತಕ ನನಗೆ ಹಿಂದಕ್ಕೆ ಬಂದಿಲ್ಲ.

ಕೆಲವು ದಿನಗಳಿಂದ ಪ್ರತಿದಿನ, ಬೆಳಿಗ್ಗೆ ಒಬ್ಬ ಹೊಸ ಹುಡುಗ ನಮ್ಮ ರೂಮಿನ ಕಸಗೂಡಿಸಲು ಬರುತ್ತಿದ್ದ. ಆಸಕ್ತಿಯಿಂದ ಮೇಜಿನ ಮೇಲಿದ್ದ ಪುಸ್ತಕಗಳನ್ನು ಗಮನಿಸುತ್ತಿದ್ದ. ಸಹಜವಾಗಿ ಅವನ ವಿದ್ಯಾಭ್ಯಾಸದ ಬಗ್ಗೆ ವಿಚಾರಿಸಿದೆ. 10ನೆಯ ತರಗತಿಯವರೆಗೆ ಓದಿದ್ದು, ಸಂಸಾರ ತಾಪತ್ರಯಗಳಿಂದ ತನ್ನ ತಂದೆ ರೂ. 250/- ತಿಂಗಳ ಸಂಬಳಕ್ಕೆ ಕಸ ಗೂಡಿಸಲು ಕಳಿಸಿರುವುದಾಗಿ ಹೇಳಿದ. ಓದಿನ ಬಗ್ಗೆ ಅವನಿಗಿದ್ದ ಆಸಕ್ತಿಯನ್ನು ಗಮನಿಸಿ, ಆಗಾಗ ನನ್ನಲ್ಲಿದ್ದ ಪುಸ್ತಕಗಳನ್ನು ಓದಲು ಕೊಡುತ್ತಿದ್ದೆ. ಅವುಗಳನ್ನು ಅವನು ಅಷ್ಟೇ ಜೋಪಾನವಾಗಿ ಹಿಂದಕ್ಕೆ ತಂದುಕೊಡುತ್ತಿದ್ದ. ಒಮ್ಮೆ ಆತ ಡಿಸೆಂಬರ್'89ರ ಒಂದು ಮಾಸಪತ್ರಿಕೆಯನ್ನು ಕೇಳಿ ಪಡೆದುಕೊಂಡ. ಮರುದಿನ ಬೆಳಿಗ್ಗೆ ನನ್ನ ಆ ಸಂಚಿಕೆಯ, ಬದಲು ಅದೇ ತಿಂಗಳಿನ ಬೇರೆ ಪ್ರತಿಯನ್ನು ತಂದು ಕೊಟ್ಟ. ನಾನು ಕೊಟ್ಟಿದ್ದ ಸಂಚಿಕೆಯನ್ನು ಯಾರೋ ಅಪಹರಿಸಿರುವುದರಿಂದ, ಅದರ ಬದಲಿಗೆ ಹೊಸದನ್ನು ಖರೀದಿಸಿ ತಂದಿರುವುದಾಗಿ ಹೇಳಿದ. ಒಂದು ಕ್ಷಣ ನನಗೆ ಮಾತೇ ಹೊರಡಲಿಲ್ಲ. ಇನ್ನೊಬ್ಬರ ಪುಸ್ತಕದ ಬಗ್ಗೆ ಅವನಿಗಿದ್ದ ಕಾಳಜಿಗೆ ಯಾವ ಬೆಲೆ ಕಟ್ಟಲೂ ಸಾಧ್ಯವಿರಲಿಲ್ಲ. ಅವನ ಕುಂಠಿತವಾಗಿರುವ ವಿದ್ಯಾಭ್ಯಾಸವನ್ನು ಮುಂದುವರಿಸಲು ನನ್ನ ಕೈಲಾದ ಸಹಾಯ ಮಾಡಲು ನಿರ್ಧರಿಸಿದೆ.

– ಎಂ.ಜಿ.ವೆಂಕಟಸ್ವಾಮಿ

ಆರೇಳು ವರ್ಷಗಳ ಹಿಂದೆ ನಾವು ಶಿವಮೊಗ್ಗೆಯಲ್ಲಿದ್ದಾಗ ನಡೆದ ಘಟನೆ. ಒಂದು ದಿನ ನನ್ನ ಒಬ್ಬ ಆತ್ಮೀಯ ಸ್ನೇಹಿತೆಯನ್ನು ತಮ್ಮ ಪತಿಯೊಡನೆ ಮದುವೆಗೆ ಹೋಗಿದ್ದರು. ತಿರುಗಿ ಮನೆಗೆ ಬಂದಾಗ ರಾತ್ರಿ ಬಹಳವಾಗಿತ್ತು. ಮದುವೆಯಲ್ಲಿ ಓಡಾಟ ಬಹಳವಾಗಿದ್ದರಿಂದ ಬಳಲಿಕೆಯೂ ಆಗಿತ್ತು. ಆದ್ದರಿಂದ ಕೊರಳಲ್ಲಿ ಧರಿಸಿದ್ದ ಮೂರು ತೊಲೆ ಚಿನ್ನದ ಹಾರ ತೆಗೆದು ಬೀರುವಿನಲ್ಲಿಡಲೂ ಬೇಸರವೆನಿಸಿ, ಅದನ್ನು ಧರಿಸಿಯೇ ಮಲಗಿದರೆ ಚುಚ್ಚುವದೆಂದು, ಅದನ್ನು ತಮ್ಮ ಪತಿಯ ಶರ್ಟಿನ ಜೇಬಿನಲ್ಲಿಟ್ಟು, ಬೆಳಿಗ್ಗೆ ಬೀರುವಿನಲ್ಲಿರಿಸಿದರಾಯಿತೆಂದುಕೊಂಡಳು.

ಮರುದಿನ ಬೆಳಿಗೆ ಕೆಲಸದ ಗಡಿಬಿಡಿಯಲ್ಲಿ ಜೇಬಿನಲ್ಲಿ ಸರವಿಟ್ಟದ್ದು ಮರೆತೇ ಹೋಯಿತು. ಎಂದಿನಂತೆ ಬೆಳಗಿನ ಹೊತ್ತು ಧೋಬಿಯವನ ಮಗ ಬಟ್ಟೆಗಳನ್ನು ಕೇಳಲು ಬಂದ. ಅವಳ ಯಜಮಾನರು ಆ ಶರ್ಟನ್ನು ಹಾಗೆಯೇ ಆ ಹುಡುಗನಿಗೆ ಕೊಟ್ಟರು. ಸುಮಾರು ಬಟ್ಟೆಗಳನ್ನು ಕೈಮೇಲೆ ಹಾಕಿಕೊಂಡಿದ್ದ ಹಾಗೆಯೇ ಈ ಶರ್ಟನ್ನು ಕೂಡ ಆ ಬಟ್ಟೆಗಳ ಮೇಲೆ ಹಾಕಿಕೊಂಡು ಆ ಹುಡುಗ

ಹೊರಟು ಹೋದ. ನನ್ನ ಸ್ನೇಹಿತೆಯ ಅದೃಷ್ಟವೇನೋ, ಆ ಶರ್ಟಿನ ಜೇಬಿನಲ್ಲಿದ್ದ ಹಾರ ಕೆಳಗೆ ಬೀಳದೆ, ಆ ಧೋಬಿಯ ಹೆಂಡತಿಯು ಬಟ್ಟೆಗಳನ್ನು ತೆಗೆಯುವಾಗ ಅವಳ ಕೈಗೆ ಸಿಕ್ಕಿತು.

ಆ ಧೋಬಿಯ ಕಾಯಂ ಗಿರಾಕಿಗಳಾಗಿದ್ದರಿಂದ ಆ ಸರ ಯಾರದ್ದೆಂದು ಗೊತ್ತಾಗಿ ಮನೆಗೆ ಬಂದು ತಮ್ಮ ಹಾರವನ್ನು ಹಿಂದಿರುಗಿಸಿದ ವಿಷಯವನ್ನು ನನ್ನ ಗೆಳತಿ ತಿಳಿಸಿದಾಗ ನಮಗಾದ ಆಶ್ಚರ್ಯ ಅತೀವ. ಅವರು ಬಡವರು. ದೊಡ್ಡ ಸಂಸಾರ ಬೇರೆ. ಮೈಮುರಿದು ದುಡಿದಾಗಲೇ ಅವರೆಲ್ಲರ ಹೊಟ್ಟೆ ತುಂಬಬೇಕು. ದಾರಿಯಲ್ಲಿ ಬರುವಾಗ ಆ ಚಿನ್ನದ ಹಾರ ಜೇಬಿನಿಂದ ಬಿದ್ದಿರಬೇಕು ಎಂದು ಆಕೆ ಸುಳ್ಳು ಹೇಳಿ ಅನಾಯಾಸವಾಗಿ ಬಂದ ಆ ಸರವನ್ನು ದೋಚಬಹುದಾಗಿತ್ತು.

- ಲತಾ ಜಿ. ಕುಲಕರ್ಣಿ

**ಜಾ**ಮನಗರದಲ್ಲಿ ವಾಯುದಳದಲ್ಲಿ ಸೇವೆ ಸಲ್ಲಿಸುತ್ತಿದ್ದ ನಾವು ಮೂವರು ಸಹೋದ್ಯೋಗಿಗಳು ದೀಪಾವಳಿಗೆಂದು ರಜೆಯ ಮೇಲೆ ಧಾರವಾಡಕ್ಕೆ ಹೊರಟಿದ್ದವು. ನಮ್ಮ ರೈಲು ರಾತ್ರಿಯೂಟದ ಸಮಯಕ್ಕೆ ಸರಿಯಾದ ವಿರಮ್‌ಗಾಮ್ ನಿಲ್ದಾಣಕ್ಕೆ ಬಂದಿತು. ಶಾಕಾಹಾರಿ ಭೋಜನಾಲಯ ನಮ್ಮ ಬೋಗಿಯಿಂದ ಬಹುದೂರವಿತ್ತು. ಸಹಪ್ರಯಾಣಿಕರಿಗೆ ನಮ್ಮ ಸಾಮಾನುಗಳತ್ತ ಗಮನವಿಡುವಂತೆ ಕೇಳಿಕೊಂಡು ಭೋಜನಾಲಯದತ್ತ ಓಡಿದೆವು. ಅಲ್ಲಿ ವಿಪರೀತ ಗದ್ದಲ, ನಾವು ಮೂವರಿಗೂ ಒಂದೆಡೆಗೇ ಕೂಡಲು ಆಗ ಸಿಗಲಿಲ್ಲ. ಈ ನಿಲ್ದಾಣದಲ್ಲಿ ಟೋಕನ್ ಪದ್ಧತಿ ಇರಲಿಲ್ಲವಾದ್ದರಿಂದ ಜಾಗ ಸಿಕ್ಕಲ್ಲಿ ಕುಳಿತು ಆತುರಾತುರವಾಗಿ ಊಟ ಮಾಡಿದ ನಂತರ ನಾನು ಮೂವರ ಊಟಕ್ಕೂ ಹಣ ಕೊಟ್ಟು ಬಂದೆ. ಬೋಗಿಗೆ ಮರಳಿ ಬಂದನಂತರ ನನ್ನ ಇನ್ನೊಬ್ಬ ಸಹೋದ್ಯೋಗಿಯೂ ಮೂವರ ಊಟದ ಹಣ ಕೊಟ್ಟಿದ್ದು ತಿಳಿಯಿತು. ಆದರೆ ರೈಲು ಆಗಲೇ ನಿಲ್ದಾಣ ಬಿಟ್ಟಿದ್ದರಿಂದ ನಾವೇನೂ ಮಾಡುವ ಹಾಗಿರಲಿಲ್ಲ.

ಹಬ್ಬ ಮುಗಿಸಿಕೊಂಡು ನಾನು ಹಾಗೂ ನನ್ನ ಮಿತ್ರ ನರಗುಂದದ ಪಾಟೀಲರು ಒಂದೇ ದಿನ, ಒಂದೇ ರೈಲಿಗೆ ವಾಪಸು ಜಾಮನಗರಕ್ಕೆ ಹೊರಟೆವು. ಈಗ ವಿರಮ್‌ಗಾಮ್ ನಿಲ್ದಾಣಕ್ಕೆ ಬೆಳಗಿನ 7-15ಕ್ಕೆ ಬಂತು. "ನಾವು ಕೊಟ್ಟ ಹೆಚ್ಚಿನ ಹಣವನ್ನು ಈಗೇಕೆ ಪಡೆಯಬಾರದು?" ಎಂದೆ. "ಆ ಗದ್ದಲದಲ್ಲಿ ಹೆಚ್ಚು ಹಣ ಕೊಟ್ಟಿದ್ದು ಅವನಿಗೆ ಹೇಗೆ ಗೊತ್ತಾಗಬೇಕು? ಮೊದಲೇ ವ್ಯಾಪಾರಸ್ಥ. ಗೊತ್ತಾದರೂ ಆ ಹಣವನ್ನು ಕೊಟ್ಟಾನೆಯೆ; ಎಂದರು ಪಾಟೀಲರು. ಆದರೂ ಪ್ರಯತ್ನಿಸೋಣವೆಂದು ಭೋಜನಾಲಯಕ್ಕೆ ಹೋದೆ. ಗಡ್ಡಬಿಟ್ಟ ಅದೇ ವ್ಯಕ್ತಿ ಮೇಲೆ ಕುಳಿತಿದ್ದ. ನಮ್ಮನ್ನು ಪ್ರಶ್ನಾರ್ಥಕವಾಗಿ ನೋಡಿದಾಗ ನಾನು ಹಿಂದಿಯಲ್ಲಿ "ಕ್ಷಮಾಕೀಜಿಯೆ. ನಾವು ಮೂರು ಮಂದಿ ವಾಯುದಳದವರು. ಇಂಥಾ ದಿನ, ಇಂಥಾ ದಿನಾಂಕದಂದು ರಾತ್ರಿ ರೈಲಿನಿಂದ ಬಂದು ಊಟ ಮಾಡಿದೆವು. ಗದ್ದಲವಿದ್ದುದರಿಂದ ಇಬ್ಬರೂ ಹಣಕೊಟ್ಟಿದ್ದು ತಿಳಿಯಲಿಲ್ಲ. ಗಡಿಬಿಡಿ, ಒಳಗೆ ಗದ್ದಲದಾಗ ಎರಡ ಸರೆ ಒಟ್ಟು ನಾವು ನಿಮಗೆ ಹದಿನೈದು ರೂಪಾಯಿ ಕೊಟ್ಟಿದ್ದವು...." ಎಂದು ನಾನು ಮಾತು ಮುಗಿಸುವ ಪೂರ್ವದಲ್ಲಿಯೇ ಐದರ ಮೂರು ಹಸಿರು ನೋಟುಗಳನ್ನು ತಾನು ಎಣಿಸುತ್ತಿದ್ದ ಕಂತೆಯಿಂದ ತೆಗೆದು ಕೊಟ್ಟು ಒಂದೂ ಮಾತನಾಡದೆ ತನ್ನ ಕಾರ್ಯ ಮುಂದುವರೆಸಿದ. ಈ ಹದಿನೈದು ರೂಪಾಯಿ ಮರಳಿ ಬರಲು ಕಾರಣವಾದದ್ದು ನನ್ನ ಪ್ರಯತ್ನಶೀಲತೆಯೊ ಅಥವಾ ನನ್ನ ಧ್ವನಿಯಲ್ಲಿನ ಪ್ರಾಮಾಣಿಕತೆಯೊ ಅಥವಾ ಮಾಲಿಕನಿಗೆ ಪ್ರಯಾಣಿಕರ ಮೇಲಿದ್ದ ನಂಬುಗೆಯೋ ಅಥವಾ ವಾಯುದಳದ ಹೆಸರಿನ ಪ್ರಭಾವವೂ ಅಥವಾ ಇವೆಲ್ಲದರ ಸಮ್ಮಿಶ್ರಣವೂ ಎಂದು ಯೋಚಿಸುತ್ತಲೇ ಗಾಡಿಗೆ ಮರಳಿದೆ.

- ವಸಂತ ವಾಯಿ

# ಕೊನೆಯ ಅಧ್ಯಾಯ

'ಗಂಗಾ' ಪಾದೇಕಲ್

ಶಾರದಮ್ಮ ಬಸ್ಸಿಳಿದಾಗ ಸಂಜೆಯಾಗುತ್ತಿತ್ತು. ಸ್ಟಾಂಡಿನಿಂದ ಮಗನ ಮನೆಗೆ ಕಾಲು ತಾಸಿನ ನಡಿಗೆ. ಹಾಗೆ ನಡೆಯುತ್ತಿದ್ದಾಗ ಆಕೆ ಉದಾಸರಾಗಿದ್ದರು. ಮನದಲ್ಲಿ ಪದೇ ಪದೇ ಮೂಡುತ್ತಿದ್ದುದು ತನ್ನನ್ನು ಕಂಡೊಡನೇ ಮೋರೆ ಗಂಟಿಕ್ಕಬಹುದಾದ ಸೊಸೆ ವಿಜಯಳ ಚಿತ್ರ. "ಖಂಡಿತ ಅವಳಿಗೆ ಸಿಟ್ಟು ಬರದೇ ಇರಲಿಕ್ಕಿಲ್ಲ. ಯಾಕೆಂದರೆ ನಾನಿಲ್ಲಿಂದ ತೆರಳಿ ವಾರವಾಯ್ತಷ್ಟೇ" ಆಕೆ ಯೋಚಿಸುತ್ತ ಖಿನ್ನರಾದರು. ಹಾಗೆಂದು ಮಗಳ ಮನೆಯೇನೂ ಶಾಶ್ವತವಲ್ಲ. ತಮಗೂ ಗೊತ್ತು, ಆ ಸಂಗತಿ. ಆದರೂ ಮೊನ್ನೆ ಮಗಳ ಅತ್ತೆ ಬರದೇ ಇರುತ್ತಿದ್ದರೆ ಇನ್ನೂ ಸ್ವಲ್ಪ ದಿನ ಅಲ್ಲಿಯೇ ತಳ್ಳಬಹುದಿತ್ತು. ಆಕೆಯೋ ಮಹಾ ಗಡಸುಗಾತಿ. ಗಳಿಗೆ - ಗಳಿಗೆಗೂ ತಾನಿರುವುದು ಹಂಗಿನ ಮಗಳ ಮನೆಯಲ್ಲಿಯೇ ಹೊರತು, ಹಕ್ಕಿನ ಮಗನ ಮನೆಯಲ್ಲಲ್ಲ ಎನ್ನುವುದನ್ನು, ಚುಚ್ಚು ಮಾತುಗಳ ಮೂಲಕ ಹೇಗೆ ತೋರಿಸಿಕೊಟ್ಟರು... "ಮಗ ತಾನೇ ನಾಳೆ ತಿಥಿ ಮಾಡುವವನು."

"ಆದ್ದರಿಂದಲೇ ಹೀಗೆ ಒಮ್ಮೆ ಬಂದೆ ನೋಡಿ ಅತ್ಗೆಮ್ಮ, ಇನ್ನೇನು ನಾಳೆ ನಾಡಿದ್ದರಲ್ಲಿ ಹೊರಟೆನೇ."

"ಎಷ್ಟಾದರೂ ಅವರದೂ ಪೇಟೆ ಸಂಸಾರ ನೋಡಿ, ಖರ್ಚು ಅದರಲ್ಲೂ ಪೇಟೆ ಖರ್ಚು ಸುಮ್ಮನಾಗುತ್ತೆಯೇ?" ಎನ್ನುತ್ತ ತನ್ನ ಇರವು ಅಲ್ಲಿ ಅನಗತ್ಯ ಎಂದು ತೋರಿಸಿದ್ದಲ್ಲದೆ "ಹೀಗೆಂದೆ ಅಂತ ತಪ್ಪು ತಿಳಿದುಕೊಳ್ಳಬೇಡಿ ಅತ್ಗೆಮ್ಮಾ, ಮೊದಲೇ ನಿಮ್ಮ ಸೊಸೆ ಜೋರಂತೆ. ನೀವು ಹೀಗೆ ಆಗಾಗ್ಗೆ ಮಗಳ ಮನೇಂತ ಬಂದುಬಿಟ್ಟರೆ, ಆಮೇಲೆ ನಿಮ್ಮನ್ನು ಒಳಕ್ಕೇ ಸೇರಿಸಲಿಕ್ಕಿಲ್ಲ, ಅಲ್ಲ, ಹಾಗಂತ ಇದೂ ಮಗಳ ಮನೆಯೇ ಆದರೂ ನಾಳೆ ತಿಥಿ ಮಾಡೋವನು ಮಗನೇ ಹೊರತು ಮಗಳಲ್ಲವಲ್ಲಾ?" ಎಂದೂ ಸಲಹೆ ಕೊಟ್ಟುಬಿಟ್ಟಿದ್ದರು ಮೊನ್ನೆ ಸಂಜೆ. ಆ ಮಾತುಗಳ ಮೊನಚು ವ್ಯಂಗ್ಯಗಳನ್ನು ಸಹಿಸದೇ ಹೇಳಿದ್ದರು ಮಗಳಲ್ಲಿ, "ನಾನು ಹೋಗುತ್ತೇ

ನಮ್ಮ ಇವತ್ತು'' ಎಂದಿದ್ದರು.

''ಅದೇನಮ್ಮಾ ಇಷ್ಟು ಬೇಗ?'' ಶಾಲೆ ಒಂದರಲ್ಲಿ ಟೀಚರಾಗಿ ದುಡಿಯುತ್ತಿರುವ ಮಗಳು ಆಶ್ಚರ್ಯದಿಂದ ಕೇಳಿದಾಗ, ನಿಜ ಸಂಗತಿ ಹೇಳಿಬಿಡೋಣ ಎನ್ನಿಸಿದರೂ 'ಯಾಕೆ ಹೇಳಿ ಅವಳಿಗೆ ಬೇಸರ ಉಂಟು ಮಾಡಲಿ? ಹೇಗಿದ್ದರೂ ಆ ಬಗ್ಗೆ ಅವಳೇನೂ ಮಾಡುವಂತಿಲ್ಲ' ಎಂದೂ ಅನಿಸಿತ್ತು. ಹಾಗೆಂದೇ ''ಇಲ್ಲಮ್ಮ, ಅಲ್ಲಿ ನಿನ್ನತ್ತಿಗೇಗೂ ಅಷ್ಟು ಹುಷಾರಿರಲಿಲ್ಲ'' ಎನ್ನುತ್ತಿದ್ದಾಗ ಅದೆಲ್ಲಿದ್ದರೋ, ಆ ಘಟವಾಣಿ ಬೀಗಿತ್ತಿ ಹಾಜರಾಗಿ ''ಯಾಕೆ ಅವರನ್ನು ಒತ್ತಾಯಿಸುತ್ತಿ? ಹಾಗೆ ಆಗಾಗ್ಗೆ ಬರುತ್ತಿರುತ್ತಾರಲ್ಲ? ಇಷ್ಟಕ್ಕೂ ಯಾರ್‍ಯಾರು ಎಲ್ಲೆಲ್ಲಿರಬೇಕೋ ಅಲ್ಲಲ್ಲಿದ್ದರೇ ಚೆಂದ'' ಎಂದು ಲೊಟಕಿದ್ದರು, ಅಲ್ಲವೆ? ಈಗ ಅದನ್ನು ಮತ್ತೆ ನೆನೆಸಿದಾಗ, ಮೊನ್ನೆ ಆದ ಹಾಗೇ ಇಂದೂ ಎದೆಯಾಳದಲ್ಲಿ ತಳಮಳ ಎದ್ದಿತು. ನಿಜವೇ. ಯಾರ್‍ಯಾರ ಸ್ಥಾನ ಎಲ್ಲೆಲ್ಲಿರಬೇಕೋ ಅಲ್ಲಲ್ಲಿದ್ದರೇ ಚೆಂದ.

ಬೀಗಿತ್ತಿಗೆ ದೇವರ ಕೃಪೆಯಿಂದ ಹಳ್ಳಿಯಲ್ಲಿ ತಮ್ಮದೇ ಆದ ಮನೆ, ಆಸ್ತಿ ಎಲ್ಲ ಇವೆ. ಎಲ್ಲಕ್ಕೂ ಮಿಗಿಲಾಗಿ ಕೈ ಹಿಡಿದವನಿದ್ದಾನೆ. ತಮಗೆ? ಅದೇ ಇಲ್ಲ. ಕಷ್ಟ - ಸುಖಗಳಲ್ಲಿ ಪಾಲ್ಗೊಳ್ಳುವ ಜೀವನದ ಜತೆಗಾರನನ್ನು ತಾವು ಕಳೆದುಕೊಂಡದ್ದು ಇಂದು, ನಿನ್ನೆಯೇ? ಇಪ್ಪತ್ತು ವರ್ಷಗಳೇ ಕಳೆದು ಹೋದವು ಆ ಮಾತಿಗೆ. ಆ ನಂತರದ ಬದುಕು, ಬದುಕಾಗಿರಲಿಲ್ಲ, ಒಂದು ತಪಸ್ಸಾಗಿತ್ತು. ಅಂತೂ ಐದು ವರ್ಷಗಳಿಗೆ ಮುನ್ನ








ಮಗಳಿಗೆ ಟೀಚರ್ ಕೆಲಸ ಸಿಕ್ಕಿ, ಅದೇ ವರ್ಷ ಮದುವೆಯೂ ಆದಾಗ ಧನ್ಯತೆಯ ನಿಟ್ಟುಸಿರು ಹೊರಬಿದ್ದದ್ದು ಸುಳ್ಳಲ್ಲ. ಮಗಳ ಲಗ್ನವಾಗುತ್ತಲೇ ಮಗನಿಗಾಗಿ ಕನ್ಯಾಪಿತೃಗಳು ಸುಳಿದಾಡತೊಡಗಿದ್ದರು. ಮಗ ಶ್ರೀಧರ ಮಗಳು ಶ್ಯಾಮಲಳಿಂದ ನಾಲ್ಕು ವರ್ಷಕ್ಕೆ ದೊಡ್ಡವ. ಮೇಲಾಗಿ ಒಳ್ಳೆ ಕೆಲಸವೂ ಇತ್ತು. ಹೀಗಾಗಿ ಸೊಸೆ ಬರಲು ತಾವೂ ಉತ್ಸಾಹ ತೋರಿಸಿದ್ದರು. ಶ್ರೀಧರನಿಗೆ ಹೇಗೂ ಮನಸ್ಸಿದ್ದೇ ಇತ್ತು. ಹಾಗೆ ವಿಜಯ ಸೊಸೆಯಾಗಿ ಬಂದಳು. ಬಂದು 'ಒಳ್ಳೆ ಹುಡುಗಿ' ಎಂದು ತಾವು ಭಾವಿಸಲಾರಂಭಿಸಿದಾಗಲೇ ತನ್ನ ನಿಜ ಸ್ವರೂಪವನ್ನೂ ತೋರಿಸಲಾರಂಭಿಸಿದ್ದಳು. ಆದರೆ ತಮಗೋ ಯಾವುದನ್ನೂ ಅತಿಯಾಗಿ ಹಚ್ಚಿಕೊಳ್ಳುವ ಸ್ವಭಾವವಿರಲಿಲ್ಲ. ಬಹುಶಃ ಬಡತನದ ಬದುಕೇ ಅದನ್ನು ಕಲಿಸಿದ್ದಿರಬೇಕು. ಆದ್ದರಿಂದಲೇ ಅವಳ ದುಂದುಗಾರಿಕೆಯನ್ನು ಧಾರಾಳತನವೆಂದೂ, ಮಾತು ಮಾತಿಗೆ ತನ್ನ ತವರನ್ನು ಹಾಡಿ ಹೊಗಳುತ್ತ, ಹೊಕ್ಕ ಮನೆಯನ್ನು ತೆಗಳುವ ಅವಳ ಸ್ವಭಾವವನ್ನು ಮಕ್ಕಳಾಟಿಕೆಯೆಂದೂ ಸಹಿಸಿದರು. ಆದರೆ ಬರಬರುತ್ತಾ ಅವೆಲ್ಲಾ 'ಅತಿ' ಎನ್ನಿಸಿದಾಗ ತಡೆಯಲಾರದೇ ನಾಲ್ಕು ಬುದ್ಧಿ ಮಾತು ಹೇಳ ಹೋದರು. ಅದುವೇ ತಾವು ಮಾಡಿದ ದೊಡ್ಡ ತಪ್ಪಾಗಿತ್ತು. ಆ ವೇಳೆಗಾಗಲೇ ಗಂಡನ ಮೇಲೆ ತನ್ನ ಪ್ರಭುತ್ವವನ್ನು ಯಶಸ್ವಿಯಾಗಿ ಸ್ಥಾಪಿಸಿದ್ದ ಅವಳಿಂದ ಚೆನ್ನಾಗಿ ಕಿವಿ ಹಿಂಡಿಸಿಕೊಂಡಿದ್ದ ಮಗ ತಮಗೇ ಬುದ್ಧಿ ಹೇಳಿದ, "ಅಮ್ಮಾ, ಇದು ನಿನ್ನ ಕಾಲವಲ್ಲ, ಅದೂ ಅಲ್ಲದೇ ಕಾರ್ಪಣ್ಯದ ಜೀವನ ಅವಳಿಗೆ ತಿಳಿಯದು. ಹುಟ್ಟಿನಿಂದಲೂ ಧಾರಾಳವಾಗಿದ್ದೇ ಗೊತ್ತು ಅವಳಿಗೆ. ನೀನು ಸ್ವಲ್ಪ ಸುಮ್ಮನಿರಬಾರದೆ?"

ಖೇದವಾಗಿತ್ತು ತಮಗೆ. ಆದರೂ ಸಹಿಸಿಕೊಂಡರು. ಹಾಗಿರದೇ ವಿಧಿಯೂ ಇದ್ದಿರಲಿಲ್ಲವಲ್ಲಾ? ಆದ್ದರಿಂದಲೇ ಸುಮ್ಮನಾಗಿ ಇರುವುದನ್ನು ಕಲಿತರು. ಆದರೂ ಸೊಸೆಗೆ ತಮ್ಮ ಇರವು ಅಸಹನೀಯವಾಯಿತು. ಹಾಗಿದ್ದರೂ ದಿನಾ ಸಂಜೆ ಮಗ "ಏನ್ಮಾಡ್ತಿದೀಯಮ್ಮ?" ಎಂದೋ "ಶ್ಯಾಮಳಿಂದ ಸುದ್ದಿ ಇದೆಯಾ ಅಮ್ಮ?" ಎಂದೋ ಕೇಳಿದಾಗ, ನಗೆ ಮೋರೆ ತೋರಿ ಲೋಕಾಭಿರಾಮ ಹರಟಿದಾಗ ಜೀವ ಧನ್ಯವಾಗಿಬಿಡುತ್ತಿತ್ತು. ಈ ಎಡೆಯಲ್ಲಿ ಶ್ಯಾಮಲಳಿಗೆ ಒಂದು ಗಂಡು, ಶ್ರೀಧರನಿಗೆ ಒಂದು ಹೆಣ್ಣು ಮಗು ಜನಿಸಿದವು. ಶ್ಯಾಮಲಳಿಗೆ ಗಂಡು ಹುಟ್ಟಿತಲ್ಲ ಎಂದೇ ಇದ್ದೀತು, ಆನಂತರ ಮಗ ಸೊಸೆ ಇಬ್ಬರಿಗೂ ಅವಳು ದೂರವಾದಳು. ಇದಕ್ಕೆ ಸರಿಯಾಗಿ ಅವಳಿಗೆ ಕೆಲಸವೂ ಇತ್ತಾಗಿ "ಅಮ್ಮ, ಯಾವಾಗಲೂ ನಾನು ಅಲ್ಲಿಗೆ ಹೇಗೆ ಬರಲಿ? ಬಿಡುವಿದ್ದಾಗ ನೀನೇ ಬಂದುಬಿಡು ನಮ್ಮಲ್ಲಿಗೆ" ಎಂದದ್ದು ಮತ್ತೂ ಅನುಕೂಲವೇ ಆಗಿತ್ತು ಇವರಿಬ್ಬರಿಗೆ.

"ಮಗಳಾದರೇನಂತೆ? ಅವಳಿಗೂ ಬೇಕಷ್ಟು ಖರ್ಚು ಮಾಡಲಿಲ್ಲವೇ ನೀವು? ಅಲ್ಲದೇ ಅವಳೂ ಹೇಳಿದಾಳೆ ಅಷ್ಟೊಂದು. ಅಲ್ಲಿಯೂ ಸ್ವಲ್ಪ ದಿನ ಇದ್ದು ಬರಬಾರದೆ?" ಸೊಸೆ ರಾಗವಾಗಿ ಹೇಳಿದಾಗ ಮಗನೂ ತಲೆ ಆಡಿಸಿದ್ದ. ತಮಗೋ, ಮಗಳ ಮನೆ ಅಪ್ರಿಯವೇನಾಗಿರಲಿಲ್ಲವಾದರೂ, ಯಾವಾಗಲೂ ಅಲ್ಲಿಯೇ ಇದ್ದರೆ ಲೋಕ ಏನಂದೀತೆಂಬ ಚಿಂತೆ. ಮೇಲಾಗಿ ಅವಳಿಗೂ ಅವಳ ಸಂಸಾರ ಇದ್ದೇ ಇತ್ತಲ್ಲ? ಅಳಿಯನೇನೋ ಒಳ್ಳೆಯವನೇ. ಮತ್ತು ಹಾಗಿದ್ದುದರಿಂದಲೇ ಅವಳ ಪೇಟೆಯ ಬಿಡಾರಕ್ಕೆ ಆಗೀಗ ತಾವು ಹೋಗಿರುತ್ತಿದ್ದುದು. ಹಾಗೆ ಹೋದರೆ ಹೆಚ್ಚಾಗಿ ತಿಂಗಳು ಕಳೆದೇ ವಾಪಸಾಗುತ್ತಿದ್ದುದು ತಾವು. ಈ ಸಲ ಮಾತ್ರ ಬೀಗಿತ್ತಿಯ ಚುಚ್ಚುನುಡಿ ತಮ್ಮನ್ನು ಬೇಗ ಹೊರಡಿಸಿತ್ತು. ಹುಂ, ಒಂದು ರೀತಿಯಲ್ಲಿ ಬೀಗಿತ್ತಿ ಹೇಳಿದ್ದೂ ನಿಜವೇ. ನಾಳೆ ತಮ್ಮ ಕರ್ಮ ಮಾಡುವವನು ಮಗನೇ ಹೊರತು ಮಗಳಲ್ಲ




"ದಯಮಾಡಿ ಕ್ಷಮಿಸ್ಬೇಕು ಸಾರ್.. ನೀವು ಉದ್ಘಾಟನಾ ಸಮಾರಂಭವೊಂದರಲ್ಲಿ ಭಾಗವಹಿಸಿದ್ದರ ನಿಮ್ಮ ಫೋಟೋ ಕೆಟ್ಟು ಇಷ್ಟು ಮಾತ್ರವೇ ಉಳಿದಿದೆ..."

ವಲ್ಲ?'

''ಓ, ಅಜ್ಜಿ ಬಂತೂ' ಮೊಮ್ಮಗಳು ಸ್ವಾತಿಯ ದನಿ ಕೇಳಿ ಬೆಚ್ಚಿದ ಶಾರದಮ್ಮ ತಾವು ಮನೆ ತಲಪಿದ್ದನ್ನರಿತು, ತಮ್ಮ ಅನ್ಯಮನಸ್ಕತೆಗೆ ನಾಚುತ್ತ ಕೇಳಿದರು, ''ಅಮ್ಮ ಇಲ್ಲವೇ ಪುಟ್ಟಾ?''

ಆ ವೇಳೆಗಾಗಲೇ ಹೊರಗೆ ಬಂದು ಅವರ ದನಿ ಕೇಳಿದ್ದ ಸೊಸೆ ವಿಜಯ, ಸಿಡುಗುಟ್ಟುತ್ತಲೇ ಹೇಳಿದಳು, ''ಮಗಳ ಮನೆ ಎಂಟು ದಿನಗಳಿಗೇ ಬೇಜಾರಾಯ್ತೇನೋ.''

ಆ ಮಾತಿನ ವ್ಯಂಗ್ಯ ತಿಳಿದರೂ ತಿಳಿಯದವರಂತೆ ಶಾರದಮ್ಮ ಮೌನವಾಗಿಯೇ ತಮ್ಮ ಕೋಣೆಗೆ ಹೊರಟಾಗ ಕಣ್ಣು ಪಸೆಯಾಗಿತ್ತು.

ದಿನಗಳು ನಿಧಾನವಾಗಿ ಉರುಳಿದವು. ಮತ್ತು ದಿನ ಹೋದಂತೆಲ್ಲ ಶಾರದಮ್ಮ ಹೆಚ್ಚೆಚ್ಚು ಅಂತರ್‌ಮುಖಿಯಾದರು, ಉದಾಸರಾದರು. ದಿನಬೆಳಗಾದರೆ ಸಣ್ಣ ಪುಟ್ಟ ಕಾರಣಗಳಿಗೂ ರೇಗುವ, ಮೊನೆ ಮಾತಿನಿಂದ ತಿವಿಯುವ ಸೊಸೆಗೆ ಆಕೆ ಎದುರುತ್ತರ ಕೊಡುತ್ತಲೇ ಇರಲಿಲ್ಲವಾದರೂ ಒಳಗಿಂದೊಳಗೇ ಕೊರಗತೊಡಗಿದರು. ಮತ್ತು ತಮ್ಮ ಭಾವನೆಗಳನ್ನು ತಮ್ಮಲ್ಲಿಯೇ ಹತ್ತಿಕ್ಕುವ ಯತ್ನ ನಡೆಸಿದ್ದರಿಂದಲೇ ಇದ್ದೀತು, ಈಗೀಗ ಸಣ್ಣ ಪುಟ್ಟದ್ದಕ್ಕೆಲ್ಲ ರೇಗುವುದೂ ತಟ್ಟನೇ ಅತ್ತುಬಿಡುವುದೂ ಆಕೆಯ ಅಭ್ಯಾಸಗಳಾದವು.

ಆಕೆಯ ಈ ಬದಲಾವಣೆಯನ್ನು ಮೊದಲಿಗೆ ಗುರ್ತಿಸಿದ್ದು ಪುಟ್ಟ ಸ್ವಾತಿ. ಅಮ್ಮ, ಅಪ್ಪನಿಗಿಂತ ಜಾಸ್ತಿ ಅಜ್ಜಿಯ ಸಂಪರ್ಕ ಹೊಂದಿದ್ದ ಆ ಮಗು, ಒಮ್ಮೆ ಯಾವುದೋ ಸಣ್ಣ ಕಾರಣಕ್ಕಾಗಿ ಅಜ್ಜಿ ತನ್ನ ಮೇಲೆ ರೇಗಿದಾಗ ತಾನೂ ಸಿಟ್ಟಿನಿಂದ ಕೇಳಿತು, ''ನಿನಗೇನಾಗಿದೆ ಅಜ್ಜೀ? ಯಾವಾಗಲೂ ರೇಗ್ತಾ ಇರ್ತೀ. ನಾನು ನಿನ್ನ ಜತೆ ಮಾತಾಡೋದೇ ಇಲ್ಲ ಇನ್ನು.''

ಮಗುವಿನ ಗಂಟಿಕ್ಕಿದ ಹುಬ್ಬು ಸೊಟ್ಟಗಾದ ತುಟಿ ನೋಡಿ ಅಜ್ಜಿ, ಆ ಕ್ಷಣಕ್ಕೆ ತಮ್ಮ ಸಿಟ್ಟು ಮರೆತು ಮುದ್ದಾಡಿದರಾದರೂ ಒಳಗೊಳಗೇ ಗಂಭೀರರಾಗಿದ್ದರು.

ವಾಸ್ತವವಾಗಿ ಅವರಿಗೂ ತಮ್ಮಲ್ಲಾದ ಈ ಬದಲಾವಣೆ ಅರಿವಿಗೆ ಬಂದಿತ್ತಲ್ಲದೇ ಗಂಭೀರ ಚಿಂತನೆಗೂ ಅನುವು ಮಾಡಿಕೊಟ್ಟಿತ್ತು. ಇದುವೆ ಜೀವನ ಎಂದಾದರೆ... ಇದನ್ನೇ ತಾವು ಹಂಬಲಿಸಿದ್ದೆ? ಒಂದೇ ಮನೆಯಲ್ಲಿದ್ದೂ ಮೂವರೂ ಮೂರು ದಿಕ್ಕಿಗೆ ಮೋರೆ ಮಾಡಿಕೊಂಡಿರುವುದನ್ನು ತಾವೆಂದಾದರೂ ಊಹಿಸಿದ್ದಿತ್ತೆ? ಆಗೆಲ್ಲ ಅವರಿಗೆ ಕಳೆದ ದಿನಗಳ ನೆನಪು ತಪ್ಪದೇ ಆಗುತ್ತಿತ್ತು. ಎಂಥ ದಿನಗಳವು? ಮೂರು ಹೊತ್ತು ಹೊಟ್ಟೆ ತುಂಬ ಉಂಡದ್ದೆಂಬುದೇ ಬಹು ಕಡಿಮೆಯಾಗಿದ್ದ ಆ ದಿನಗಳಲ್ಲಿ, ಶಾಲಾ ಫೀಸು, ಸಮವಸ್ತ್ರ, ಪುಸ್ತಕ, ಅತ್ಯಗತ್ಯ ಬಟ್ಟೆ ಬರೆಗಳಿಗಾಗಿ ಹೋರಾಡುತ್ತಿದ್ದ ಆ ದಿನಗಳಲ್ಲಿ ಎಂತಹ ಆನಂದವಿತ್ತು? ಎಷ್ಟು ಉತ್ಸಾಹವಿತ್ತು? ಯಾವ ರೀತಿಯ ನಿರೀಕ್ಷೆಯಿತ್ತು? ಬರಲಿರುವ ಆ ಸುಂದರ ದಿನಗಳ ಕನಸು ಕಟ್ಟುತ್ತ, ಆ ಕನಸು ನನಸಾಗಲು ಶ್ರಮಿಸುತ್ತ

ತಾವು ಮಕ್ಕಳ ಜತೆಗೆ ದಿನ ದೂಡಿದ್ದರಲ್ಲವೇ? ತಮಗೆ.

ಸರಿ, ಇನ್ನೆಲ್ಲ ನೇರವಾಯಿತೆಂದುಕೊಂಡಿದ್ದಾಗಲೇ ಹುಟ್ಟಿತ್ತು ಹೊಸ ಸಮಸ್ಯೆ. ಕುಟುಂಬದಲ್ಲಿ ಎಷ್ಟು ಜನರಿದ್ದರೆ ಚೆಂದ? ಯಾರ್‍ಯಾರ ಸ್ಥಾನ ಎಲ್ಲೆಲ್ಲಿರಬೇಕು? ಯಾರು ಅಗತ್ಯ? ಯಾರು ಅನಗತ್ಯ? ಎಂಬಿವೇ ಪ್ರಶ್ನೆಗಳೇ ಭೂತಾಕಾರವಾಗಿ ಬೆಳೆಯಲಾರಂಭಿಸಿದಾಗ ಮಾತ್ರ ಆತಂಕವಾಗಿತ್ತು, ವ್ಯಥೆಯಾಗಿತ್ತು. ನಿಜ, ಈವರೆಗೆ ಈ ಕುಟುಂಬಕ್ಕೆ ತಮ್ಮ ಅಗತ್ಯ ಸ್ವಲ್ಪವಾದರೂ ಇತ್ತು. ಈಗ ಸ್ವಾತಿ ಕೂಡ ದೊಡ್ಡವಳಾದಳು. ಹಾಗಾಗಿ ಮಗುವನ್ನು ನೋಡಿಕೊಳ್ಳುವ ಸಮಸ್ಯೆ ಕೂಡ ವಿಜಯಳಿಗಿಲ್ಲ. ಬಹುಶಃ 'ಸಂಬಂಧಗಳು ಮನುಷ್ಯನ ಅವಶ್ಯಕತೆಗಳನ್ನೇ ಅವಲಂಬಿಸಿಕೊಂಡಿರುತ್ತವೆ' ಎಂಬ ಮಾತು ಹೀಗಿದ್ದ ಘಟನೆಗಳಿಂದಲೇ ಹುಟ್ಟಿತೇನೋ?

ಎಳೆವೆಯಲ್ಲಿದ್ದಾಗ ಶ್ರೀಧರನಿಗೆ ತಮ್ಮ ಅಗತ್ಯವಿತ್ತು, ಈಗ ಅವನು ತನ್ನ ಕಾಲ ಮೇಲೆ ನಿಂತಿದ್ದಾನೆ. ಇನ್ನು ತಮ್ಮ ಹಂಗೇಕೆ? ಆದ್ದರಿಂದಲೇ ತಾನೇ ದಿನಗಟ್ಟಲೆ, ವಾರಗಟ್ಟಲೆ ಆತನಿಗೆ ಅಮ್ಮನ ನೆನಪೂ ಆಗದೇ ಇರುವುದು? ಹಾಗೆ ಯೋಚಿಸಿ ವ್ಯಥೆಗೊಂಡಾಗೆಲ್ಲ ನೆನಪಾಗುತ್ತಿದ್ದುದು ಅವೇ ಮಾತುಗಳು. ಬೀಗಿತ್ತಿ ಆಡಿದ ಕಟಕಿ, 'ಯಾರ್‍ಯಾರು ಎಲ್ಲೆಲ್ಲಿರಬೇಕೋ ಅಲ್ಲಲ್ಲಿದ್ದರೇ ಚೆಂದ.' ಬೀಗಿತ್ತಿ ತಮಗೆ ಮಗನಿದ್ದಾನಲ್ಲ ಎಂದೇ ಹಾಗೆ ಹೇಳಿದ್ದಿರಬಹುದು. ಆದರೆ ಮಗನಿಗೇ ಅದರ ಅರಿವಿಲ್ಲದೇ ಇದ್ದಲ್ಲಿ? ಬೀಗಿತ್ತಿಗೆ ಇರುವಂತೆ ತಮಗೂ ಒಂದು ಸ್ವಂತ ಗೂಡಿರುತ್ತಿದ್ದಲ್ಲಿ? ತಮ್ಮ ಆಸೆ, ನಿರಾಸೆಗಳನ್ನೆಲ್ಲ ಹಂಚಿಕೊಳ್ಳಲು ಬಾಳ ಜತೆಗಾರ ಇರುತ್ತಿದ್ದಲ್ಲಿ? ನಿಮಿಷ, ನಿಮಿಷಕ್ಕೂ ತಾವು ಈ ರೀತಿ ಕುಗ್ಗಬೇಕಾಗುತ್ತಿರಲಿಲ್ಲ. ದೇವಸ್ಥಾನದಲ್ಲಿ ಕಾಣಿಕೆ ಹಾಕಬೇಕಿದ್ದರೂ ಸೊಸೆ ಮುಂದೆ ಆಳುದ್ದ ದೇಹ ಗೇಣುದ್ದ ಮಾಡಿ ಕೈಚಾಚಬೇಕಿರಲಿಲ್ಲ. ಈಗ, ಮಕ್ಕಳ ಏಳ್ಗೆಗಾಗಿ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿ, ಹಿಡಿ ಕೂಳಿಗಾಗಿ ಅವರ ಮೋರೆ ನೋಡಬೇಕಾಗಿರುವ ಈ ದಿನಗಳಲ್ಲಿ ತಮ್ಮ ಮೂರ್ಖತನದ ಅರಿವಾಗುತ್ತಿದೆ. ಯಾರಿಗೇ ಆಗಲಿ, ಆರ್ಥಿಕ ಸ್ವಾತಂತ್ರ್ಯ ಬಹು ಮುಖ್ಯವಾದದ್ದು, ಅದರಲ್ಲೂ ತನ್ನಂಥ - ಗಂಡನಿಲ್ಲದ - ಹೆಂಗಸಿಗೆ ಅದು ಅತಿ ಮುಖ್ಯ. ಆದರೆ ತಮ್ಮ ಯೋಚನೆಗೆ ಬಂದಿರಲಿಲ್ಲ ಆ ವಿಚಾರ. ಆಗ ಕಾಣುತ್ತಿದ್ದುದು ಒಂದೇ ಗುರಿ, ಅದು ಮಕ್ಕಳ ಭವ್ಯ ಭವಿಷ್ಯ. ಅದಕ್ಕಾಗಿ ತಾನೇ ಇದ್ದ ಸ್ವಂತ ಮನೆ ಆಧಾರ ಮಾಡಿ ಆ ದುಡ್ಡಿನಲ್ಲಿ ಶ್ರೀಧರನನ್ನು ಹೆಚ್ಚಿಗೆ ಓದಿಸಿದ್ದು? ನಂತರ ಆ ಮನೆಯನ್ನೆ ಮಾರಿ ಮಗಳ ಲಗ್ನ ಮುಗಿಸಿದ್ದು. ಆಗ ತುಂಬ ನೋವಾಗಿತ್ತು. ಇದ್ದೊಂದು ಆಸರೆಯನ್ನು ಕಳೆದುಕೊಂಡೆನಲ್ಲ ಎಂಬ ವ್ಯಥೆಯ ಜತೆಗೆ, ಮಗಳಿಗೆ ಸರಿಯಾದ ಆಸರೆ ಸಿಕ್ಕಿತಲ್ಲ ಎನ್ನುವ ಸಮಾಧಾನವೂ ಇತ್ತಾಗಿ, ತಾವೇ ಹೇಳಿಕೊಂಡಿದ್ದರು, 'ಚಿಂತೆ ಇಲ್ಲ, ಹೇಗೂ ಶ್ರೀಗೂ ಉದ್ಯೋಗ ಸಿಕ್ಕಿದೆ. ಇನ್ನು ಎಲ್ಲ ಅವನು ನೋಡಿಕೊಂಡಾನು,' ಎಂದು ಸಮಾಧಾನ ಪಟ್ಟುಕೊಂಡಿದ್ದರು.

ಅಂದು ಸಂಜೆ ಆಕೆ ದೇವಸ್ಥಾನಕ್ಕೆ ಹರಿಕಥೆ ಕೇಳಲು ಹೋಗಿದ್ದರು. ಆದರೆ ದಾಸರಿನ್ನೂ ಬಂದಿರಲಿಲ್ಲವಾಗಿ ಕಾರ್ಯಕ್ರಮ ಆರಂಭಿಸಿರಲಿಲ್ಲ. ಗೋಡೆ ಬದಿಗೆ ಕೂತ ಶಾರದಮ್ಮನ ಮನಸ್ಸಿನಲ್ಲಿ ಬೆಳಗಿನ ದೃಶ್ಯವೇ ಮತ್ತೆ ಮತ್ತೆ ಕಾಣಿಸುತ್ತಿತ್ತು. ಪುಟ್ಟ ಸ್ವಾತಿ ಕೈ ಜಾರಿ ಹಾಲು ಚೆಲ್ಲಿದಾಗ, 'ಅವಳನ್ನು ಚೆನ್ನಾಗಿ ಹೊಡೆಯುತ್ತ ವಿಜಯ ಕೂಗಾಡಿದ್ದಳು, "ಹಾಲಿನ ಬೆಲೆ ಹೇಗೆ ಏರಿದೆ ಗೊತ್ತೇ ನಿನಗೆ? ಕತ್ತೆಗಳು, ಮನೆ ತುಂಬ ಇವೆ, ಕಾಸಿನ ಉಪಯೋಗ ಇಲ್ಲದಿದ್ರೂ ಊಟಕ್ಕೆ ತಯಾರು. ಆ ಊಟ ಎಲ್ಲಿಂದ ಬರುತ್ತೆ, ಹೇಗೆ ತಯಾರಾಗುತ್ತೆ ಅನ್ನೋ ಯೋಚನೆ ಒಬ್ಬರಿಗಾದರೂ ಇದೆಯಾ? ಅಲ್ಲ, ಯೋಚಿಸಬೇಕಂತೇನಪ್ಪ

ಅಗತ್ಯ? ಕೂತು ಮೈ ಬೆಳೆಸೋ ಕೆಲಸವೇ ಬೇಕಷ್ಟಿರುವಾಗ,'' ಕೇಳುತ್ತಲಿದ್ದ ತಮಗೆ ಎತ್ತಿ ಬಾರಿಸಿದಂತಾಗಿತ್ತು. ಮಾತಿನ ಮೊದಲ ವಾಕ್ಯ ಸ್ವಾತಿಗಾದರೂ ಉಳಿದದ್ದೆಲ್ಲ ತಮ್ಮನ್ನೇ ಉದ್ದೇಶಿಸಿದ್ದೆಂಬುದು ಕೂಡಲೇ ಹೊಳೆದಿತ್ತಾಗಿ, ವ್ಯಥೆಯಿಂದ ಅಲ್ಲಿಯೇ ಇದ್ದ ಮಗನತ್ತ ನೋಡಿದ್ದರು. ಅವನೋ ''ಸ್ವಾತೀ ಸ್ವಲ್ಪ ಜಾಗ್ರತೆ ಮಾಡೋದು ಕಲಿ. ದುಡ್ಡೇನು ಆಕಾಶದಿಂದ ಉದುರುತ್ತಾ?'' ಎಂದಿದ್ದನಲ್ಲದೇ ನೋಡಿರಲಿಲ್ಲ ಕೂಡ.'' ತಮಗಾದರೂ ಕುಳಿತು ತಿನ್ನಲು ಆಸೆಯೆ? ಈವರೆಗೆ ಕುಳಿತು ತಿಂದ ಜೀವನವೆ ತಮ್ಮದು? ಈಗಲೂ ತಾವು ಕೆಲಸ ಮಾಡಲು ತಯಾರೇ. ಮೊದಲೆಲ್ಲ ಹಪ್ಪಳ, ಮೆಣಸಿನ ಪುಡಿ ಮಾಡಿದ ಕೈಗಳಲ್ಲವೆ ತಮ್ಮವು? ಆದರೆ ಈಗ ಯಾರು ಕೊಟ್ಟಾರು ತಮಗೆ ಕೆಲಸ? ವಯಸ್ಸು ಐವತ್ತಾಗುತ್ತ ಬಂತು, ವಿದ್ಯೆಯೋ, ಪ್ರೈಮರಿ ಮೊದಲ ಕ್ಲಾಸಷ್ಟೇ. ಇದ್ದುದರಲ್ಲಿ ತೃಪ್ತಿಯ ವಿಚಾರವೆಂದರೆ ಆರೋಗ್ಯದ್ದೇ. ಈಗಲೂ ಹಸಿವು ಚೆನ್ನಾಗಿದ್ದು ಜೀರ್ಣ ಶಕ್ತಿಯೂ ಸರಿಯಾಗಿದೆ. ಆದ್ದರಿಂದಲೇ ಶರೀರ ಕೂಡ ಈವರೆಗೆ ಗಟ್ಟಿಯಾಗಿದೆ. ಇಷ್ಟರವರೆಗೆ ತಮ್ಮ ಆರೋಗ್ಯದ ಬಗ್ಗೆ ಹೆಮ್ಮೆ ಇತ್ತು, ಆದರೆ ಈಗ ಅದುವೇ ಹೆದರಿಸುತ್ತಿದೆ. ''ದೇವಾ, ಇನ್ನೆಷ್ಟು ದಿನಗಳಿಗೆ ನನಗೆ ಸಾವು ಕೊಡುತ್ತೀಯಪ್ಪ'' ಎನ್ನುವಂತಾಗಿದೆ. ಹಾಗಿರುವಾಗ ತಮ್ಮ ಈಗಿನ ಪರಿಸ್ಥಿತಿಗೆ ಒಂದು ಕೆಲಸ ಸಿಕ್ಕಿದ್ದರೇ ಒಳ್ಳೆಯದಿತ್ತು. ಆದರೆ ಯೋಚಿಸುತ್ತ ನಿಟ್ಟುಸಿರಿಟ್ಟ ಶಾರದಮ್ಮ ಹತ್ತಿರವೇ ಕೂತಿದ್ದ ಇಬ್ಬರು ಮಹಿಳೆಯರ ಮಾತುಗಳು ಕಿವಿಗೆ ಬಿದ್ದು ಬೆಚ್ಚಿದರು, ಜತೆಗೇ ಒಂದು ರೀತಿಯ ಉದ್ವೇಗ ಕೂಡಾ ಉಂಟಾಗಿತ್ತವರಿಗೆ. ''ದೇವಾ, ಇದೆಲ್ಲ ನಿನ್ನ ಲೀಲೆಯೆ, ಕಣಪ್ಪಾ, ಇಲ್ಲವಾದರೆ ನಾನು ಯೋಚಿಸಿದ್ದು ಆಗಲೇ ನಿನ್ನ ಸನ್ನಿಧಿಯಲ್ಲಿಯೇ ತಿಳಿಯಬೇಕೆಂದರೆ.'' ಆಕೆ ಮನದೊಳಗೆ ಹೇಳಿಕೊಳ್ಳುತ್ತಲೇ ಪಕ್ಕದಾಕೆಯಲ್ಲಿ ಕೇಳಿದರು, ''ಕ್ಷಮಿಸಿ, ನೀವು ಎಲ್ಲಿಗೋ ಕೆಲಸಕ್ಕೆ ಜನ ಬೇಕೆನ್ನುತ್ತಿದ್ದಿರಲ್ಲಾ? ನನಗಷ್ಟು ವಿವರ ಕೊಡುತ್ತೀರಾ?''




''ಬೇಡಾ ಸಾರ್! ನಿನ್ನೆಯಿಂದ ನಮ್ ಪಾಪು ಉಚ್ಚೆ ಹೊಯ್ಯದೇ ಇರೋದಕ್ಕೆ ನೀವೀಗ ಚುಚ್ಚು ಮದ್ದು ಕೊಡುವ ಅವಶ್ಯಕತೆಯೇ ಇಲ್ಲ...''

''ಓ, ಧಾರಾಳವಾಗಿ'' ಆಕೆ ನಸುನಕ್ಕು ಎಲ್ಲ ವಿವರಿಸಿ ಕೊನೆಗೆ ಹೇಳಿದರು, ''ಆಶ್ರಮದ ಸಂಚಾಲಕಿ ನಿವೇದಿತಾ ಒಳ್ಳೆ ಹೆಂಗಸು. ಅವರಿಗೆ ಸರಿ ಕಂಡರೆ ಕೊನೆವರೆಗೂ ಅಲ್ಲಿಯೇ ಆಶ್ರಯ ಕೊಡಲೂ ಆಕೆ ತಯಾರು.''

''ಆದರೆ ಅಂಥ ಆದರಕ್ಕೆ ಪಾತ್ರಳಾಗಬೇಕಿದ್ದರೆ ಅಲ್ಲಿಗೆ ಹೋಗುವವರೂ ಒಳ್ಳೆಯವರೇ ಆಗಿರಬೇಕು, ತಾನೆ?'' ನಕ್ಕು ಪ್ರಶ್ನಿಸಿದ ಶಾರದಮ್ಮ, ಅವರಿಬ್ಬರಿಗೆ ವಿದಾಯ ಹೇಳಿ, ಗರ್ಭಗುಡಿಗೆ ಬಂದು ದೇವರಿಗೆ ನಮಸ್ಕರಿಸಿ ಹೊರಬಿದ್ದರು. ಮನೆಗೆ ಅಭಿಮುಖವಾಗಿ ನಡೆಯುತ್ತಿದ್ದ ಆಕೆಯ ಹೆಜ್ಜೆಗಳಲ್ಲಿ ಅದೇ ಹಿಂದಿನ ಚುರುಕಿತ್ತು. ●

# ಹಲವು ಕುತೂಹಲಗಳ

# ಹಾಡುವಳ್ಳಿ

ಆರ್.ಜಿ.ಶಾನಭಾಗ

ಒಂದೆಡೆ ಮೊಗರೆ ಹೂವಿನ ನರುಗಂಪು-ಇನ್ನೊಂದೆಡೆ ಸಂಗೀತದ ಇಂಪು... ಇದು ಈಗಿನ ಚಿತ್ರವಲ್ಲ, ಕೆಲ ಶತಮಾನಗಳ ಹಿಂದಿನ ವೃತ್ತಾಂತ. ಈಗ ಮಿನಿ ದುಬಾಯಿ, ವಿದೇಶಿ ಸರಕುಗಳ ಮಾರಾಟದ ನಂದನವನ ಎನಿಸಿರುವ ಭಟ್ಕಳ(ಕವಿ ಭಟ್ಟಾಕಳಂಕನ ಊರು)ದ ಅಂದಿನ ಪ್ರಸಿದ್ಧಿ ಇದು. ಈ ಊರಿನ ಪಕ್ಕದಲ್ಲೇ ಇದೆ ಒಂದು ಕುಗ್ರಾಮ. ಹೆಸರು ಹಾಡುವಳ್ಳಿ. ಸಂಗೀತಪುರವೆಂದು ಕರೆಯಿಸಿಕೊಳ್ಳುತ್ತಿದ್ದ ಇದು ಸಾಳುವ ದೊರೆಗಳ ವೈಭವವನ್ನು ಕಂಡ ಸ್ಥಳ.

ಆದರೆ ಇಂದು ಹಂಪೆಯಂತೆ ಮತ್ತೊಂದು ಕೊಂಪೆಯಾಗಿರುವ ಹಾಡುವಳ್ಳಿಯ ಪದ್ಮಾವತಿ ದೇವಾಲಯದ ಅರ್ಚಕರು ಮತ್ತು ಗ್ರಾಮವಾಸಿಗಳು ಬೆರಳು ಮಾಡಿ ತೋರಿಸುವ ಅವಶೇಷಗಳನ್ನೇ ಆಧಾರವಾಗಿಟ್ಟುಕೊಂಡು ಈ ಸ್ಥಳದ ಇತಿಹಾಸವನ್ನು ನಾವು ಕಲ್ಪಿಸಿಕೊಂಡು ಅರಿತುಕೊಳ್ಳಬೇಕಾಗಿದೆ. ಚಂದ್ರನಾಥ ಬಸದಿ ಹಾಗೂ ಪದ್ಮಾವತಿ ದೇವಾಲಯಗಳು ಮಾತ್ರ ಸಾಳುವ ದೊರೆಗಳ ಇತಿಹಾಸದ್ದ ಮೂಕಸಾಕ್ಷಿಯಾಗಿ ನಿಂತಿವೆ.



ಕಾಯ್ಕಿಣಿ ಹತ್ತಿರ ದೊರೆತಿರುವ ಹಾಡುವಳ್ಳಿ ಹಾಗೂ ನಗಿರೆಯ ವೀರಗಲ್ಲುಗಳು.

ಹಾಡುವಳ್ಳಿಯ ಸಮೀಪವಿರುವ ಇಂದ್ರಗಿರಿ ಹಾಗೂ ಚಂದ್ರಗಿರಿಗಳು ದೊರೆಗಳ ದೇವತಾರಾಧನೆಯ ತಾಣಗಳಾಗಿದ್ದವು. ಈ ಬೆಟ್ಟಗಳ ಪೈಕಿ ಒಂದರ ಮೇಲಿನಿಂದ ನುಡಿಸಿದ ಸಂಗೀತ ಇನ್ನೊಂದು ಬೆಟ್ಟದ ಮೇಲೆ ಸ್ಪಷ್ಟವಾಗಿ, ಸುಶ್ರಾವ್ಯವಾಗಿ ಮತ್ತು ಅತಿ ಸಮೀಪದಲ್ಲಿಯೇ ಎಂಬಂತೆ ಕೇಳಿಬರುತ್ತಿತ್ತಂತೆ. ಆದರಿಂದಾಗಿಯೇ ಈ ತಾಣ ಸಂಗೀತಪುರವೆಂಬ ಹೆಸರನ್ನು ಪಡೆಯಿತಂತೆ. ಕಾಲಕ್ರಮೇಣ ಜನರ ಬಾಯಲ್ಲಿದು ಹಾಡುವಳ್ಳಿಯಾಯಿತು. ಇಲ್ಲೀಗ ನಾವು ಕಾಡು ಹಕ್ಕಿಗಳ ಹಾಡನ್ನು ಮಾತ್ರ ಆಲಿಸಬಹುದೇ ವಿನಾ ಬೇರಾವ ಸಂಗೀತವನ್ನು ಅಲ್ಲ.

ಬೈಂದೂರು, ಭಟ್ಕಳ, ಹಾಡುವಳ್ಳಿ ಹಾಗೂ ಕಾಯ್ಕಿಣಿಗಳಲ್ಲಿರುವ ಶಿಲಾಶಾಸನಗಳು ಮತ್ತು ವೀರಗಲ್ಲುಗಳು ಅಲ್ಲದೆ ಪೋರ್ಚುಗೀಸರ ಕಡತ, ವಿದೇಶಿ ಪ್ರವಾಸಿಗಳ ವರ್ಣನೆಗಳಿಂದಲೂ ಜನರ ನಾಲಿಗೆಯ ಮೇಲಿರುವ ದಂತಕಥೆಯಿಂದಲೂ ಸಂಗೀತಪುರದ ಇತಿಹಾಸವನ್ನು ತಿಳಿದುಕೊಳ್ಳ-ಬಹುದು.

ಸಂಗೀತಪುರವನ್ನಾಳಿದ ಸಾಳುವ ವಂಶದ

ದೊರೆಗಳು ಜೈನ ಮತಾವಲಂಬಿಗಳು. ಅಳಿಯ ಸಂತಾನ ಪದ್ಧತಿಯವರು. ವಿಜಯನಗರ ಸಾಮ್ರಾಜ್ಯದ ನೆರಳಿನಲ್ಲಿಯೇ ತಮ್ಮ ರಾಜ್ಯವನ್ನು ಪೋಷಿಸಿದ ಈ ವಂಶಸ್ಥರು ಆ ಸಾಮ್ರಾಜ್ಯದೊಂದಿಗೆ ಸಖ್ಯ ಗಳಿಸಿಕೊಂಡಂತೆಯೇ ವೈರವನ್ನೂ ಬೆಳೆಸಿಕೊಂಡರು.

ಕ್ರಿಸ್ತಶಕ 1375ರಿಂದ 1400ರವರೆಗೆ ಆಳಿದ ಹಾಡುವಳ್ಳಿಯ ಸಾಳುವ ದೊರೆಗಳಲ್ಲಿ ಸಾಳುವೇಂದ್ರ ಮೊದಲಿಗ. ಹೈವ ಭೂಪ, ದೇವರಸ ಎಂಬ ಹೆಸರಿನಿಂದ ಮೆರೆದಾತ. ಇವನ ಕಿರಿಯ ಮಗ ಸಂಗಿರಾಯನಿಗೆ 'ಹಾಡುವಳ್ಳಿಯ ಮಹಾಮಂಡಲೇಶ್ವರ' ಹಾಗೂ 'ಹಾಡುವಳ್ಳಿಯ ಪುರವರಾಧೀಶ್ವರ' ಎಂಬ ಅಭಿದಾನಗಳು. ಗೆರಸೊಪ್ಪೆಯ ದೇವರಾಜ ಒಡೆಯನನ್ನು ಈತ ಎರಡು ಬಾರಿ ಸೋಲಿಸಿದ. ಹೊನ್ನಾವರದಲ್ಲಿದ್ದ ವಿಜಯನಗರದ ರಾಜಪ್ರತಿನಿಧಿ ಮಹಾಪ್ರಧಾನ ಲಕ್ಷ್ಮಣ ಒಡೆಯನೂ ಸಂಗಿರಾಯನಿಂದ ಪರಾಜಿತನಾದ. ಜೈನ ಧರ್ಮದ ಕಟ್ಟಾ ಅನುಯಾಯಿಯಾಗಿದ್ದ ಈತನ ಭಕ್ತಿ ಹಾಗೂ ಈತ ಗೈದ ಜನಹಿತ ಕಾರ್ಯಗಳನ್ನು ಭಟ್ಕಳದ ಹಿರೇ ಬಸದಿಯಲ್ಲಿರುವ ಶಿಲಾಶಾಸನದಿಂದ ಅರಿತುಕೊಳ್ಳಬಹುದು.

'ಇಂದ್ರ'ನೆಂದು ಕರೆಯಲ್ಪಡುತ್ತಿದ್ದ ಇಂದಗರಸ ಸಂಗಿರಾಯನ ಉತ್ತರಾಧಿಕಾರಿ. ಈತನ ರಾಜ್ಯಾಧಿಕಾರದ ಕಾಲಕ್ಕೆ ಗೆರಸೊಪ್ಪೆಯೊಂದಿಗಿನ ವೈರ ಇನ್ನಷ್ಟು ತೀಕ್ಷ್ಣವಾಯಿತು.



ಹಾಡುವಳ್ಳಿಯಲ್ಲಿ ದೊರೆತಿರುವ ಆದಿ ತೀರ್ಥಂಕರನ ವಿಗ್ರಹ. (ಕ್ರಿಸ್ತಶಕ 15-16ನೇ ಶತಮಾನ)

ಕ್ರಿಸ್ತಶಕ 1504ರಲ್ಲಿ ವಾಸ್ಕೋ ಡಿ ಗಾಮಾನು ತಿಮ್ಮೋಜ ಎಂಬ ನಾಯಕನೊಬ್ಬನ ನೆರವಿನಿಂದ ಹಾಡುವಳ್ಳಿಯ ಮೇಲೆ ದಾಳಿ ಮಾಡಿದ. ಒಪ್ಪಂದದ ಮೂಲಕ ಈ ಯುದ್ಧ ಕೊನೆಗೊಂಡುದನ್ನು ಪೋರ್ಚುಗೀಸರ ಕಡತ ತಿಳಿಸುತ್ತದೆ. ಅಲ್ಲದೆ ಹಾಡುವಳ್ಳಿಯ ದೊರೆಗಳು ಭಟ್ಕಳ ಬಂದರದ ಮೂಲಕ ಸಮುದ್ರ ವ್ಯಾಪಾರ ಮಾಡುವಾಗ ತಮಗೆ ಕಪ್ಪ - ಕಾಣಿಕೆಗಳನ್ನು ಕೊಡಬೇಕೆಂದು ಪೋರ್ಚುಗೀಸರು ಕಾಡಲಾರಂಭಿಸಿದ್ದರಿಂದಲೂ ಹಲವು ಕದನಗಳು ನಡೆದವು.

ಗುರುರಾಯ ಹಾಡುವಳ್ಳಿಯ ಗದ್ದುಗೆಯೇರಿದಾಗ (ಕ್ರಿಸ್ತಶಕ 1527) ಗೆರಸೊಪ್ಪೆ ವೈಭವದ ಶಿಖರ ತಲುಪಿತ್ತಲ್ಲದೇ ಸಾಳುವ ದೊರೆಗಳ ಮೇಲಿನ ಅದರ ಸೇಡೂ ಹೆಚ್ಚಾಗಿ ಕದನಗಳು ಆಗಾಗಿನ ಮಾತಾಗಿಬಿಟ್ಟವು. ಇಂಥದೊಂದು ಕದನದಲ್ಲಿ ಗುರುರಾಯನನ್ನು ರಕ್ಷಿಸಿದ ಆತನ ಆಪ್ತ ಸೈನಿಕ ಈಶ್ವರದೇವ ಪ್ರಾಣ ಬಿಟ್ಟ.

ದೇವರಸನ ಸೊಸೆ ಚೆನ್ನಾದೇವಿ ಅಮ್ಮ. ಹಾಡುವಳ್ಳಿಯ ಸಿಂಹಾಸನವನ್ನೇರಿದ ಮೊದಲ ರಾಣಿ ಆಕೆ. ಪೋರ್ಚುಗೀಸರೊಂದಿಗೆ ಆಕೆ ನಡೆಸಿದ ಘೋರ ಕದನ ಮತ್ತು ಆಕೆಯ ಶೌರ್ಯದ ಕುರಿತು ಪೋರ್ಚುಗೀಸ್ ಕವಿ ಮಿಕ್ಲರ್ ತನ್ನ 'ಲುಸಿಯಾದ್' ಎಂಬ ಕವನದಲ್ಲಿ ಬರೆದಿದ್ದಾನೆ.

ಪೋರ್ಚುಗೀಸರಿಗೆ ಕೊಡುತ್ತಿದ್ದ ಕಪ್ಪ-ಕಾಣಿಕೆಯನ್ನು ಚೆನ್ನಾದೇವಿ ನಿಲ್ಲಿಸಿದ್ದರಿಂದ ಗೋವೆಯ ರಾಜ್ಯಪಾಲನಾಗಿದ್ದ ಆಲ್ಫಾನ್ಸೊ ಡಿಸೋಜ ತನ್ನ ಸೇನಾಪಡೆಯೊಂದಿಗೆ ಸಂಗೀತಪುರದ ಬಂದರು ಕಟ್ಟೆ ಭಟ್ಕಳ ಮೇಲೆ ದಾಳಿ ಮಾಡಿದ. ಸೈನಿಕರೊಂದಿಗೆ ಹುಮ್ಮಸ್ಸಿನಿಂದ ಶತ್ರುಗಳನ್ನೆದುರಿಸಿದ ರಾಣಿ, ತಾನು ಸೋಲುವ ಲಕ್ಷಣ ಕಂಡು ಬಂದಾಗ ಹತ್ತಿರದ ಗುಡ್ಡದಲ್ಲಿ ಅಡಗಿಕೊಂಡಳು. ರಾಣಿ ಪರಾಭವಗೊಂಡು ತಲೆಮರೆಸಿಕೊಂಡಿದ್ದಾಳೆಂದು ಪೋರ್ಚುಗೀಸರು ಭಾವಿಸಿ ಮೈಮರೆತಿದ್ದಾಗ ಹಠಾತ್ತನೇ ಆಕೆಯ ಸೈನ್ಯ ತಮ್ಮನ್ನು ಮುತ್ತಿದ್ದರಿಂದಾಗಿ ಶತ್ರುಗಳು ದಿಗಿಲುಗೊಂಡರು. ಆದರೆ ಆ ದೊಡ್ಡ ಸೈನ್ಯದೆದುರು ತನ್ನಾಟ ನಡೆಯದ್ದನ್ನು ಕಂಡ ರಾಣಿ ಚೆನ್ನಾದೇವಿ ಒಪ್ಪಂದಕ್ಕೆ ಸಿದ್ಧಳಾದಳು. ಶಾಂತಿ ಸ್ಥಾಪನೆಗಾಗಿ ಪೋರ್ಚುಗೀಸರಿಗೆ ಅಕ್ಕಿಯ ರೂಪದಲ್ಲಿ ಕಪ್ಪ ಒಪ್ಪಿಸುವ ಕರಾರಿಗೆ ಸಹಿ ಹಾಕಿದಳು.

ಆದರೆ ಈ ಕದನಲ್ಲಿ ರಾಣಿಯ ಆಪ್ತ ಸೈನಿಕ ವೆಂಕಪ್ಪ ನಾಯಕ ಮಡಿದ. ತನ್ನ ಒಡತಿಗಾಗಿ ಆತ ನಡೆಸಿದ ವೀರತನದ ಹೋರಾಟದ ವರ್ಣನೆಯನ್ನು ಭಟ್ಕಳದ ಪಾರ್ಶ್ವನಾಥ ಬಸದಿಯ ಬಳಿ ಇರುವ ವೀರಗಲ್ಲು ಸಾರುತ್ತದೆ. ರಾಣಿ ಚೆನ್ನಾದೇವಿ ತನ್ನ ಈ ವೀರಬಂಟನ ಕುಟುಂಬಕ್ಕೆ ಭೂಮಿಯನ್ನು ದಾನ ನೀಡಿದ ಉಲ್ಲೇಖವೂ ಈ ವೀರಗಲ್ಲಿನಲ್ಲಿದೆ.

ಚೆನ್ನಾದೇವಿಯ ತಂಗಿ ಚೆನ್ನಭೈರಾದೇವಿ ಸಮರ್ಥ ಆಡಳಿತ ನಡೆಸಿದಳು. ಪೋರ್ಚುಗೀಸರಿಂದ ನಾಶಗೊಳಿಸಲ್ಪಟ್ಟ ಭಟ್ಕಳ ನಗರವನ್ನು ಜೀರ್ಣೋದ್ಧಾರಗೊಳಿಸಿದಳು. ತನ್ನ ರಾಜ್ಯದಲ್ಲಿ ಬೆಳೆಯುತ್ತಿದ್ದ ಕರಿ ಮೆಣಸನ್ನು ಪೋರ್ಚುಗೀಸರಿಗೆ ಮಾರುತ್ತಿದ್ದುದರಿಂದ 'ಕರಿಮೆಣಸಿನ ರಾಣಿ'● ಎಂದು ಪ್ರಸಿದ್ಧಳಾದಳು. ಗೆರುಸೊಪ್ಪೆಯನ್ನು ಗೆದ್ದು (ಹಾಡುವಳ್ಳಿ)ಯಿಂದ ಈಕೆ ತನ್ನ ರಾಜಧಾನಿಯನ್ನು ಅಲ್ಲಿಗೆ ವರ್ಗಾಯಿಸಿದಳು.

ಈ ರಾಣಿ ಭಟ್ಕಳ ಬಂದರಿನಿಂದ ವಿದೇಶಗಳಿಗೆ ಕರಿಮೆಣಸು ರಫ್ತಾಗುವಂತೆ ವ್ಯವಸ್ಥೆ ಮಾಡಿಸಿದ್ದಳಂತೆ. ಆದರೆ ಆಕೆ ಹೊನ್ನಾವರದ ವ್ಯಾಪಾರಿಗಳಿಗೆ ಕರಿಮೆಣಸು ಮಾರುತ್ತಿದ್ದಳೆಂದು ವಿದೇಶಿ ಪ್ರವಾಸಿ ಲೆಗಸ್ಕೋತಿನ ಬರೆದಿದ್ದಾನೆ.

ಆದರೆ ಇಕ್ಕೇರಿಯ ದೊರೆ ವೆಂಕಟಪ್ಪನಾಯಕ ಈಕೆಗೆ ಮುಳುವಾದ. ಆತನ ಹಠಾತ್

● ನೋಡಿ 'ಕರಿಮೆಣಸಿನ ರಾಣಿ' (ಕಸ್ತೂರಿ ನವಂಬರ್ ೮೮)

ದಾಳಿಯಿಂದಾಗಿ - ಬಯಸಿದರೂ ಪೋರ್ಚು ಗೀಸರ ನೆರವು ಸಕಾಲದಲ್ಲಿ ಈಕೆಗೆ ದೊರೆಯದೇ - ಪರಾಭವಗೊಂಡ ಚೆನ್ನ ಭೈರಾದೇವಿಯನ್ನು ಇಕ್ಕೇರಿಯ ಸೆರೆಮನೆಯಲ್ಲಿ ಬಂಧಿಸಿಡಲಾಯಿತು. ರಾಣಿ ಅಲ್ಲಿಯೇ ಕೊನೆಯುಸಿರೆಳೆದಳು. ಈ ಕುರಿತು ಇಟಲಿಯ ಪ್ರವಾಸಿಗಳಾದ ಪ್ರೇಮತ್ರೋದೆಲ್ಲಾ ವಲ್ಲಿ ಹಾಗೂ ದಲ್ಲಾದಲ್ಲೆಯರು ತಮ್ಮ ಪ್ರವಾಸಕಥನದಲ್ಲಿ ಬರೆದಿದ್ದಾರೆ.

ಹಾಡುವಳ್ಳಿಯ ದೊರೆಗಳು ಸಂಗೀತ ಸಾಹಿತ್ಯ ಹಾಗೂ ಕಲೆಗಳನ್ನು ಪೋಷಿಸಿದರು. ದೊರೆ ಸಂಗಿರಾಯನ ಆಸ್ಥಾನದಲ್ಲಿದ್ದ ಕವಿ ಕೋಟೇಶ್ವರ 'ಜೀವಂಧರ ಷಟ್ಪದಿ' ಎಂಬ ಕಾವ್ಯವನ್ನು ಬರೆದಿದ್ದಾನೆ. ಇಂದಗರಸನ ಆಸ್ಥಾನಕವಿ ಪಾಯಣನು 'ಅಹಿಂಸಾಚರಿತ' ಎಂಬ ಕೃತಿಯನ್ನು ರಚಿಸಿದರೆ ಉಭಯಭಾಷಾ ಕವಿ ಶಂಕರಾರ್ಯ ಎಂಬಾತ ಮಾನಸ್ತಂಭದ ಮೇಲೆ ಶಿಲಾಶಾಸನವನ್ನು ಪಡಿಮೂಡಿಸಿರುವ ರೂವಾರಿ. ದೊರೆ ಸಾಳುವೇಂದ್ರ ತರ್ಕ, ವ್ಯಾಕರಣ ಹಾಗೂ ಅಲಂಕಾರದಲ್ಲಿ ವಿದ್ವಾನ.

(ಅಂದಿನ ದೊರೆಗಳು ಕಟ್ಟಿಸಿದ ಹದಿನೆಂಟು ಬಸದಿಗಳ ಪೈಕಿ ಇಂದು ನಮಗೆ ಕಾಣಸಿಗುವವು ಮೂರು ಮಾತ್ರ. ಅವೂ ಅನಾಥವಾಗಿ ನಿಂತಿವೆ. ರಾಜಾಂಗಣ, ದರಬಾರ್ ಹಾಲ್, ಅರಮನೆ ಮತ್ತು ಕೋಟೆಗಳು ಕಂಟಿಗಳಿಂದ ತುಂಬಿವೆ.)

ಇಲ್ಲಿಯ ಚಂದ್ರನಾಥ ಬಸದಿಯ ಅಮೃತ ಶಿಲೆಯ ಚಂದ್ರನಾಥ ವಿಗ್ರಹ ನಯನ ಮನೋಹರ. ಜ್ವಾಲಾಮಾಲಿನಿ ವಿಗ್ರಹವೂ ಸುಂದರವೆ. ಸಾಳುವೇಂದ್ರ ಇದನ್ನು ಕಟ್ಟಿಸಿದ. ಇದರೆದುರು ಇರುವ ಮಾನಸ್ತಂಭದ ಉಲ್ಲೇಖವನ್ನು 1637ರಲ್ಲಿ ಭೆಟ್ಟಿಕೊಟ್ಟ ಇಂಗ್ಲಂಡಿನ ಪ್ರವಾಸಿ ಪೀಟರ್ ಮ್ಯಾಂಡಿ ತನ್ನ ಪ್ರವಾಸಕಥನದಲ್ಲಿ ನೀಡಿದ್ದಾನೆ.

ಪದ್ಮಾವತಿ ದೇವಿಯ ಬಸದಿಯಲ್ಲಿ ಅಪರೂಪದ ದೃಶ್ಯಾವಳಿ ಇದೆ. ಏಕರೂಪದ 24 ಜಿನಬಿಂಬಗಳನ್ನು ಒಂದೇ ಸಾಲಿನಲ್ಲಿ ಇಲ್ಲಿ ನಿಲ್ಲಿಸಲಾಗಿದೆ. ತೀರ್ಥಂಕರರ ತಲೆಯ ಹಿಂಭಾಗದಲ್ಲಿ ಛತ್ರ ಪ್ರಭಾವಳಿಗಳು ಕಂಗೊಳಿಸುತ್ತಿವೆ. ಜಿನಬಿಂಬಗಳ ಸಾಲಿನ ಎಡಗಡೆ ಸರಸ್ವತಿ ವಿಗ್ರಹವಿದೆ. ಮುಂಭಾಗದಲ್ಲಿ ಪದ್ಮಾವತಿಯ ವಿಗ್ರಹ. ಈ ಬಸದಿಯ ಸಮೀಪವೇ ಪಾರ್ಶ್ವನಾಥ ಬಸದಿ. ಅಮೃತಶಿಲೆಯ ಈ ವಿಗ್ರಹದ ತಲೆಯ ಮೇಲೆ ಆದಿಶೇಷ ಒಂಬತ್ತು ಹೆಡೆಗಳನ್ನು ಬಿಚ್ಚಿ ನಿಂತಿರುವುದು ಈ ಬಸದಿಯ ವೈಶಿಷ್ಟ್ಯ. ಚೆನ್ನಭೈರಾದೇವಿಯ ಕಾಲದಲ್ಲಿ ಜೈನಭಕ್ತನೊಬ್ಬ ಇದನ್ನು ಕಟ್ಟಿಸಿಕೊಟ್ಟ.

ಚಂದ್ರಗಿರಿಯ ಮೇಲೆ ಚಂದ್ರನಾಥ ಬಸದಿ ಮತ್ತು ಇಂದ್ರಗಿರಿಯ ಮೇಲೆ ಆದಿನಾಥೇಶ್ವರ ಬಸದಿಗಳಿವೆ. ಇದಲ್ಲದೆ 1556ರಲ್ಲಿ ವೀರಜಟ್ಟ ನಾಯಕ ತನ್ನ ತಂದೆಯ ಸ್ಮರಣಾರ್ಥ ಕಟ್ಟಿಸಿರುವ ರತ್ನತ್ರಯ ಬಸದಿಯೂ ಪ್ರೇಕ್ಷಣಿಯ. ಗೆರಸೊಪ್ಪೆ ನೇಮಿನಾಥ ಬಸದಿ, ಮೂಡೆ ಜಿನ ಬಸದಿಗಳನ್ನು ಚೆನ್ನಬೈರಾದೇವಿ ಕಟ್ಟಿಸಿದಳು.

ಇದೇ ಅವಧಿಯಲ್ಲಿ ಮೂಡ ಭಟ್ಕಳದಲ್ಲಿ ಕೇತಪ್ಪಯ್ಯನೆಂಬಾತ ಕೇತಪಿನಾರಾಯಣ ದೇವಾಲಯವನ್ನೂ, ಗೆರಸೊಪ್ಪೆಯಲ್ಲಿ ವಡಗು ತಿಮ್ಮಪ್ಪಸೇನ ಬೋವನೆಂಬವನು ವೆಂಕಟೇಶ್ವರ ದೇವಾಲಯವನ್ನೂ ಕಟ್ಟಿಸಿದರೆಂದು ಶಾಸನಗಳು ಸಾರುತ್ತವೆ.

ಹಾಡುವಳ್ಳಿಯ ಕುರಿತು ಪಿ.ಗುರುರಾಜ ಭಟ್ಟರು ಸಂಶೋಧನೆ ನಡೆಸಿ ಈ ಮಹತ್ವದ ಸ್ಥಳದ ಕುರಿತು ಆಸಕ್ತಿ ಕೆರಳುವಂತೆ ಮಾಡಿದ್ದಾರೆ. ನಾ.ಡಿಸೋಜರು 'ಸಂಗೀತಪುರ' ವೆಂಬ ಕಿರುಹೊತ್ತಿಗೆಯನ್ನು ಬರೆದು ಪ್ರಕಟಿಸಿದ್ದಾರೆ. ಎಂ.ಆರ್.ಶಾನಭಾಗ ಮುಂತಾದವರು ಹಾಡುವಳ್ಳಿಯ ದೇವಾಲಯಗಳನ್ನು ಕುರಿತು ಬರೆದಿದ್ದಾರೆ. ಆದರೆ ಇಷ್ಟೇ ಸಾಲದು. ಕಾನಿನ ಗರ್ಭದಲ್ಲಿ ಹುದುಗಿರುವ ಹಾಡುವಳ್ಳಿಯಲ್ಲಿ ಉತ್ಖನನ ಕಾರ್ಯ ನಡೆದು ಹಾಡುವಳ್ಳಿಯ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಬೇಕಾದ್ದು ಅತ್ಯವಶ್ಯ. ●



# ಸ್ವಚ್ಛತೆಗೆ ದುಡಿಯುವ 'ಹೊಲಸು ಪ್ರಾಣಿ'

''ನಿಂದಕರಿರಬೇಕು ಹಂದಿಯ ತೆರದಲಿ'' ಎಂದು ಪುರಂದರದಾಸರು ಹಾಡಿದ್ದಾರೆ. ಹಂದಿಯನ್ನು ಅವರು ಹೊಗಳಿದರೋ ಇಲ್ಲವೇ ನಿಂದಕರನ್ನು ತೆಗಳಿದರೋ ಅಂತೂ ಹಂದಿಯ ವಿಷಯವೂ ಅವರ ಲೆಕ್ಕಣಿಕೆಯಿಂದ ಪಾರಾಗಲಿಲ್ಲ.

ಊರೂರುಗಳಲ್ಲಿ ತಿಪ್ಪೆ, ಕೊಳಚೆ, ಗಟಾರಗಳಲ್ಲಿ ಹೊಲಸನ್ನು ಹುಡುಕಿಕೊಂಡು ತಮ್ಮ ಜೀವನವನ್ನು ಸಾಗಿಸುವ ಹಂದಿಗಳನ್ನು ನಾವು ಕಂಡಿರುವುದರಿಂದ ಹಂದಿ ಎಂದಾಕ್ಷಣ ಅಸಹ್ಯ, ಹೇಸಿಗೆ, ತಾತ್ಸಾರ ಭಾವನೆಗಳು ನಮ್ಮಲ್ಲುಂಟಾಗುವು, ಸ್ವಾಭಾವಿಕವೆ.

ಹಾಗೆ ನೋಡಿದರೆ ಪುರಾಣಕತೆಗಳಿಂದ ಹಂದಿಯ ಬಗೆಗೆ ನಾವು ತಿಳಿದಿದ್ದೇವೆ. ಇಷ್ಟೇ ಏಕೆ, ಸರ್ವಶಕ್ತನೂ, ಸರ್ವವ್ಯಾಪಿಯೂ ಆದ ಪರಮಾತ್ಮನು ''ಅಭ್ಯುತ್ಥಾನಂ ಅಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ'' ಎಂದು ಹೇಳಿದುದನ್ನು ನಿರ್ವಹಿಸಲು ಆ ಮೊದಲೇ ವರಾಹರೂಪದಲ್ಲಿ ಧರೆಗೆ ಧಾವಿಸಿದ್ದು ಸುಳ್ಳೆ? ಹೀಗೆ ಆ ಭಗವಂತನೇ ವರಾಹಕ್ಕೊಂದು ವಿಶಿಷ್ಟ ಸ್ಥಾನವನ್ನು ಕೊಟ್ಟ ಮೇಲೆ ನಮ್ಮ ಪೂರ್ವಜರು ಹಂದಿಯನ್ನು ಪೂಜಿಸಿದ್ದು, ರಾಜರುಗಳು ತಮ್ಮ ಧ್ವಜ ಚಿಹ್ನೆಯಲ್ಲಿ ವರಾಹವನ್ನು ಉಪಯೋಗಿಸಿದ್ದು ಆಶ್ಚರ್ಯವಲ್ಲ.

ಶಿವನನ್ನು ಒಲಿಸಿಕೊಂಡು ಮರಳಿಬರುವುದಾಗಿ ಹೇಳಿ ಹಿಮಾಲಯದ ಸುಂದರ ಸ್ಥಳದ ಪ್ರವಾಸಕ್ಕೆ ಹೋದ ಅರ್ಜುನನ ಪಾಡು ಕಾಡುಹಂದಿಯಿಂದ ಏನಾಯಿತೆಂಬುದನ್ನೂ ಅವನು ಶಿವನೊಂದಿಗೆ ಕಾದಿ ಪಾಶುಪತಾಸ್ತ್ರವನ್ನು ಹೇಗೆ ಪಡೆದನೆಂಬುದನ್ನೂ ಕಂಡವರು ಬರೆದಿದ್ದಾರೆ.

ವಿವಿಧ ದೇವರು, ರಾಜರು ಹಂದಿಯನ್ನು ಮರ್ಯಾದೆಯಿಂದ ದಯಾಪರತೆಯಿಂದ ಕಂಡಿದ್ದರೂ ನಾವು ಮಾತ್ರ, ಹಂದಿಗಳು ಅಸಹ್ಯೆಯಿಂದ ಕಾಣುತ್ತೇವೆ. ಆದರೆ ಪಾಶ್ಚಾತ್ಯರು ಹಂದಿಯನ್ನು ಕಾಣುವ ಬಗೆಯೇ ಬೇರೆ.

ಅದು ಅವರಿಗೊಂದು ಬಗೆಯ ಆಹಾರ ಮಾತ್ರ. ಹಂದಿಯ ಬಗೆಗೆ ಪಾಶ್ಚಾತ್ಯರಲ್ಲಿಯೂ ಕೆಲವು ಹೇಳಿಕೆಗಳುಂಟು, "ಹಂದಿ ತಿಂದಂತೆ ತಿನ್ನುತ್ತಾನೆ" ಎಂದು ನಾವು ಹೇಳುವಂತೆ ಅವರೂ ಹೇಳುತ್ತಾರೆ. Pig headed ಎನ್ನುವುದು ಮೂರ್ಖತನದ ಹಟಮಾರಿತನಕ್ಕೆ ಬಳಸುವ ಪದ. ನಂಬಲಸಾಧ್ಯವಾದ ಸಂದರ್ಭಗಳನ್ನು ತಿಳಿಸಲು Pigs might fly ಎಂದು ಹೇಳುತ್ತಾರೆ. Piggy-bank ಎನ್ನುವುದು ಚಿಕ್ಕಮಕ್ಕಳು ಹಣವನ್ನು ಕೂಡಿಹಾಕಿಡುವ ಚಿಕ್ಕ ಪೆಟ್ಟಿಗೆಗೆ ಒಂದು ಹೆಸರು.

ದನ ಕುರಿಗಳಂತೆ ಹಂದಿಯು ಹಿಂಡುಹಿಂಡಾಗಿ ತಿರುಗುವ ಪ್ರಾಣಿಯಲ್ಲ. ಆದ್ದರಿಂದ ಹಂದಿಯನ್ನು ಸಾಕುಪ್ರಾಣಿಯಂತೆ ಪಳಗಿಸುವ ಆವಶ್ಯಕತೆ ಮನುಷ್ಯನಿಗುಂಟಾಯಿತಂತೆ. ಬಹುಶಃ ಕ್ರಿಸ್ತಪೂರ್ವ ಏಳುಸಾವಿರ ವರ್ಷಕ್ಕೆ ಮೊದಲು ಚೀನಾ ದೇಶದಲ್ಲಿ ಹಂದಿಯನ್ನು ಸಾಕುಪ್ರಾಣಿಯನ್ನಾಗಿ ಪಳಗಿಸಲಾಯಿತು.

ಹಂದಿಯು ಪ್ರಸಂಗ ಬಂದರೆ ಈಜಲೂ ಬಹುದು. ವೇಗವಾಗಿ ಓಡಬಲ್ಲದು. ಅದರ ಘ್ರಾಣೇಂದ್ರಿಯ ಸೂಕ್ಷ್ಮವಾದದ್ದು. ಬಿಸಿಲಿನ ತಾಪದಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಮತ್ತೆ ಕೆಲವು ಸಲ ತಮ್ಮ ಮೈಮೇಲೆ ಮುತ್ತಿರುವ ಹೇನು ಮುಂತಾದ ಹುಳಹುಪ್ಪಡಿಗಳ ಕಾಟದಿಂದ ತಪ್ಪಿಸಿಕೊಳ್ಳಲು ಅವು ನೀರು, ಕೊಳಚೆ, ರಾಡಿಗಳಲ್ಲಿ ಉರುಳಾಡಿಕೊಂಡಿರುತ್ತವೆ.

ಹಂದಿಯ ಪ್ರತಿಯೊಂದು ಕಾಲಿನಲ್ಲಿ ನಾಲ್ಕು ಬೆರಳುಗಳಿದ್ದು ಎರಡು ಬೆರಳುಗಳು ಮಾತ್ರ ಭಾರವನ್ನು ಹೊರುತ್ತವೆ. ಹಂದಿಯು ಒಂದು ಸಲಕ್ಕೆ ಆರರಿಂದ ಹದಿನೈದು ಮರಿಗಳನ್ನು ಈಯುತ್ತದೆ. ವರ್ಷದಲ್ಲಿ ಎರಡು ಸಲ ಈ ರೀತಿ ಮರಿಗಳನ್ನು ಹಾಕುವುದು. ಅದರ ಗರ್ಭಧರಿಸುವ ಕಾಲ ನಾಲ್ಕುತಿಂಗಳು ಮಾತ್ರ. ಆರುತಿಂಗಳು ವಯಸ್ಸಿನ ಹಂದಿಯು ಗರ್ಭಧರಿಸಬಲ್ಲದು.

*- ಡಾ. ಆನಂದ ದೇಶಪಾಂಡೆ*

ತಾನು ಸೇವಿಸಿದ ಆಹಾರದಿಂದ ತನ್ನ ದೇಹದಲ್ಲಿ ಪುಷ್ಟವಾದ ಮಾಂಸವನ್ನು ತಯಾರಿಸುವಲ್ಲಿ ಹಂದಿಗೆ ಹೆಚ್ಚಿನ ಸಾಮರ್ಥ್ಯವಿರುವುದರಿಂದ, ಪಾಶ್ಚತ್ಯ ರಾಷ್ಟ್ರಗಳಲ್ಲಿ ಹಂದಿಯನ್ನು ಸಾಕಲಾಗುತ್ತಿದೆ. ಕೋಳಿ, ಕುರಿಗಳನ್ನು ಸಾಕುವ ಹಾಗೆ ಹಂದಿಯನ್ನು ಸಾಕುವುದೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಒಕ್ಕಲುತನದ ಒಂದು ಭಾಗವಾಗಿದೆ. ಅಮೇರಿಕದ ನಾಗರಿಕನು ಪ್ರತಿವರ್ಷ ಸಾಮಾನ್ಯವಾಗಿ ಎಪ್ಪತ್ತು ಪೌಂಡು ಹಂದಿಯ ಮಾಂಸವನ್ನು ಭಕ್ಷಿಸುತ್ತಾನಂತೆ. ಬ್ರಿಟನ್ನಿನಲ್ಲಿ ಕೂಡ ಹಂದಿಯ ಮಾಂಸ ಸೇವನೆ ಸಾಮಾನ್ಯವಾಗಿದೆ. ಬೆಳಗಿನ ಉಪಾಹಾರಕ್ಕೆ ಕೋಳಿಯ ತತ್ತಿ ಮತ್ತು ಬೇಕನ್ (ಹಂದಿಯ ಮಾಂಸ) ತಿನ್ನುವುದು ಬ್ರಿಟಿಶ್ ಜನರಲ್ಲಿ ಮೊದಲಿನಿಂದ ಇದ್ದ ರೂಢಿ. ಹಂದಿಯ ಬೆನ್ನು ಭಾಗದಿಂದ ತೆಗೆದ ಮಾಂಸವನ್ನು 'ಬೇಕನ್' ಎಂತಲೂ, ಅದರ ಕಾಲುಗಳಿಂದ ದೊರಕಿಸಿದ ಮಾಂಸವನ್ನು 'ಹ್ಯಾಮ್' ಎಂತಲೂ ಕರೆಯುತ್ತಾರೆ. ದುಂಡನೆಯ ಬ್ರೆಡ್ಡನ್ನು ಅರ್ಧ ಸೀಳಿಸಿ ಮಧ್ಯದಲ್ಲಿ 'ಹ್ಯಾಮ್' ಇಟ್ಟು ತಯಾರಿಸುವ ಇನ್ನೊಂದು ಆಹಾರ 'ಹ್ಯಾಂಬರ್ಗರ್'. ಹಂದಿಯ ಜಠರವನ್ನು 'ಟ್ರೈಪ್' ಎನ್ನುವ ಆಹಾರವನ್ನಾಗಿ ಸೇವಿಸುವರು. ಅದರ ಕರುಳನ್ನು ಇತರ ಮಾಂಸಗಳೊಂದಿಗೆ ಬೆರೆಸಿ ತಿನ್ನುವುದೂ ಉಂಟು. ಅಳಿದುಳಿದ ಮಾಂಸದ ತುಣುಕುಗಳನ್ನು ಹೂರಣದಂತೆ ಸಣ್ಣಕರುಳಿನಲ್ಲಿ ತುಂಬಿ ನಾಲ್ಕಾರು ಇಂಚು ಉದ್ದಳತೆಯಲ್ಲಿ ಕತ್ತರಿಸಿ ತಯಾರಿಸಿದ ಆಹಾರವೇ 'ಸಾಸಿಜ್'. ಕುಸುಬೆ, ಶೇಂಗಾ ಎಣ್ಣೆಯನ್ನು ಪಯೋಗಿಸುವಂತೆ ಹಂದಿಯ ನೆಣವನ್ನು ಖಾದ್ಯ ಪದಾರ್ಥಗಳನ್ನು ಕರಿಯಲು ಸಾಮಾನ್ಯವಾಗಿ ಉಪಯೋಗಿಸಲಾಗುತ್ತಿದೆ. ಹಂದಿಯ ರಕ್ತವನ್ನೂ

ಕೆಲವು ಮಾಂಸಾಹಾರಿ ಭಕ್ಷ್ಯಗಳಲ್ಲಿ ಬೆರೆಸುವುದುಂಟು. ಮುಸಲ್ಮಾನರು ಮತ್ತು ಯಹೂದ್ಯರು ಹಂದಿಯನ್ನು ತಿನ್ನುವುದಿಲ್ಲ. ಗೊಬ್ಬರ ತಯಾರಿಸಲು ಹಂದಿಯ ರಕ್ತವನ್ನು ಬಳಸಲಾಗುವುದು. ಅದರ ಚರ್ಮವನ್ನು ಬೇರೆ ಬೇರೆ ವಸ್ತುಗಳನ್ನು ತಯಾರಿಸಲು ಉಪಯೋಗಿಸುವುದಿದೆ. ಹಂದಿಯ ಕೂದಲುಗಳಿಂದ ಕುಂಚಗಳನ್ನು ತಯಾರಿಸಲಾಗುತ್ತದೆ. ಹಂದಿಯ ಮೇದೋಜೀರಕ ಗ್ರಂಥಿಯಿಂದ ಇನ್ಸುಲಿನ್ ಅನ್ನು ತಯಾರಿಸುತ್ತೇವೆ. ಅದರ ಹೃದಯದ ಕವಾಟಗಳನ್ನು ಮಾನವ ಹೃದಯದಲ್ಲಿ ಕೃತ್ರಿಮ ಕಸಿ ಮಾಡಲು ನಾವು ಉಪಯೋಗಿಸುತ್ತೇವೆ.

ಹಂದಿಯನ್ನು ಮನುಷ್ಯ ತಿಂದರೆ ಹಂದಿಯು ಕೊಳಚೆ, ತಿಪ್ಪೆಗಳಲ್ಲಿ ಎಸೆದಿರುವ ಆಹಾರವನ್ನು ಹುಡುಕಿಕೊಂಡು ತಿನ್ನುತ್ತದೆ. ಹೊಲಸನ್ನು ಕೂಡ ಅದು ತಿನ್ನುವುದಲ್ಲದೇ ಹಲವು ಹಣ್ಣುಗಳ ಸಿಪ್ಪೆಗಳನ್ನೂ ಕಬಳಿಸುತ್ತದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹಂದಿಗಳನ್ನು ಸಾಕಿದ ರೈತರು ಹಂದಿಗಾಗಿಯೇ ಬಟಾಟೆಗಳನ್ನು ಬೆಳೆಯುತ್ತಾರೆ. ಸೊಯಾಬೀನ್‌ಗಳು ಗೋದಿ, ಮೆಕ್ಕೆಜೋಳ, ಓಟ್ಸ್, ನೆಲಗಡಲೆಯ ಸಿಪ್ಪೆಗಳು ಹಂದಿಗಳ ಆಹಾರ. ಅಲ್ಲಿನ ರೈತರ ಒಣಗಿದ ರಕ್ತ, ಮೀನುಗಳನ್ನು ಹಂದಿಗಳಿಗೆ ಕೊಡುತ್ತಾರೆ.

ಬ್ರಿಟನ್ನಿನಲ್ಲಿ ಒಂದು ಶತಮಾನಕ್ಕೆ ಮೊದಲು, ಕ್ರಿಸ್ತಶಕ 1884ರಲ್ಲಿ, ರಾಷ್ಟ್ರೀಯ ಹಂದಿ ಸಾಕಣೆಗಾರರ ಸಂಘ ಸ್ಥಾಪಿತವಾಗಿದೆ. ಚೀನದಲ್ಲಿ ಜಗತ್ತಿನಲ್ಲಿಯೇ ಅತ್ಯಂತ ಹೆಚ್ಚು ಹಂದಿಗಳನ್ನು ಸಾಕಲಾಗುತ್ತಿದೆ. ಪಾಶ್ಚಾತ್ಯರು ಪಶುಪಕ್ಷಿ ಪ್ರಿಯರು. ಅವರು ತಮ್ಮ ಮನೆಗಳಲ್ಲಿ ನಾಯಿ, ಬೆಕ್ಕು, ಗಿಳಿ, ಕುದುರೆ, ಬಜರಿಗಾರ್, ಕೊಕೇಟೂ, ಹಲ್ಲಿ, ಗೂಗೆ, ಇಲಿಮರಿಗಳನ್ನು ಸಾಕುವಂತೆಯೆ ಹಂದಿಯನ್ನೂ ಭಹಳ ಅಕ್ಕರತೆಯಿಂದ ಬೆಳೆಯಿಸುವರು. ಇಷ್ಟೇ ಏಕೆ, ಪ್ರತಿವರ್ಷವೂ ಬ್ರಿಟನ್ನಿನಲ್ಲಿ ಹಂದಿಗೆ ಮುದ್ದುಕೊಡುವ ರಾಷ್ಟ್ರೀಯ ಸ್ಪರ್ಧೆ ಏರ್ಪಡಿಸುತ್ತಾರೆ! ಯಾರು ತಮ್ಮ ಹಂದಿಯನ್ನು ತೊಡೆಯಮೇಲಿರಿಸಿಕೊಂಡು ಬಹಳ ಸಲ ಅದಕ್ಕೆ ಮುದ್ದುಕೊಡುವರೋ ಅವರು ಸ್ಪರ್ಧೆಯಲ್ಲಿ ಗೆಲ್ಲುತ್ತಾರೆ. ಕೆಲವು ಸಲ ಟೆಲಿವಿಜನ್ನಿನಲ್ಲೂ ಆ ಸ್ಪರ್ಧೆಯನ್ನು ತೋರಿಸುತ್ತಾರೆ. ಕಳೆದ ವರ್ಷ ಸುಮಾರು ನಲವತ್ತುವರ್ಷ ವಯಸ್ಸಿನ ಮಹಿಳೆ ಅರ್ಧ ಗಂಟೆಯವರೆಗೆ ತನ್ನ ಹಂದಿಯನ್ನು ಮುದ್ದಿಸುವ ಮೂಲಕ ಈ ಸ್ಪರ್ಧೆಯಲ್ಲಿ ಜಯ ಗಳಿಸಿದಳು. ಅಮೇರಿಕದ ಟೆನೆಸ್ಸೀ ಪ್ರಾಂತದಲ್ಲಿರುವ ಬರ್‌ಫರ್ಡ್ ಬಟ್ಲರ್ ಎಂಬಾತನು ಸಾಕಿದ ಹಂದಿಯೊಂದರ ತೂಕ 1157 ಕಿಲೋಗ್ರಾಮುಗಳಷ್ಟಿತ್ತಂತೆ. ಇಂಥ ಭೀಮಕಾಯದ





ಹಂದಿ ಮತ್ತೆಲ್ಲಿಯೂ ಜನಿಸಿದ ಹಾಗೆ ಕಾಣು ವುದಿಲ್ಲ.

ಮನುಷ್ಯನು ಹಂದಿಯ ಮಾಂಸವನ್ನು ತಿನ್ನುವುದರಿಂದ ಕೆಲವು ರೋಗಗಳು ಬರಬ ಹುದು. ಸರಿಯಾಗಿ ಬೇಯಿಸದೇ ಇದ್ದ ಮಾಂಸವನ್ನು ಸೇವಿಸಿದಲ್ಲಿ ಟೀನಿಯಾ ಸೋಲಿಯಂ ಎಂಬ ಲಾಡಿಹುಳ (ಪಟ್ಟೆಹುಳ) ಮನುಷ್ಯನ ಸಣ್ಣ ಕರುಳಿನಲ್ಲಿ ಬೆಳೆಯಬಹು ದಾಗಿದೆ. ಕೆಲವು ಸಂದರ್ಭಗಳಲ್ಲಿ ಈ ಹುಳದ ಕೀಟಕ ದೇಹದಲ್ಲಿ ಪಸರಿಸುವುದಲ್ಲದೇ ಸ್ನಾಯುಗಳಲ್ಲೂ ಮಿದುಳಿನಲ್ಲೂ ಸೇರಿ ಕೊಂಡು ಅಲ್ಲಿ ಮರಣವನ್ನಪ್ಪುವುದು. ಈ ರೀತಿ ಉಂಟಾದ ಪ್ರತಿಕ್ರಿಯೆಯಿಂದಾಗಿ ಕೆಲವು ವರ್ಷಗಳಲ್ಲಿ ಆ ವ್ಯಕ್ತಿಯ ಸ್ನಾಯುಗಳಲ್ಲಿ, ಮಿದುಳಿನಲ್ಲಿ ಚಿಕ್ಕಪುಟ್ಟ ಗಡ್ಡೆಗಳುಂಟಾಗಬ ಹುದು. ಮಿದುಳಿನಲ್ಲಿ ಉದ್ಭವಿಸಿದ ಈ ಗಡ್ಡೆ ಗಳು ಆ ವ್ಯಕ್ತಿಯಲ್ಲಿ ಅಪಸ್ಮಾರವನ್ನುಂಟು ಮಾಡಬಲ್ಲವು.

ವೈದ್ಯಕೀಯವಾಗಿಯೂ ಹಂದಿಯಿಂದ ಉಪಯೋಗವಿದೆ.

1921ರಲ್ಲಿ ಕೆನಡಾದ ವೈದ್ಯ ಫ್ರೆಡರಿಕ್ ಬ್ಯಾಂಟಿಂಗ್ ಹಾಗೂ ಆತನ ಸಹಾಯಕ ಚಾರ್ಲ್ಸ್ ಬೆಸ್ಟ್ ನಾಯಿಯ ಮೇದೋಜೀರಕ ದಿಂದ ಇನ್ಸುಲಿನ್‌ಅನ್ನು ಬೇರ್ಪಡಿಸಿದಾಗ ಜಗತ್ತಿನಾದ್ಯಂತ ಸಿಹಿಮೂತ್ರ ರೋಗಿಗಳ ಜೀವನವೇ ಬದಲಾಯಿತು. ಆ ಮೊದಲು ಇನ್ಸುಲಿನ್ ಅವಲಂಬಿಸಿದ ಸಿಹಿಮೂತ್ರರೋ ಗಿಗಳು ರೋಗ ತಗಲಿದ ಎರಡು ವರ್ಷಗಳ ಲ್ಲಿಯೇ ಸಾವನ್ನಪ್ಪುತ್ತಿದ್ದರು. ಈಗ ಆ ಪರಿ ಸ್ಥಿತಿ ಸಂಪೂರ್ಣ ಬದಲಾಯಿಸಿದೆ. ದಿನಂಪ್ರತಿ ಒಂದೆರಡುಸಲ ಇನ್ಸುಲಿನ್ ಇಂಜೆಕ್ಷನ್ ಮಾಡಿ ಕೊಂಡು ಉತ್ತಮ ಜೀವನ ನಡೆಸಬಹುದಾ ಗಿದೆ. ಹಾಗಾದರೆ ಇನ್ಸುಲಿನ್ ದೊರೆಯುವ ಬಗೆ ಯಾವುದು? ಆಕಳು ಮತ್ತು ಹಂದಿಯ ಮೇದೋಜೀರಕ ಗ್ರಂಥಿಗಳಿಂದ ಜಗತ್ತಿನಾ ದ್ಯಂತ ಔಷಧ ಪ್ರಯೋಗ ಶಾಲೆಗಳಲ್ಲಿ ಇನ್ಸು ಲಿನ್ ತಯಾರಿಸಲಾಗುತ್ತದೆ. ಕಸಾಯಿಖಾನೆಗ ಳಲ್ಲಿ ಕೊಲ್ಲಲ್ಪಟ್ಟ ಆಕಳು ಹಾಗು ಹಂದಿಯ ಮೇದೋಜೀರಕ ಗ್ರಂಥಿಗಳೇ ಸಿಹಿಮೂತ್ರ ರೋಗಿಗಳಿಗೆ ವರದಾನ. ಬೇರೆ ಯಾವುದೇ ಪ್ರಾಣಿಯಿಂದ ನಮಗೆ ಬೇಕಾಗುವ ಇನ್ಸು ಲಿನ್ ಪಡೆಯಲು ಸಾಧ್ಯವಾಗಿಲ್ಲ. (ಇತ್ತೀಚೆಗೆ ಜೈವಿಕ ತಂತ್ರ ಜ್ಞಾನದಿಂದ ಕೃತಕವಾಗಿ ಇನ್ಸು ಲಿನ್‌ಅನ್ನು ದೊಡ್ಡಪ್ರಮಾಣದಲ್ಲಿ ತಯಾರಿಸ ಲಾಗಿದ್ದು ಅದರ ಬಳಕೆ ಪಾಶ್ಚಾತ್ಯರಾಷ್ಟ್ರಗ ಳಲ್ಲಿ ಹೆಚ್ಚುತ್ತಲಿದೆ.)

ಹಂದಿಯ ಹಿರಿಮೆ ಇಷ್ಟಕ್ಕೇ ಮುಗಿಯ ಲಿಲ್ಲ. ಕೆಲವು ವ್ಯಕ್ತಿಗಳ ಹೃದಯದಲ್ಲಿ ವಿವಿಧ

ರೋಗಗಳಿಂದಾಗಿ ಹೃದಯದ ಕವಾಟಗಳು (ಮನುಷ್ಯನ ಹೃದಯದಲ್ಲಿ ಒಟ್ಟು ನಾಲ್ಕು ಕವಾಟಗಳಿರುತ್ತವೆ) ಕ್ಷತಿಗೊಂಡಿದ್ದರಿಂದ ಕ್ರಮೇಣ ಹೃದಯವು ಸರಿಯಾಗಿ ತನ್ನ ಕಾರ್ಯಮಾಡದೇ ರೋಗಿಯು ಅಶಕ್ತನಾಗುವುನಲ್ಲದೆ ತದನಂತರ ಏರುಸಿರಿನಿಂದಾಗಿ ಚಲನವಲನಗಳಲ್ಲಿ ವಿಪರೀತ ತೊಂದರೆಯೂ ಆಗುವುದು. ಶಸ್ತ್ರಕ್ರಿಯೆಯಿಂದ ಹೃದಯದ ಈ ಕವಾಟುಗಳನ್ನು ಸರಿಪಡಿಸುವ ಪ್ರಸಂಗವೂ ಬರಬಹುದು. ಕೆಲವು ಸಲ ಈ ಕವಾಟಗಳನ್ನು ಕಿತ್ತಿಹಾಕಿ ಕೃತ್ರಿಮ ಕವಾಟಗಳನ್ನು ಜೋಡಿಸಬೇಕಾಗುವದು. ಹೃದಯ ಶಸ್ತ್ರಚಿಕಿತ್ಸಾ ವೈದ್ಯರು ಮಾನವನಿರ್ಮಿತ ಕೃತ್ರಿಮ ಕವಾಟಗಳನ್ನು ಹೃದಯದಲ್ಲಿ ಅಳವಡಿಸುತ್ತಾರೆ. ಆದರೆ ಹಂದಿಯ ಹೃದಯದ ಕವಾಟಗಳನ್ನೂ ಮನುಷ್ಯನ ಹೃದಯದಲ್ಲಿ ಕಸಿಮಾಡಲಾಗುತ್ತಿದೆ ಎಂದು ನಾನು ನಿಮಗೆ ಹೇಳಿದರೆ ಅಚ್ಚರಿಯಾಗುವುದಲ್ಲವೆ? ಜಗತ್ತಿನಾದ್ಯಂತ ಅನೇಕ ಹೃದಯರೋಗಿಗಳು ಹಂದಿಯ ಹೃದಯದ ಕವಾಟಗಳ ಕಸಿಮಾಡಿಸಿಕೊಂಡು ಉತ್ತಮ ಜೀವನ ನಡೆಸಿದ್ದಾರೆ.

ಹಂದಿಯ ಹೃದಯವನ್ನು ಮನುಷ್ಯನ ಎದೆಯಲ್ಲಿ ಕಸಿಮಾಡಿದ್ದು ಈಗ ಕೇವಲ ವೈದ್ಯಕೀಯ ಇತಿಹಾಸವಾಗಿ ಉಳಿದಿದೆಯೇ ವಿನಾ ವಾಸ್ತವವಾಗಿ ಪರಿಣಮಿಸಿಲ್ಲ. ನಾಯಿ, ಕುದುರೆ, ಆಕಳಿನಂತೆ ಹಂದಿಯೂ ನಿಮ್ಮ ಹೃದಯವನ್ನು ಗೆಲ್ಲದಿರಬಹುದು. ಆದರೆ ಮಾನವನಿಗೆ ಹಂದಿಯು ಅತ್ಯಂತ ಉಪಯುಕ್ತ.

ನೀವೇ ಯೋಚಿಸಿ ನೋಡಿ, ಕಾರ್ಪೊರೇಶನ್ನಿನವರು, ಮುನಿಸಿಪಾಲಿಟಿಯವರು, ನಗರ, ಊರುಗಳಲ್ಲಿ ಸ್ವಚ್ಛತೆಗೆ ಗಮನಕೊಡದೇ ಇದ್ದುಳ್ಳ ಗಟಾರ, ಮೂತ್ರಾಶಯ, ಶೌಚಾಲಯಗಳನ್ನು ಕಿತ್ತಿಹಾಕಿ ಅಲ್ಲೆಲ್ಲ ನಿಮಗೆ ಬೇಕಾಗುವ ಆಡಂಬರದ, ಕ್ಷುಲ್ಲಕ ಸಾಮಗ್ರಿಗಳನ್ನು ಮಾರುವ ಅಂಗಡಿಗಳನ್ನು ತೆರೆಯುತ್ತಿರುವಾಗ ನಿಮ್ಮ ಊರಲ್ಲಿನ ಹೊಲಸನ್ನು ತೆಗೆಯಲು ಹಂದಿಯೇ ಉಪಯುಕ್ತವಲ್ಲವೆ? ●

---

*ರುಮೇನಿಯದ ವಿಜ್ಞಾನಿಗಳು ಜಲಜನಕದ ಸಹಾಯದಿಂದ ಚಲಿಸಬಲ್ಲ ವಾಹನವನ್ನು ರೂಪಿಸಿದ್ದಾರೆ. ವಾಹನದಲ್ಲಿ ಬಳಸುವ ಪೆಟ್ರೋಲಿನಲ್ಲಿ ಶೇಕಡಾ ಒಂದರಷ್ಟು ಜಲಜನಕ ಬೆರೆಸಿದರೆ ಆದರಿಂದ ಶೇಕಡಾ ನಲವತ್ತರಷ್ಟು ಪೆಟ್ರೋಲಿನ ಉಳಿತಾಯವಾಗುತ್ತದೆ. ಅವರು ಅಭಿವೃದ್ಧಿ ಪಡಿಸಿರುವ ಇಂಧನ ಟ್ಯಾಂಕನ್ನು ಉಕ್ಕು ಅಥವಾ ಡ್ಯುರಲ್ಯುಮಿನಿಯಮ್ ಲೋಹದ ಕೊಳವೆಗಳು ಸುತ್ತುವರೆದಿದ್ದು, ಇದರಲ್ಲಿ ಟಟಾನಿಯಂ ಮತ್ತು ಕಬ್ಬಿಣ ಮಿಶ್ರಲೋಹದ ಪುಡಿ ಇರುತ್ತದೆ. ಇದು ಜಲಜನಕವನ್ನು ಹಿಡಿದಿಟ್ಟುಕೊಂಡು ಸಂದರ್ಭಾನುಸಾರವಾಗಿ ಇಂಧನ ಕೋಶದೊಳಗೆ ಬಿಡುತ್ತದೆ.* ***ಶೆಕೈ***

---

ಬಂಗಾರ ಮಾಡುವುದಕ್ಕಿಂತಲೂ ಜಪಾನಿನ ಒಂದು ಜಾತಿಯ ಕೋಸುಗಡ್ಡೆಯ ಬೀಜಗಳ ಮಾರಾಟ ಮಾಡುವುದೇ ಹೆಚ್ಚು ಲಾಭದಾಯಕವೆಂದು, ನೀಲಗಿರಿ ಅಂಚಿನಲ್ಲಿರುವ ಗುಡಲೂರಿನ ಸರಾಫನೊಬ್ಬನ ಅಭಿಪ್ರಾಯ. ಒಂದು ಕೆ.ಜಿ.ಗೆ ಬೀಜ ಮಾರಿದರೆ ಹತ್ತು ಸಾವಿರಕ್ಕೆ ಕಡಿಮೆ ಇಲ್ಲದೆ ಸಿಗುತ್ತದಂತೆ. ಆ ಬೀಜವನ್ನು ಜಪಾನಿನಿಂದ ಶ್ರೀಲಂಕಾ ದ್ವೀಪದ ಮಾರ್ಗವಾಗಿ ಗುಪ್ತವಾಗಿ ತರಿಸಬೇಕಂತೆ. ಕರಾವಳಿಯ ಬಂದರುಗಳಲ್ಲಿರುವ ಕಸ್ಟಮ್ಸ್ ಅಧಿಕಾರಿಗಳ ಕಣ್ಣು ಇರುವುದು ಬಂಗಾರದ ಬಿಸ್ಕತ್, ಎಲೆಕ್ಟ್ರಾನಿಕ್ ಉಪಕರಣಗಳು, ಬೆಳ್ಳಿ, ಮಾದಕ ವಸ್ತುಗಳಾದ ಹೆರಾಯಿನ್, ಬ್ರೌನ್ ಷುಗರ್ ಇತ್ಯಾದಿಗಳ ಮೇಲೆಯೇ ಹೊರತು ಆ ಬೀಜದ ಮೇಲಲ್ಲ. ಹಾಗಾಗಿ ಆ ಬೀಜ ಭಾರತಕ್ಕೆ ಸಲೀಸಾಗಿ ಬಂದು ವ್ಯಾಪಾರಿಗಳ ಅದೃಷ್ಟ ಖುಲಾಯಿಸುವುದಂತೆ. ●

*ಸಂಗ್ರಹ: ಕೋಳಿವಾಡ ಕೃಷ್ಣಮೂರ್ತಿ*

ಕೆ.ಟಿ. ಪಾಂಡುರಂಗಿ

# ವಾಸ್ತವತೆ - ಆದರ್ಶ

ಜೀವನದಲ್ಲಿ ವಾಸ್ತವತೆಯನ್ನು ಕಾಯ್ದುಕೊಳ್ಳಬೇಕೇ ಆದರ್ಶವನ್ನು ಬೆಳೆಸಿಕೊಳ್ಳಬೇಕೇ ಎಂಬ ಪ್ರಶ್ನೆಯು ಆಗಾಗ ಉದ್ಭವಿಸುತ್ತದೆ. ವಾಸ್ತವತೆ ಅಂದರೇನು? ಆದರ್ಶ ಅಂದರೇನು? ಎಂಬುದನ್ನು ಮೊದಲು ನಾವು ವಿವೇಚಿಸಬೇಕು. ಇವುಗಳಲ್ಲಿ ಒಂದನ್ನು ಬಿಟ್ಟು ಇನ್ನೊಂದು ಇರಬಲ್ಲದೇ ಎಂಬುದನ್ನು ಆಲೋಚಿಸಬೇಕು.

ವಾಸ್ತವತೆಯೆಂದರೆ ತಾನು ತನ್ನ ಕುಟುಂಬ, ಪರಿವಾರ ತನ್ನ ಮತ್ತು ಅವರ ಜೀವನದ ಅಗತ್ಯಗಳು ಈ ಪರಿಮಿತಿಯಲ್ಲಿ ಮಾತ್ರ ವ್ಯವಹರಿಸುವುದು ಎನ್ನಲು ಬರುವುದಿಲ್ಲ. ತನ್ನ ದುಡಿಮೆಯಲ್ಲಿ ಕುಟುಂಬ ಪರಿವಾರ ಸಾಕುವುದು ಆದರ್ಶವಲ್ಲವೇ? ತನ್ನ ಜೀವನದ ಅಗತ್ಯಗಳನ್ನು ಒದಗಿಸಿಕೊಳ್ಳುವಾಗ ಇತರರಿಗೆ ಪ್ರತಿಕೂಲವಾಗದಂತೆ ಎಚ್ಚರವಹಿಸುವುದು ಆದರ್ಶವಲ್ಲವೇ? ತಾಯಿಯು ಮಗುವನ್ನು ಸಾಕಿ ಸಲಹುವದು ವಾಸ್ತವವೋ ಆದರ್ಶವೋ? ನಮ್ಮ ನಮ್ಮ ವೃತ್ತಿಯಲ್ಲಿ ನಾವು ವಂಚನೆಯಿಲ್ಲದೆ ನಮ್ಮ ಶಕ್ತಿಯನ್ನು ವಿನಿಯೋಗಿಸುವುದು, ಆಸಕ್ತಿಯನ್ನು ವಹಿಸುವುದು ವಾಸ್ತವವೋ ಆದರ್ಶವೋ? ಇದರಿಂದ ವಾಸ್ತವವನ್ನು ಆದರ್ಶದಿಂದ ಬೇರ್ಪಡಿಸಲು ಬರುವುದಿಲ್ಲ ಎಂಬುದು ಸ್ಪಷ್ಟವಾಗುವುದು. ಇನ್ನು ಜ್ಞಾನಕ್ಕಾಗಿಯೇ ಆಯುಷ್ಯವನ್ನೆಲ್ಲ ಮೀಸಲಾಗಿಡುವುದು, ಒಂದು ಉದ್ಯಮ ಅಥವಾ ವ್ಯಾಪಾರದ ಬೆಳವಣಿಗೆಗಾಗಿಯೇ ಹಗಲು ರಾತ್ರಿಯೆನ್ನದೆ ದುಡಿಯುವುದು, ಒಂದು ಸಾರ್ವಜನಿಕ ಉದ್ದೇಶಕ್ಕಾಗಿಯೇ ಜೀವನವನ್ನೆಲ್ಲ ಸವೆಸುವುದು ಇವೆಲ್ಲ ಆದರ್ಶವೆಂದು ಕರೆಯಿಸಿಕೊಂಡರೂ ಈ ಕಾರ್ಯಗಳಲ್ಲಿ ಕ್ರಿಯಾಶೀಲರಾಗುವ ವಾಸ್ತವತೆಯಿಲ್ಲದೆ ಕೇವಲ ಭಾವನಾತ್ಮಕ ಉದ್ದೇಶ ಆದರ್ಶವೆನಿಸಲಾರದು. ಆದ್ದರಿಂದ ಆದರ್ಶವನ್ನೂ ವಾಸ್ತವತೆಯಿಂದ ಬೇರ್ಪಡಿಸಲು ಬರುವುದಿಲ್ಲ. ಮನುಷ್ಯರು ವಾಸ್ತವತೆಯಲ್ಲಾಗಲೀ, ಆದರ್ಶದಲ್ಲಾಗಲೀ ಎಡವುವದು ಇವುಗಳನ್ನು ಬೇರ್ಪಡಿಸುವುದರಿಂದ ಅಲ್ಲ. ಆದರೆ ಇವುಗಳಲ್ಲಿ ಯಥೋಚಿತ ಪ್ರಮಾಣ ಸಮನ್ವಯ ಇಲ್ಲದೇ ಇರುವುದರಿಂದ.

ಮಗುವಿಗಾಗಿ ಕಷ್ಟಪಡುವ ತಾಯಿ ಮಗುವು ಬೆಳೆದಂತೆ ಅದನ್ನು ಸ್ವಾವಲಂಬಿಯನ್ನಾಗಿ ಮಾಡದೆ ತಾನೇ ದುಡಿಯುತ್ತ ಹೋಗುವುದು ವಾಸ್ತವತೆ ಆದರ್ಶಗಳ ಸಮನ್ವಯವನ್ನು ತಪ್ಪಿಸಿದಂತೆ. ಇದರಂತೆಯೇ ಒಂದು ಸಾಮಾಜಿಕ ಉದ್ದೇಶವನ್ನು ಆ ಉದ್ದೇಶದ ವ್ಯಾಪ್ತಿಯನ್ನು ಮೀರಿ ಹಟದಿಂದ ಕಾರ್ಯಗತಗೊಳಿಸಲು ಪ್ರಯತ್ನಿಸುವುದು ವಾಸ್ತವತೆ ಆದರ್ಶಗಳ ತಾಳೆಯನ್ನು ತಪ್ಪಿಸಿದ ಹಾಗೆ. ಇಂಥ ತಾಳೆ ತಪ್ಪಿದಾಗಲೇ ವಾಸ್ತವತೆ ಹೋಗಿ ವಂಚನೆ ಬರುವುದು. ಆದರ್ಶ ಹೋಗಿ ಡಾಂಭಿಕತನ ಬರುವುದು

# ಜಪಾನು ಪರಮಾಣು ಬಾಂಬಿಗೆ ಬೆದರಿತ್ತೆ?

ಡಾ. ಆರ್.ಕೆ.ಕುಲಕರ್ಣಿ

**1945**ರ ಮೇ ತಿಂಗಳಲ್ಲಿ ಬರ್ಲಿನ್ನಿನ ಪತನವಾಯಿತು. ಜರ್ಮನಿ ಧೂಳೀಪಟವಾಗಿ ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡ. ಯೂರೋಪಿನಲ್ಲಿ ದ್ವಿತೀಯ ಮಹಾ ಯುದ್ಧ ಅಂತ್ಯಗೊಂಡಿದ್ದರೂ ಪೂರ್ವದಲ್ಲಿ ಜಪಾನು ಏಕಾಕಿಯಾಗಿ ಹೋರಾಡುತ್ತಿತ್ತು. ಏಶಿಯದ ಹೆಚ್ಚಿನ ಭಾಗ ಇನ್ನೂ ಅದರ ಕೈಯಲ್ಲಿತ್ತು. ಓಕಿನಾವಾ ಯುದ್ಧದಲ್ಲಿ 75,000 ಸೈನಿಕರನ್ನು ಕಳೆದುಕೊಂಡ ಅಮೇರಿಕವು ಯುದ್ಧವನ್ನು ಮುಂದುವರಿಸುವುದು ಇನ್ನಷ್ಟು ನಷ್ಟಕ್ಕೆಡೆ ಮಾಡಿಕೊಡುವುದೆಂಬುದನ್ನು ಅರಿತಿತ್ತು. ಜಪಾನು ಕನಿಷ್ಟಪಕ್ಷ ಇನ್ನೂ ಮೂರು ವರ್ಷವಾದರೂ ಯುದ್ಧವನ್ನು ಮುಂದುವರಿಸಬಹುದೆಂದು ಎಲ್ಲರ ಅಂದಾಜಿತ್ತು. ಅದೇ ವರ್ಷದ ಅಗಸ್ಟ 6ರಂದು ಹೀರೋಷಿಮಾದ ಮೇಲೆ ಅಮೇರಿಕ ಪರಮಾಣುಬಾಂಬು ಹಾಕಿದಾಗ ಎರಡು ಲಕ್ಷ ನಾಲ್ವತ್ತು ಸಾವಿರ ಜನ ಪ್ರಾಣಕ್ಕೆರವಾದರು. ಮೂರುದಿನಗಳ ನಂತರ ನಾಗಾಸಾಕಿಯಲ್ಲಿ ಬಿದ್ದ ಇನ್ನೊಂದು ಪರಮಾಣು ಬಾಂಬು ಎಪ್ಪತ್ತೆರಡು ಸಾವಿರ ಜನರನ್ನೂ ಸವರಿಹಾಕಿತು. ಮುಂದೆ ಜಪಾನು ಶರಣಾಗಿ ಮಹಾಯುದ್ಧ ನಿರೀಕ್ಷೆಗೂ ಮೀರಿ ಬೇಗನೇ ಮುಕ್ತಾಯಗೊಂಡಿತು. ಆದರೆ ನಿಜವಾಗಿ ಜಪಾನು ಶರಣಾದ ದಿನ 1945ರ ಸಪ್ಟೆಂಬರ್ ಎರಡರಂದು. ನಡುವೆ ಏಕಿಷ್ಟು ತಡ? ಹೀರೋಷಿಮಾದ ಗತಿಯನ್ನು ನೋಡಿದರೆ ಯಾವುದೇ ಬುದ್ಧಿಯುಳ್ಳ ದೇಶದ ನಾಯಕನು ಮರುದಿನವೇ ಬೇಶರತ್ತಾಗಿ ಶರಣಾಗತಿಯನ್ನು ಘೋಷಿಸುತ್ತಿದ್ದ. ಅಮೇರಿಕ ಎರಡು ಪರಮಾಣು ಬಾಂಬುಗಳನ್ನು ಹಾಕಿ ಜಪಾನು ಬೇಗನೇ ಶರಣಾಗದಿದ್ದರೆ ಹೀಗೆಯೇ ಒಂದೊಂದಾಗಿ ಅವರ ನಗರಗಳನ್ನು ನಾಶ ಮಾಡುವುದಾಗಿ ಎಚ್ಚರಿಕೆಯಿತ್ತಿತ್ತು. ಅದಕ್ಕೆ ಉತ್ತರವಾಗಿ ಜಪಾನು

''Victory in the Far East'' ಪುಸ್ತಕದಿಂದ

ಸ್ವಿಸ್ ರಾಯಭಾರವರ್ಗದ ಮುಖಾಂತರ ಕಳಿಸಿದ ಸಂದೇಶದಲ್ಲಿ ತಾನು ಶರಣಾಗುವ ಸಂಭವವನ್ನು ತಳ್ಳಿಹಾಕಿತ್ತು.

ಮೊದಲೆ ಎಚ್ಚರಿಕೆ ಕೊಟ್ಟಂತೆ ಅಮೇರಿಕವು ಪರಮಾಣು ಬಾಂಬನ್ನು ಹಾಕುವ ಕಾರ್ಯಕ್ರಮವನ್ನು ಮುಂದುವರಿಸಬೇಕಾಗಿತ್ತು. ಆದರೆ ಹಾಗಾಗಲೇ ಇಲ್ಲ. ಅದರ ಹತ್ತಿರ ಅಷ್ಟು ಬಾಂಬುಗಳಿದ್ದರೆ ತಾನೆ ಅದು ಹಾಗೆ ಮಾಡುವುದು? ವಾಸ್ತವಿಕವಾಗಿ ಆಗ ಅಮೇರಿಕದ ಹತ್ತಿರ ಇದ್ದುದು ಕೇವಲ ಎರಡೇ ಬಾಂಬುಗಳು.

ಜಪಾನು ಹೀಗೆ ಪಟ್ಟು ಹಿಡಿಯಲು ಕಾರಣವಿರದಿರಲಿಲ್ಲ. ಯುದ್ಧಕ್ಕೆ ಬೇಕಾದ ಕಬ್ಬಿಣ, ತೈಲ ಇತ್ಯಾದಿ ವಸ್ತುಗಳು ಅದರ ವಶದಲ್ಲಿದ್ದ ಚೀನ, ಕೋರಿಯದಿಂದ ಬರುತ್ತಿದ್ದವು. ಎಲ್ಲಿಯವರೆಗೆ ಈ ವಸ್ತುಗಳು ಸಿಗುತ್ತಿದ್ದುವೋ ಅಲ್ಲಿಯವರೆಗೆ ಯುದ್ಧ ಮುಂದುವರಿಯಬಹುದಿತ್ತು. ಅದೇ ವರ್ಷದ ಮಾರ್ಚ್ ತಿಂಗಳಲ್ಲಿ ಪಾಸು ಮಾಡಿದ ಕಾಯಿದೆ ಪ್ರಕಾರ 17 ವರ್ಷದ ಹುಡುಗರನ್ನೂ ಯುದ್ಧಕ್ಕೆ ಕಳಿಸಲಾಗುತ್ತಿತ್ತು.

ಚೀನ, ಕೋರಿಯ, ಮಂಗೋಲಿಯದ ರಕ್ಷಣೆಗೆ ಜಪಾನಿನ ಹನ್ನೆರಡು ಲಕ್ಷ ಸೈನಿಕರುಳ್ಳ ಬಲವಾದ ಕ್ವಾಂಟುಂಗ್ ಸೈನ್ಯ ಟೊಂಕ ಕಟ್ಟಿ ನಿಂತಿತ್ತು. ಜಪಾನು ಸಂಪೂರ್ಣ ಸೋಲುವುದು ನೈತಿಕ ಸ್ಥೈರ್ಯ ಉನ್ನತ ಮಟ್ಟದಲ್ಲಿದ್ದ ಸೈನ್ಯ ನಾಶವಾದ ಮೇಲೆಯೇ ಎಂದು ಜಪಾನಿಗೆ ಗೊತ್ತಿತ್ತು. ಅಲ್ಲದೆ ರೋಗಾಣುಗಳ ಯುದ್ಧವನ್ನು ಪ್ರಾರಂಭಿಸುವ ಮೂಲಕ ಮಿತ್ರರಾಷ್ಟ್ರಗಳನ್ನು ಸದೆಬಡೆಯುವ ವಿಚಾರವನ್ನೂ ಆಗ ಜಪಾನಿನ ನಾಯಕರು ಮಾಡುತ್ತಿದ್ದರು.

ಈ ಹಿಂದೆ 1945ರ ಫೆಬ್ರುವರಿಯಲ್ಲಿ ಯಾಲ್ಟಾದಲ್ಲಿ ನಡೆದ ಸಭೆಯ ಒಪ್ಪಂದದ ಪ್ರಕಾರ ಜರ್ಮನಿ ಪತನಗೊಂಡ ಎರಡು ತಿಂಗಳ ನಂತರ ಜಪಾನಿನ ಮೇಲೆ ಯುದ್ಧ ಸಾರಲು ಅಮೇರಿಕವು ರಶಿಯವನ್ನು ಒತ್ತಾಯಿಸಿತ್ತು. ಆ ಪ್ರಕಾರ ರಶಿಯವು ಅಗಸ್ಟ 8ರಂದು ಮಾಸ್ಕೋದಲ್ಲಿ ಜಪಾನಿನ ರಾಯಭಾರಿಯನ್ನು ಕರೆದು ತಾನು ಜಪಾನಿನೊಂದಿಗೆ ಯುದ್ಧ ಮಾಡುವ ಸ್ಥಿತಿಯಲ್ಲಿದೆಯೆಂದು ಹೇಳಿತು. ಅಷ್ಟರಲ್ಲಾಗಲೇ ಪಶ್ಚಿಮ ಭಾಗದಿಂದ ಪೂರ್ವಗಡಿಯೆಡೆಗೆ ಸೈನಿಕರು ಮತ್ತು ಯುದ್ಧಸಾಮಗ್ರಿಗಳನ್ನು ಸಾಗಿಸುವ ಕಾರ್ಯ ಪೂರ್ಣಗೊಂಡಿತ್ತು. ರಶಿಯ ಮತ್ತು ಜಪಾನುಗಳ ನಡುವೆ ಯುದ್ಧ ನಿಷೇಧ ಒಪ್ಪಂದ ಇದ್ದುದರಿಂದ ಜಪಾನು ಈ ರೀತಿಯ ಘಟನೆ ಸಂಭವಿಸುವುದೆಂದು ಭಾವಿಸಿರಲಿಲ್ಲ. ಹೀಗಾಗಿ ಟ್ರಾನ್ಸಬೇಕಲ್‌ನಲ್ಲಿ ಯುದ್ಧ ಶುರುವಾದಾಗ ಜಪಾನಿನ ಸೈನ್ಯವಾದ ಕ್ವಾಂಟುಂಗ್‌ಗೆ ಇದು ಆಘಾತಾಶ್ಚರ್ಯಗಳನ್ನುಂಟು ಮಾಡಿತು. ಮಹಾಯುದ್ಧವನ್ನು ಕೊನೆಗಾಣಿಸುವುದಕ್ಕಾಗಿ ಈ ಯುದ್ಧ ಎಂದು ನೆಪವೊಡ್ಡಿ ಸೋವಿಯತ್ ರಶಿಯ ಜಪಾನ್‌ನ ಅಳಿದುಳಿದ ಆಸೆಯನ್ನೂ ಭಗ್ನಗೊಳಿಸಿತು.

ರಶಿಯದ ಹದಿನೈದು ಲಕ್ಷ ಸೈನ್ಯ, ಇಪ್ಪತ್ತಾರು ಸಾವಿರ ಫಿರಂಗಿಗಳ ಐದು ಸಾವಿರ ಟ್ಯಾಂಕುಗಳು, ಮೂರುವರೆ ಸಾವಿರ ವಿಮಾನಗಳು ಶೀಘ್ರಗತಿಯಲ್ಲಿ ಮುನ್ನುಗ್ಗಿ ಪೋರ್ಟ್ ಆರ್ಥರ್ ವರೆಗೆ ತಲುಪಿದವು. 1905ರಲ್ಲಿ ಜಪಾನ-ರಶಿಯಗಳ ನಡುವೆ ನಡೆದ ಯುದ್ಧದಲ್ಲಿ ಕಳೆದುಕೊಂಡಿದ್ದ ಈ ಬಂದರು ಮತ್ತೆ ರಶಿಯದ ವಶವಾಯಿತು. 1945ರ ಅಗಸ್ಟ 22ರಂದು ಕ್ವಾಂಟುಂಗ್ ಸೈನ್ಯ ಕಮ್ಯುನಿಸ್ಟರಿಗೆ ಶರಣಾಯಿತು. ಅಷ್ಟರಲ್ಲಾಗಲೇ ಇದರ ಮುನ್ಸೂಚನೆ ಕಂಡಿದ್ದ ಚಕ್ರವರ್ತಿ ಹಿರೋಹಿಟೋ ಜಪಾನಿನ ಶರಣಾಗತಿಯನ್ನು ಪ್ರಕಟಿಸಿದ. ಅಧಿಕೃತ ಶರಣಾಗತಿ ಸೆಪ್ಟೆಂಬರ್ 2ರಂದು ಪೂರ್ಣಗೊಂಡು ದ್ವಿತೀಯ ಮಹಾಯುದ್ಧ ಕೊನೆಗೊಂಡಿತು. ●

ಅವರು ಅಂಧಕಾರದಲ್ಲಿ
ತೊಳಲುತ್ತಿದ್ದ ಹರಿಜನರಿಗೆ
ಬೆಳಕು ತೋರಿಸಿದರು

# ಹರಿಜನರ 'ಕಾಕಾ'

ಎಂ. ಎಚ್. ಕೌಜಲಗಿ

ಕಾಕಾ ಕಾರಖಾನೀಸರಿಗೆ ಭಾರತ ಸರಕಾರ ಅವರ ಸಮಾಜಸೇವೆಯನ್ನು ಅನುಲಕ್ಷಿಸಿ 'ಪದ್ಮಶ್ರೀ' ಪದವಿಯನ್ನು ದಯಪಾಲಿಸಿದೆ. ಅವರ ಮಿತ್ರರಿಗೂ ಪ್ರಶಂಸಕರಿಗೂ ಇದು ಬಲು ಸಂತೋಷದ ವಾರ್ತೆ. ಆದರೆ ಸ್ವತಃ ಕಾರಖಾನೀಸರನ್ನು ಕೇಳಿದರೆ ಈ 'ಪದ್ಮಶ್ರೀ' ಗಿಂತ ತಮ್ಮ 'ಕಾಕಾ' ಬಿರುದೇ ದೊಡ್ಡದು ಎಂದು ಹೇಳುವರು. ಏಕೆಂದರೆ ಅವರ ಪ್ರೀತಿಯ ಹರಿಜನರು 25 ವರ್ಷಗಳ ಹಿಂದೆಯೇ ಕೊಟ್ಟ ಬಿರುದು ಅದು. ಅಂದಿನಿಂದ ಎಷ್ಟೋ ಜನರಿಗೆ ಗಣೇಶ ಗೋವಿಂದ ಕಾರಖಾನೀಸ ಎಂಬ ಅವರ ನಿಜವಾದ ಹೆಸರು ಸಹ ಮರೆತುಹೋಗಿ ಅವರು ಎಲ್ಲರಿಗೂ 'ಕಾಕಾ' ಆಗಿಬಿಟ್ಟಿದ್ದಾರೆ.

ಮಹಾರಾಷ್ಟ್ರದಲ್ಲಿ ಬಹಳ 'ಕಾಕಾ'ರಿದ್ದಾರೆ, ಆದರೆ ಕರ್ನಾಟಕಕ್ಕೆ ಒಬ್ಬರೇ 'ಕಾಕಾ' ಅವರೇ ಕಾಕಾ ಕಾರಖಾನೀಸ್. ಗತಿಗಾಣದ ಹರಿಜನರಿಗೂ ಮಾನವತೆಯಿಂದ ಪತಿತರಾದ ಅಸಂಖ್ಯ ದೇವದಾಸಿಯರಿಗೂ ಇಂದು ಕರ್ನಾಟಕದಲ್ಲಿ ಮರ್ಯಾದೆಯಿಂದ ಮನುಷ್ಯರಂತೆ, ಸುಶಿಕ್ಷಿತರಂತೆ ಬಾಳಲು ಸಾಧ್ಯವಾಗಿ ಮಾಡಿದ ಕಾರಖಾನೀಸರು ಅವರಿಗೆ ಕಾಕಾ ಆದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಕುಳ್ಳಗಿದ್ದರೂ ಸದೃಢವಾದ ದೇಹ, ಚಿಕ್ಕದಾದರೂ ನೈತಿಕ ತೇಜಸ್ಸಿನಿಂದ ಹೊಳೆಯುವ ಕಣ್ಣುಗಳು, ಧ್ವನಿಯಲ್ಲಿ ಪ್ರೀತಿಕಂಡರೂ ನಿಶ್ಚಲತೆಯ ಪ್ರತೀತಿ. ಒಂದು ಲಂಡ ಪಂಚೆ, ಒಂದು ಬನೀನು, ಒಂದು ಟೋಪಿ, ಮತ್ತು ಒಂದು ಜೋಳಿಗೆ - ಇಷ್ಟೇ ಇವರ ವೇಷ, ಇದೇ ವೇಷದಿಂದ ಪ್ರಧಾನ ಮಂತ್ರಿಗಳನ್ನು ಹಿಡಿದು ಹರಿಜನರವರೆಗೆ ಬೇಕಾದವರನ್ನು ಅವರು ಕಾಣುವರು. ಇಷ್ಟು ಸಲಕರಣೆಯೊ

1959ರ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದದ್ದು

ಡನೆ ಅವರು ಹೊರಟರೆ ಯಾವುದೂ ಕಾಕಾರವರನ್ನು ತಡೆಯಲಾರದು. ಅವರು ಹೆಜ್ಜೆ ಮುಂದಿಟ್ಟ ಮೇಲೆ ಎಂದೂ ಹಿಂದಿರುಗಲಿಕ್ಕಿಲ್ಲ.

## ನಡೆದು ಬಂದ ದಾರಿ

ಕಾಕಾ ಅವರ ನಿಲುವಿನಲ್ಲಿ ಇಷ್ಟೊಂದು ಸ್ಥೈರ್ಯ ಹೇಗೆ ಬಂತು? ಅವರಿಗೆ ಹಣದ ಬಲವೆ? ಜನದ ಬಲವೆ? ಅಪಾರವಾದ 'ವ್ಯವಹಾರ ಚಾತುರ್ಯ'ದ ಬಲವೆ? ಈ ಮೂರರಲ್ಲಿಯೂ ಕಾಕಾ ಕಡುಬಡವರು. ಆದರೆ ಬಾಲಬ್ರಹ್ಮಚಾರಿಯಾದ ಅವರಲ್ಲಿ ಚಾರಿತ್ರ್ಯದ ಬಲವೊಂದಿದೆ. ಎಲ್ಲ ಬಲಗಳನ್ನು ಮೀರಿದ ಅವರ ಈ ಬಲಕ್ಕೆ ಪರಮಾತ್ಮನಲ್ಲಿ ಅಪಾರ ವಿಶ್ವಾಸ, ತಮ್ಮ ಗುರುವಿನಲ್ಲಿಟ್ಟ ಅಚಲ ಭಕ್ತಿ ಇವು ಉಗಮವಾಗಿವೆ. ಸಮಾಜ ಸೇವೆ ಅವರಿಗೊಂದು ಆತ್ಮೋನ್ನತಿಯ ಸಾಧನೆ. ಆತ್ಮಸಂತುಷ್ಟಿಗಾಗಿ ಸಮಾಜಸೇವೆ. ಇಂಥವರಿಗೆ ಧನಬಲ, ಜನಬಲಗಳ ಹವ್ಯಾಸವೆಲ್ಲಿ?

ಕಾಕಾ ಕಾರಖಾನೀಸರ ಸಮಾಜ ಸೇವೆಯ ಸಿದ್ಧಿಗಳು ಇಂದು ವಿಜಾಪುರದಲ್ಲಿ ಹರಿಜನೋದ್ಧಾರಕ್ಕಾಗಿ ದುಡಿಯುವ ಹಲವು ಸಂಸ್ಥೆಗಳ ರೂಪದಲ್ಲಿ ತಲೆಯೆತ್ತಿ ನಿಂತಿವೆ. ಹರಿಜನ ಬಾಲಿಕಾಶ್ರಮ, ಹರಿಜನ ವಿದ್ಯಾರ್ಥಿ ಗೃಹ,



ಹರಿಜನ ವೇಶ್ಯೆಯರನ್ನು ಸನ್ಮಾರ್ಗಕ್ಕೆ ಹಚ್ಚು ತ್ತಿರುವ 'ಅಹಲ್ಯೋದ್ಧಾರ ಮಂದಿರ' ಇವೆಲ್ಲ ನಿಷ್ಕಾಂಚನರಾದ ಕಾರಖಾನೀಸರ ನಿರಂತರ ಶ್ರಮದ ಫಲಗಳು.

ಕೊಲ್ಹಾಪುರ ಸಂಸ್ಥಾನದಲ್ಲಿ 69 ವರ್ಷಗಳ ಹಿಂದೆ ಹುಟ್ಟಿದ ಕಾರಖಾನೀಸರು ಜಮಖಂಡಿ ಯಲ್ಲಿ ಬಾಲ್ಯವನ್ನು ಕಳೆದು ಪುಣೆಯಲ್ಲಿ ಬಿ.ಎ. ಮಾಡಿ ವಕೀಲಿ ಅಭ್ಯಾಸವನ್ನು ಪ್ರಾರಂ ಭಿಸಿದಾಗ ಗಾಂಧೀಜಿಯ ಅಸಹಕಾರದ ಕರೆ ಅವರನ್ನು ಸೆಳೆಯಿತು. 1904ರಿಂದಲೇ ಲೋಕ ಮಾನ್ಯರಿಂದ ಸ್ಫೂರ್ತಿ ಪಡೆದು ಸ್ವದೇಶಿ ಚಳು ವಳಿಯಲ್ಲಿ ಭಾಗವಹಿಸಿದ್ದ ಅವರು ಈಗ ಶಿಕ್ಷಣಕ್ಕೆ ಶರಣು ಹೊಡೆದು ಚಿಂಚವಡದ ರಾಷ್ಟ್ರೀಯ ಶಾಲೆಯಲ್ಲಿ 1918ರಿಂದ 1927ರವ ರೆಗೆ ಮೊದಲು ಅಧ್ಯಾಪಕರಾಗಿ, ಕೊನೆಗೆ ಮುಖ್ಯಾಧ್ಯಾಪಕರಾಗಿ, ವಿದ್ಯಾರ್ಥಿಗಳಲ್ಲಿ ದೇಶಾಭಿಮಾನವನ್ನು ಪ್ರೇರಿಸಿದರು. ಅನಂತರ ಎರಡು ವರ್ಷಗಳನ್ನು ಗಾಂಧೀಜಿಯ ಸಾಬರ ಮತಿ ಆಶ್ರಮದಲ್ಲಿ ಕಳೆದು ಖಾದಿ ಕಾರ್ಯದಲ್ಲಿ ತರಬೇತಿ ಹೊಂದಿ ಖಾದಿ ಸಂಘಟನೆಗಾಗಿ ಕರ್ನಾಟಕಕ್ಕೆ ಪುನಃ ಬಂದರು. ಇದು ಕರ್ನಾಟ ಕದ ಭಾಗ್ಯವೆನ್ನಬೇಕು. ಖಾದಿ ಕಾರ್ಯದ ನೆಪ ದಿಂದ ಅವರು ಕರ್ನಾಟಕಕ್ಕೆ ಬಂದಿರದಿದ್ದರೆ ಇಂದು ಅವರು ಬಹುಶಃ ಮಹಾರಾಷ್ಟ್ರದಲ್ಲಿ ಒಬ್ಬ ಹೆಚ್ಚಿನ ಕಾಕಾ ಆಗಿ ಅಷ್ಟೇ ಹೃತ್ಪೂರ್ವ ಕವಾಗಿ ದುಡಿಯುತ್ತಿದ್ದರು. ಆದರೆ ಕರ್ನಾಟ ಕದ ಹರಿಜನರಿಗೆ ಮಾತ್ರ ಇಂಥ ಕಾಕಾ ದೊರೆ ಯುತ್ತಿರಲಿಲ್ಲ.

ಖಾದಿ ಕಾರ್ಯವನ್ನು ಅವರು 2 ವರ್ಷ ನಡೆಸಿದ್ದರೋ ಇಲ್ಲವೊ 1930ರ ಉಪ್ಪಿನ ಸತ್ಯಾಗ್ರಹ ಅವರನ್ನು ತನ್ನ ಸುಳಿಯಲ್ಲಿ ಎಳೆ ದುಕೊಂಡಿತು. ಅಂಕೋಲೆಯ ಸತ್ಯಾಗ್ರಹ ಶಿಬಿರಾಧಿಪತಿಯಾಗಿ ನಾಲ್ಕು ತಿಂಗಳ ಕಾರಾವಾ ಸವನ್ನು ಅನುಭವಿಸಿದರು. 1932ರಲ್ಲಿ ವಿಜಾ ಪುರ ಜಿಲ್ಲೆಯಲ್ಲಿ ಸೇವಾದಳ ಕಾರ್ಯ ಮಾಡು ತ್ತಿದ್ದ ಅವರಿಗೆ ತಿರುಗಿ ಸೆರೆಮನೆವಾಸವಾ ಯಿತು.

ಅಂಕೋಲೆಯ ಕಾರಾವಾಸ ಕಾಕಾರವರ ಮೇಲೆ ಒಂದು ಪರಿಣಾಮ ಮಾಡಿತು. ಅವ ರಿಗೆ ಚಳಿಜ್ವರ ಬಂದಾಗ್ಗೆ ಸೇವಿಸಿದ ಕ್ವಿನಾ ಯಿನ್ ಅತಿಯಾಗಿ ಅವರ ಕಿವಿಗಳು ಮಂದ ವಾದವು. ಇಂದು ಕೊಳಾಯಿಯ ಸಹಾಯವಿ ಲ್ಲದೆ ಅವರಿಗೆ ಕೇಳಿಸುವುದಿಲ್ಲ. ಆದರೆ ಇದು ಅವರ ವ್ಯಕ್ತಿತ್ವಕ್ಕೆ ಒಂದು ವೈಶಿಷ್ಟ್ಯವನ್ನೇ ಕೊಟ್ಟಿದೆ. ನೀವು ಅವರನ್ನು ಈ ಬಗ್ಗೆ ಕೇಳಿ ದರೆ "ಕಿವಿ ಹೋದದ್ದೇ ಒಳಿತು. ಪರರ ನಿಂದೆ ಅಥವಾ ಮುಖಸ್ತುತಿಗಳನ್ನೂ ಅರ್ಥವಿಲ್ಲದ ಮಾತುಗಳನ್ನೂ ಕೇಳುವುದರಿಂದ ನಾನು ಪಾರಾಗಿದ್ದೇನೆ. ಜಗತ್ತಿನಲ್ಲಿ ಕೇಳುವಂಥ ದೇನೂ ಬಹಳ ಇಲ್ಲ" ಎನ್ನುತ್ತಾರೆ! 1932ರಲ್ಲಿ ಹರಿಜನ ಕಾರ್ಯ ಮಾಡಲು ಕಾರ್ಯ ಕರ್ತರು ಮುಂದೆ ಬರಬೇಕೆಂದು ಗಾಂಧೀಜಿ ಕೇಳಿಕೊಂಡಾಗ ಕಾಕಾ ಅದಕ್ಕೆ ಟೊಂಕ ಕಟ್ಟಿ ದರು. ವಿಜಾಪುರದಲ್ಲಿ ಹರಿಜನ ಸೇವಕ ಸಂಘದ ಸ್ಥಾಪನೆಯಾಗಿ ಅವರು ಅದರ ಕಾರ್ಯ ದರ್ಶಿಗಳಾದರು. ಅಂದಿನಿಂದ ಹರಿಜನರೇ ಕಾರಖಾನೀಸರ ಜೀವವಾಗಿದ್ದಾರೆ.

1933 ಜೂನ್‌ನಲ್ಲಿ ಹರಿಜನ ವಿದ್ಯಾರ್ಥಿ ಗೃಹ ಪ್ರಾರಂಭವಾಯಿತು. ಹರಿಜನ ಬಾಲಕ ರಿಗೆ ಊಟ, ವಸತಿ, ಶಿಕ್ಷಣಗಳ ಸೌಕರ್ಯ ವನ್ನು ಒದಗಿಸುವುದು ಅದರ ಗುರಿ ಯಾಗಿತ್ತು.

ಇಲ್ಲಿತ್ತು ಕಾರಖಾನೀಸರ ಸಮಾಜಸೇವಾ ಕಾಂಕ್ಷೆಯ ಉತ್ಕಟತೆಗೆ ಸರಿದೂಗುವ ಒಂದು ಆಹ್ವಾನ! ಅವರ ಇಷ್ಟಮಿತ್ರರನ್ನೊಳ ಗೊಂಡು ಎಲ್ಲರೂ "ಇದೊಂದು ಹುಚ್ಚು ಕೆಲಸ" ಎಂದವರೇ. ಇದು ಕಾಕಾರವರ ನಿರ್ಧಾರವನ್ನು ಇನ್ನಷ್ಟು ಬಲಪಡಿಸಿತು.

ಮೊದಲನೇ ತೊಡಕೆಂದರೆ ಯಾರನ್ನು ಉದ್ಧರಿಸಬೇಕಾಗಿತ್ತೋ ಅವರಿಗೆ ಉದ್ಧಾರ ಬೇಡವಾಗಿತ್ತು! ಶಿಕ್ಷಣ ಕೊಡಲು ಹರಿಜನ ಹುಡುಗರು ಬೇಕಲ್ಲ, ಆದರೆ ಎಷ್ಟೋ ಹರಿ

ಜನ ತಂದೆತಾಯಿಗಳು ಶಾಲೆಗಾಗಿ ಕಾರಖಾನೀಸರ ಹತ್ತಿರ ತಮ್ಮ ಮಕ್ಕಳನ್ನು ಕಳಿಸಲು ಒಪ್ಪುತ್ತಿರಲಿಲ್ಲ. ಕಾರಖಾನೀಸರು ಊರೂರು ಅಲೆದು ಹರಿಜನರ ಮನೆಮನೆಗಳಿಗೆ ಹೋಗಿ ಅವರು ಅಂದದ್ದನ್ನೆಲ್ಲ ಪ್ರಸಾದವೆಂದು ಸಹಿಸಿಕೊಂಡು ಅವರಿಗೆ ಉಪದೇಶ ಕೊಟ್ಟು ಹುಡುಗರನ್ನು ಕರೆತರುತ್ತಿದ್ದರು. ಇಷ್ಟು ಮಾಡಿದ ಮೇಲೆ ಶಾಲೆ ಶಾಲೆ ಹೋಗಿ ತಮ್ಮ ವಿದ್ಯಾರ್ಥಿಗಳಿಗೆ ಫೀ ಮಾಫಿ, ಅರ್ಧ ಫೀ ಮಾಫಿ ಸಂಪಾದಿಸಬೇಕು. ಆ ಮೇಲೆ ಅವರ ವಿದ್ಯಾಭ್ಯಾಸದ ಮೇಲೆ ಸ್ವತಃ ಲಕ್ಷ್ಯ ಹಾಕಬೇಕು. ಪರೀಕ್ಷೆ ಬಂದಾಗ ತಾವೇ ಇಂಗ್ಲೀಷ್ ಮತ್ತು ಸಂಸ್ಕೃತ ಪಾಠ ಹೇಳಬೇಕು (ಇಂದಿಗೂ ಅವರು ಹೀಗೆ ಮಾಡುತ್ತಿದ್ದಾರೆ). ತಮ್ಮ ನಿರ್ಧಾರಪೂರ್ವಕ ಶಿಕ್ಷಣದಿಂದ ಅವರು ಹರಿಜನ ಹುಡುಗರನ್ನು ಎಷ್ಟು ತರಬೇತು ಮಾಡಿದರೆಂದರೆ ಅನೇಕ ಸಲ ಗೀತಾಪಠನದಲ್ಲಿ ಕಾಕಾರ ಹರಿಜನ ವಿದ್ಯಾರ್ಥಿಗಳು ಇನಾಮು ಕೂಡ ಗಳಿಸಿದರು.

ಇದು ಸಾಲದೆಂಬಂತೆ ಅವರು 1938ರಲ್ಲಿ ಹರಿಜನ ಬಾಲಿಕೆಯರ ಆಶ್ರಮ ನಡೆಸುವ ಭಾರವನ್ನೂ ಕೊರಳಿಗೆ ಹಾಕಿಕೊಂಡರು. ಇಲ್ಲಿ ಅವರಿಗೆ ಇನ್ನಷ್ಟು ಕಷ್ಟಗಳು ಕಾದಿದ್ದವು. ಬಾಲಿಕೆಯರ ಅನ್ನವಸ್ತ್ರ ಶಿಕ್ಷಣಗಳ ಸಮಸ್ಯೆಯಲ್ಲದೆ ಅವರ ವಿವಾಹ ಸಮಸ್ಯೆ ಹಾಗು ಇತರ ಕೌಟುಂಬಿಕ ಪ್ರಶ್ನೆಗಳನ್ನೂ ಕಾಕಾ ಎದುರಿಸಬೇಕಾಗಿ ಬಂತು.

ಇಷ್ಟೆಲ್ಲ ವಿದ್ಯಾರ್ಥಿಗಳ ಊಟ-ವಸತಿಗಳ ವೆಚ್ಚವನ್ನು ಎದುರಿಸುವ ಕಷ್ಟ ಎಲ್ಲಕ್ಕೂ ಶ್ರಮದಾಯಕವಾಗಿತ್ತು. ಆ ಕಾಲದಲ್ಲಿ ಹಳ್ಳಿಹಳ್ಳಿ ತಿರುಗಿ ಹರಿಜನರಿಗಾಗಿ ದವಸ ಧಾನ್ಯಗಳನ್ನು ಕೂಡಿಸಬೇಕು, ಮನೆ ಮಾಲಿಕರಿಂದ ಪುಕ್ಕಟೆಯಾಗಿಯೋ ಅರ್ಧ ಬಾಡಿಗೆಗೋ ಕಟ್ಟಡಗಳನ್ನು ಸಂಪಾದಿಸಬೇಕು. ಕಾಕಾ ಹರಿಜನರ ಮಕ್ಕಳಿಗಾಗಿ ಪಟ್ಟ, ಪಡುತ್ತಿರುವ ಕಷ್ಟ ಯಾವ ತಂದೆಗೂ ಕಡಿಮೆ ಇಲ್ಲವೆಂದು ಹೇಳಬಹುದು.

ಒಮ್ಮೆ ಕಾಕಾ ಅವರು ಸಂಭ್ರಮದಿಂದ ಕೂಗುತ್ತ ಕೈಯಲ್ಲಿ ಒಂದು ಫೇಡೆಯ ಪುಡಿಕೆ ಹಿಡಿದುಕೊಂಡು ನಮ್ಮ ಮನೆಗೆ ಧಾವಿಸುತ್ತ ಬಂದರು. ''ಹಣಮಂತರಾವ್! ಹಣಮಂತರಾವ್! ನಮ್ಮ ಗಜಾಕೋಶ ಬಿ.ಎಸ್‌ಸಿ.ಯೊಳಗೆ ಫರ್ಸ್ಟ್‌ಕ್ಲಾಸ್ ಬಂದಾನ. ಫೇಡೆ ಹಿಡೀರಿ. ಅವನ್ನ ನೀವು ಇಂಗ್ಲಂಡಿಗೆ ಕಳಿಸೂ ವ್ಯವಸ್ಥಾ ಮಾಡಲಿಕ್ಕೆ ಬೇಕು!'' ಎಂದು ಒಂದೇ ಉಸಿರಲ್ಲಿ ನಮ್ಮ ತಂದೆಯವರಾದ ದಿವಂಗತ ಹಣಮಂತರಾಯರಿಗೆ (ಕಾಕಾ ಅವರಿಗೆ ಹಣಮಂತರಾಯರು ಬಾಲ್ಯಮಿತ್ರರು, ಹರಿಜನಕಾರ್ಯದಲ್ಲಿ ಅವರಿಗೆ ಮೊದಲಿಂದ ಬೆಂಬಲ ನಿಂತವರು) ಒಂದೇ ಉಸಿರಲ್ಲಿ ಹೇಳುತ್ತ ನಮ್ಮೆಲ್ಲರ ಬಾಯಲ್ಲಿ ಫೇಡೆ ತುರುಕತೊಡಗಿದರು. ಗಜಾಕೋಶ ಇವರ ಆಶ್ರಮದ ಹರಿಜನ ವಿದ್ಯಾರ್ಥಿ ಎಂದು ಬೇರೆ ಹೇಳಬೇಕಾಗಿಲ್ಲ. ಗಜಾಕೋಶನ ಸ್ವಂತ ತಂದೆಗಾದರೂ ಇಂಥ ಹರ್ಷವಾಯು ಆಗಿತ್ತೋ ಇಲ್ಲವೊ. ಹರಿಜನರು ಇವರನ್ನು ಕಾಕಾ ಎನ್ನದೆ ಹೇಗಿದ್ದಾರು?

ಇಡೀ ಮುಂಬಯಿ ಪ್ರಾಂತದಲ್ಲಿ ಕಾಕಾರವರ ಹರಿಜನ ವಿದ್ಯಾರ್ಥಿ ನಿಲಯವು ಶಿಸ್ತು ಹಾಗು ಪ್ರಗತಿಯಲ್ಲಿ ದ್ವಿತೀಯ ಸ್ಥಾನ ಪಡೆ

ದಿತ್ತು. ಅವರ ಬಾಲಿಕಾಶ್ರಮವೂ ಕಡಿಮೆ ಯಶಸ್ವಿಯಾಗಿರಲಿಲ್ಲ. ಹರಿಜನ ಬಾಲಿಕೆಯರು ಶಿಕ್ಷಣ ಪಡೆದು ಬಿ.ಎ. ಆಗಿ ಇಂಗ್ಲೀಷ್ ಶಾಲೆಯಲ್ಲಿ ಶಿಕ್ಷಕಿಯರಾಗುವುದು ಆ ಮೊದಲು ಕನಸಿನ ಮಾತಾಗಿತ್ತು. ಕಾಕಾ ಅದನ್ನು ನನಸು ಮಾಡಿ ತೋರಿಸಿದರು. ಅಷ್ಟೇಕೆ, ಕಾರಖಾನೀಸರು ಪೋಷಿಸಿದ ಹರಿಜನ ಬಾಲಿಕೆಯೊಬ್ಬಳು ಮುಂದೆ ಕರ್ನಾಟಕ ವಿಶ್ವವಿದ್ಯಾಲಯದ ಸಿನೇಟಿನ ಸದಸ್ಯಳಾದಳು.

ಕಾಕಾರ ತತ್ವನಿಷ್ಠೆ ಅತ್ಯಂತ ಕಠೋರವಾದುದು. ಇದಕ್ಕಾಗಿ ಅವರು ಎಷ್ಟು ಕಷ್ಟವನ್ನೂ ಎದುರಿಸಲು ಸಿದ್ಧರೇ. ಅವರು ಕೈಕೊಂಡ ಕಾರ್ಯಕ್ಕೆ ಆಗ ಹಣದ ಅಡಚಣೆ ನಿತ್ಯದ ಮಾತು. ಆದರೆ ಅವರು ಹರಿಜನ ವಿದ್ಯಾರ್ಥಿಗಳನ್ನು ರಾಜಕೀಯದಿಂದ ಆಲಿಪ್ತವಾಗಿಟ್ಟಿದ್ದರು. ಸ್ವತಃ ಕಾಂಗ್ರೆಸ್ಸಿಗರಾಗಿದ್ದರೂ ತಮ್ಮ ಪೋಷಿತರಿಗೆ ಅದರ ಸ್ಪರ್ಶ ಬರದಂತೆ ಅವರು ಎಚ್ಚರವಾಗಿದ್ದರು. ಹರಿಜನರನ್ನು ನೂಲಲು ಹಚ್ಚಿದರೆ ಇಷ್ಟು ಗ್ರಾಂಟು ಕೊಡುವೆವು ಎಂದು ಒಮ್ಮೆ ಒಂದು ಸಂಸ್ಥೆ ಅವರಿಗೆ ಹೇಳಿತು. ಆದರೆ ಕಾಕಾ ಅದನ್ನು ನಿರಾಕರಿಸಿದರು. "ವಿದ್ಯಾರ್ಥಿಗಳಿಗೆ ನಿತ್ಯ ನೂಲಲು ಹೇಳುವುದರಿಂದ ಅವರಿಗೂ ಕಾಂಗ್ರೆಸ್ಸಿಗೂ ಅಪ್ರತ್ಯಕ್ಷವಾಗಿಯಾದರೂ ಸಂಬಂಧ ಕಲ್ಪಿಸಿದಂತಾಗುವುದು. ಹರಿಜನರನ್ನು ಪರೋಕ್ಷವಾಗಿ ಕೂಡ ನಾನು ರಾಜಕೀಯ ಪಕ್ಷಗಳಿಗಾಗಿ ಉಪಯೋಗಿಸಲಾರೆ. ಅದರಿಂದ ಸೇವಾಧರ್ಮದಲ್ಲಿ ಸ್ವಾರ್ಥ ಪ್ರವೇಶವಾಗುವುದು" ಎಂದುಬಿಟ್ಟರು.

"ಏನು ಕಾಕಾ, ನೀ ಏನೋ ಹರಿಜನರಿಗಾಗಿ ಇಷ್ಟು ಮಾಡುತ್ತೀ, ಆದರೆ ಅವರು ನಿನಗೆ ತಿರುಗಿ ಬೀಳುತ್ತಾರೆ ನೋಡಿಕೋ" ಎಂದು ಕೆಲವರು ಕಾರಖಾನೀಸರನ್ನು ಹೆದರಿಸುತ್ತಿದ್ದರು. ಅದಕ್ಕೆ ಕಾಕಾನ ಉತ್ತರ ಸಿದ್ಧವಾಗಿರುತ್ತಿತ್ತು. "ಅರೆ! ಅವರು ನನಗೆ ತಿರುಗಿಬೀಳುವಷ್ಟು ಗಟ್ಟಿಯಾದರೆ ನನಗೆ ನಿಜವಾಗಿ ಆನಂದವೆನಿಸುತ್ತದೆ. ಅಷ್ಟೇ ಯಾಕೆ, ಅವರು ನನಗೆ ಬೇಕಾದರೆ ಮಚ್ಚೆಯಿಂದ ಹೊಡೆಯಲಿ. ಅವರಿಗೆ ಅಷ್ಟು ಧೈರ್ಯ ಬಂದರೆ ನನ್ನ ಕೆಲಸ ಸಾರ್ಥಕ ಆದ ಹಾಗೆ. ಅಷ್ಟಾದರೆ ಇನ್ನು ಅವರ ಬಗ್ಗೆ ನಾ ಕೆಲಸ ಮಾಡುವ ಅಗತ್ಯ ಉಳಿದಿಲ್ಲ ಅಂತ ಬೇರೆ ಕೆಲಸ ಮಾಡುತ್ತೇನೆ."

ಆದರೆ ಕಾರಖಾನೀಸರ ಸೇವೆಗೆ ಮುಕುಟಪ್ರಾಯವಾದುದೆಂದರೆ ಅವರ 'ಅಹಲ್ಯೋದ್ಧಾರ ಮಂದಿರ.' ದೇವದಾಸಿಯರಾಗಿ ದೇಹವಿಕ್ರಯದಿಂದ ಜೀವಿಸುವ ಹರಿಜನ ಮಹಿಳೆಯರನ್ನವರು ಇಲ್ಲಿ ಗೌರವದ ಬಾಳುವೆಗೆ ತಿರುಗಿಸಿ ಹಿಂದೂ ಸಮಾಜದ ಅತ್ಯಂತ ಕಲಂಕಿತ ಭಾಗವೊಂದನ್ನು ತೊಡೆದುಹಾಕುತ್ತಿದ್ದಾರೆ. ಅದು ಪ್ರಾರಂಭವಾದದ್ದೂ ಒಂದು ಮಾರ್ಮಿಕ ಪ್ರಸಂಗವೇ.

ಒಂದು ದಿನ ಕಾಕಾರ ಹರಿಜನ ಬಾಲಿಕಾಶ್ರಮಕ್ಕೆ ಇಬ್ಬರು ಮಹಿಳೆಯರು ಬಂದು, "ನಮಗೂ ಇಲ್ಲಿ ಆಶ್ರಯ ಕೊಡಬೇಕು" ಎಂದು ಕೇಳಿಕೊಂಡರು.

"ನೀವು ಯಾರು? ಎಲ್ಲಿಯವರು?" ಎಂದು ಕಾಕಾ ಕೇಳಿದರು.

"ನಾವು ದೇವದಾಸಿಯರು. ಆರೆಂಟು ವರ್ಷಗಳಿಂದ ನಾವು ಆ ನರಕದಲ್ಲಿ ಗೋಳಾಡಿ ಹೊಸ ದಾರಿ ಕಾಣಬೇಕೆಂದು ನಿಮ್ಮಲ್ಲಿಗೆ ಬಂದಿದ್ದೇವೆ."

ಕಾಕಾ ಇದಕ್ಕೆ ಸಿದ್ಧರಾಗಿರಲಿಲ್ಲ. "ಇಲ್ಲಿಗೇಕೆ ಬಂದಿರಿ? ಇದು ಕೇವಲ ವಿದ್ಯಾರ್ಥಿನಿಯರಿಗಾಗಿ. ಇಲ್ಲಿ ನಿಮ್ಮನ್ನು ಹೇಗೆ ತೆಗೆದುಕೊಳ್ಳಲಿ?" ಎಂದರವರು.

"ಹಾಗಾದರೆ ನಮಗೆ ಆಶ್ರಯ ಕೊಡಲಾರಿರಾ? ಪತಿತರಾದವರಿಗೆ ಪಶ್ಚಾತ್ತಾಪಕ್ಕೆ ಕೂಡ ಮಾರ್ಗವಿಲ್ಲವೆ? ಆ ನರಕಕ್ಕೇ ನಾವು ತಿರುಗಿ ಹೋಗಬೇಕೆ?"

ಕಾಕಾರ ಹೃದಯದ ತಂತಿಯನ್ನು ಈ ದೀನ ವಾಣಿ ಮೀಟಿತು. ಅವರು ಆ ಹೆಂಗಸ

ರನ್ನು ಅಲ್ಲಿಯೇ ಇಟ್ಟುಕೊಂಡು ತಮ್ಮ ಮಿತ್ರರನ್ನು ವಿಚಾರಿಸಿದರು. ದಿ.ಹಣಮಂತ ರಾಯರು ಹರಿಜನ ಸೇವಾ ಸಂಘವು ಈ ಗರ್ಹಣೀಯ ದೇವದಾಸಿ ಪದ್ಧತಿಯಿಂದ ಹರಿಜನ ಮಹಿಳೆಯರನ್ನು ಉದ್ಧರಿಸಬೇಕೆಂದು ಸೂಚಿಸಿದರು. ಶ್ರೀ ದಿವಾಕರರೂ ಹಾಗೆಯೇ ಸಲಹೆ ಕೊಟ್ಟರು. ಗಾಂಧೀಜಿಯನ್ನು ಕೇಳಿದಾಗ "ಈ ದೆಶೆಯಲ್ಲಿ ಕೆಲಸ ಮಾಡುವುದು ಅಗತ್ಯ. ಆದರೆ ನೀವು ಬಹುಜಾಗ್ರತೆಯಿಂದ ಹೆಜ್ಜೆ ಇಡಬೇಕು" ಎಂದು ಎಚ್ಚರಿಕೆ ಕೊಟ್ಟರು.

ಇದು ಕಾಕಾ ಕಾರಖಾನೀಸರ ಜೀವನದ ಅತಿ ಗಂಭೀರವಾದ ಸಾಹಸವಾಗಿತ್ತು. ಇಲ್ಲಿ ಅವರು ವಿರೋಧವನ್ನು ಮಾತ್ರವಲ್ಲ, ಕೀಳು ನಾಲಗೆಗಳ ಹೇಯ ನುಡಿಗಳನ್ನು ಕೂಡ ಎದುರಿಸುವ ಭಯವಿತ್ತು. ಆದರೆ ತಮ್ಮ ಸ್ವಾಭಾವಿಕ ದಾರ್ಢ್ಯದಿಂದ ಅವರು ದೇವದಾಸಿಯರ ಸಮಸ್ಯೆಯನ್ನೆದುರಿಸಿದರು. ಅವರಿಗೆ ಆಶ್ರಯವಿತ್ತು, ಅವರಿಗಾಗಿ ಪ್ರತ್ಯೇಕ ವಸತಿ ಗೃಹವನ್ನು ಏರ್ಪಡಿಸಿದರು. ಕೆಲ ಕಾಲ ಇಡೀ ಸಮಾಜವೇ ಕಾಕಾರ ಮೇಲೆ ತಿರುಗಿ ಬಿತ್ತು. ಕೆರಳಿದವರಲ್ಲಿ "ಸಂಭಾವಿತ" ಗೃಹಸ್ಥರು ಮಾತ್ರ ಇರಲಿಲ್ಲ, ಸ್ವತಃ ಹರಿಜನರು "ದೇವರಿಗೆ ಬಿಟ್ಟ ನಮ್ಮ ಹುಡುಗಿಯರನ್ನು ಕಾಕಾರವರು ಉದ್ಧರಿಸಹೊರಡುವುದೆಂದರೆ ನಮ್ಮ ಧರ್ಮದಲ್ಲಿ ಕೈಹಾಕಿದಂತೆ" ಎಂದು ಉರಿದೆದ್ದರು. ದೇವರ ಹೆಸರಿನಲ್ಲಿ ನಿಷ್ಪಾಪ ಬಾಲಿಕೆಯರನ್ನು ವೇಶ್ಯಾವೃತ್ತಿಗೆಳೆಯುವುದು ಪಾಪ ಎಂದು ಕಾಕಾ ಹೇಳಿದರೆ ಅವರು ಕೇಳಲಿಲ್ಲ. ಅವರ ಹಿಂದೆ ದೇವದಾಸಿ ಪದ್ಧತಿಯಿಂದ ವಿಲಾಸಭೋಗ ಮಾಡುತ್ತಿದ್ದ ಸವರ್ಣೀಯರ ಪ್ರೋತ್ಸಾಹವಿತ್ತು. ಕೆಲ ಹಳ್ಳಿಗಳಲ್ಲಿ "ಕಾಕಾ, ಜೋಳ ಬೇಕಾದರೆ ಕೇಳಿರಿ ಕೊಡುತ್ತೇವೆ. ಆದರೆ ನಮ್ಮ ಹಳ್ಳಿಯ ದೇವದಾಸಿಯರ ವಿಷಯಲ್ಲಿ ಕೈ ಹಾಕಿದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ" ಎಂದು ಎಚ್ಚರಿಕೆ ಕೂಡ ಬಂತು.

ಆದರೆ ಕಾಕಾ ಅಂಜುವರೆ? ಅವರು ಆಗಿನ ಮುಂಬಯಿ ಸರಕಾರನ್ನು ಪ್ರೇರಿಸಿ "ದೇವದಾಸಿ ಬಿಡು"ವವರಿಗೆ ಉಗ್ರಶಿಕ್ಷೆ ವಿಧಿಸುವ ಕಾಯದೆ ಮಾಡಿಸಿದರು. ಇದರಲ್ಲಿ ಸವರ್ಣೀಯರ ನಿರ್ಲಜ್ಜ ಸ್ವಾರ್ಥವಿರುವುದನ್ನು ಬಯಲಿಗೆಳೆದರು. (ಇದರಿಂದ ಹಲವರ ವೈರವನ್ನೂ ಸಂಪಾದಿಸಿದರು.) ತಾವು ಆಶ್ರಯವಿತ್ತ ದೇವದಾಸಿಯರಿಗೆ ಊರಲ್ಲಿಯ ಸುಶಿಕ್ಷಿತ ಸ್ತ್ರೀಯರಿಂದ ಸಂಸ್ಕಾರವನ್ನು ಕೊಡಿಸಿದರು. ಅಷ್ಟೇಕೆ, ಅವರಿಗೆ ಯೋಗ್ಯ ವರರನ್ನು ಹುಡುಕಿ ಮದುವೆ ಕೂಡ ಮಾಡಿದರು.

ಬೇಕಾದವರಿಗೆ ಬೇಕಾದಂತೆ ಮಾತಾಡಿ, ದೊಡ್ಡವರ ಬಾಲ ಹಿಡಿದು ಸಂಸ್ಥೆಗಳಿಗೆ ಹಣ ದೊರಕಿಸುವವರೆಷ್ಟೋ ಜನ. ಆದರೆ ಕಾಕಾ ಇಂಥ ಇಕ್ಕಟ್ಟಿನಲ್ಲಿಯೂ ನಿಷ್ಠುರವಾದಿಗಳು. ಇಂದು ಅವರ ಕಾರ್ಯ ನೋಡಿ ಅವರಿಗೆ ಆಗಾಗ್ಗೆ ಸರಕಾರದ ಧನಸಹಾಯ ದೊರೆಯುತ್ತದೆ. ಆದರೆ ಅವರು ಹಣದ ಕೊರತೆಯಿಂದ ಬಳಲುತ್ತಿದ್ದಾಗಲೂ ಅವರ ಖಂಡಿತವಾದ ಈಗಿನಂತೆಯೇ ಇತ್ತು.

ಒಮ್ಮೆ ಇದರ ಅನುಭವ ಒಬ್ಬ ದೊಡ್ಡ ಅಧಿಕಾರಿಗೆ ಬಂತು. ವರ್ಗಣಿ ಕೇಳಲು ಹೋದಾಗ ಅವರು ಕಾಕಾಗೆ "ವರ್ಗಣಿಗೇಕೆ ಬರುತ್ತೀರಿ? ನಾನಿರುವ ತಾಲೂಕಿಗೆ ಬನ್ನಿ. ಬೇಕೆಂಬಷ್ಟು ಜೋಳ ಕೊಡಿಸಿಬಿಡುತ್ತೇನೆ" ಎಂದರು. ಆಗಲಿ ಎಂದು ಕಾಕಾ ಅವರು ಹೇಳಿದ ದಿನ, ಅವರ ತಾಲೂಕಿಗೆ ಹೋದರು. ಆದರೆ ಎರಡು ದಿನವಾದರೂ ಅಧಿಕಾರಿಯ ಸಂಚಾರ ಪ್ರಾರಂಭವೇ ಆಗಲಿಲ್ಲ. "ಪ್ರಾಂತ ಸಾಹೇಬರು ಬರುವವರಿದ್ದಾರೆ. ಈಗ ಪುರಸೊತ್ತಿಲ್ಲ. ಇಂಥಾ ತಾರೀಕಿಗೆ ಬನ್ನಿ" ಎಂದು ಮತ್ತೊಂದು ಗಡುವು ಹಾಕಿದರು. ಕಾಕಾ ಆ ತಾರೀಕಿಗೆ ಸರಿಯಾಗಿ ಅಧಿಕಾರಿಯ ಮುಂದೆ ಮತ್ತೆ ಪ್ರತ್ಯಕ್ಷರಾದರು. ಈ ಸಲವೂ ಸಂಚಾರ ಪ್ರಾರಂಭವಾಗಲಿಲ್ಲ; ಜೋಳವೂ ಕೂಡ ಲಿಲ್ಲ. ಅಧಿಕಾರಿ, "ನೋಡಿರಿ ಕಾಕಾ,

ಈಗ..'' ಎಂದು ಪ್ರಾರಂಭಿಸುತ್ತಲೇ ಕಾಕಾ ಅವರನ್ನು ನಡುವೆ ತಡೆದು, ''ಏನೂ ನೋಡುವುದು ಬೇಡ. ಎರಡು ಸಲ ನಿಮ್ಮಲ್ಲಿಗೆ ವ್ಯರ್ಥವಾಗಿ ಬಂದಿದ್ದೇನೆ. ಅದಕ್ಕೆ ರೇಲ್ವೇ ಚಾರ್ಜು ರೂ. 8-10-0 ಆಗಿದೆ. ಅಷ್ಟು ಕೊಟ್ಟು ಬಿಡಿರಿ. ಊಟವನ್ನು ಸ್ನೇಹಿತರಲ್ಲಿ ಮಾಡಿದ್ದೇನೆ. ಅದರ ಖರ್ಚು ನೀವು ಕೊಡಬೇಕಿಲ್ಲ. ಆದರೆ ನಿರರ್ಥಕವಾದ ಪ್ರಯಾಣದ ವೆಚ್ಚವನ್ನು ಹರಿಜನ ಸಂಘದ ಮೇಲೆ ಹಾಕಲಾರೆ'' ಎಂದು ಅರಳು ಹುರಿದಂತೆ ಹೇಳಿಬಿಟ್ಟರು. ಅಧಿಕಾರಿ ತೆಪ್ಪಗಾಗಿ ಇವರಿಗೆ ಹಣ ಕೊಟ್ಟು ಕಳಿಸಬೇಕಾಯಿತು.

ಅವರು ಗಾಂಧೀಜಿಯೊಡನೆಯೂ ಇಂಥ ನಿರ್ದಾಕ್ಷಿಣ್ಯ ವೃತ್ತಿಯನ್ನು ತೋರಿಸಿದ ಪ್ರಸಂಗವೊಂದಿದೆ. 1927ರಲ್ಲಿ ಸಾಬರಮತಿ ಆಶ್ರಮದಲ್ಲಿದ್ದಾಗ ಆಶ್ರಮವಾಸಿಗಳೆಲ್ಲ ತಮ್ಮ ವೈಯಕ್ತಿಕ ದಿನಚರಿಯನ್ನು ಕಾರ್ಯದರ್ಶಿಗೆ ತೋರಿಸಬೇಕೆಂದು ನಿಯಮ ಮಾಡಲ್ಪಟ್ಟಿತು. ಕಾರಖಾನೀಸರು ತಮ್ಮ ಖಾಸಗಿ ದಿನಚರಿ ತೋರಿಸಲು ನಿರಾಕರಿಸಿದರು. ದೂರು ಗಾಂಧೀಜಿಯವರೆಗೂ ಹೋಯಿತು. ಗಾಂಧೀಜಿ ಕರೆದು ಕೇಳಿದಾಗ, ''ಹೌದು, ಆಶ್ರಮದಲ್ಲಿ ಯಾವ ಕೆಲಸ ಕೊಟ್ಟರೂ ಅದನ್ನು ಪೂರೈಸಿ ನಿಮಗೆ ವರದಿ ಒಪ್ಪಿಸುವೆ. ಆದರೆ ನನ್ನ ವೈಯಕ್ತಿಕ ದಿನಚರಿ ನನ್ನ ಸ್ವಂತ ಆತ್ಮದ್ದು. ಅದನ್ನು ನನ್ನ ಆಧ್ಯಾತ್ಮಿಕ ಗುರುವಿಗೆ ಮಾತ್ರ ತೋರಿಸಬಲ್ಲೆ,'' ಎಂದು ಖಡಾಖಂಡಿತವಾಗಿ ಹೇಳಿದರು.

''ಇದರಿಂದ ನೀವು ಆಶ್ರಮದ ಶಿಸ್ತು ಮುರಿದಂತಾಗುವುದಿಲ್ಲವೆ?''

''ಇಲ್ಲ. ವೈಯಕ್ತಿಕ ದಿನಚರಿಯನ್ನು ಬೇಕಾದವರಿಗೆ ತೋರಿಸಬೇಕೆಂದು ನಿಯಮ ಮಾಡಿದರೆ ಅದರಲ್ಲಿ ಸತ್ಯವನ್ನು ಬಚ್ಚಿಟ್ಟು ಮಿಥ್ಯೆಯನ್ನು ಬರೆಯುವ ಪ್ರವೃತ್ತಿಯುಂಟಾಗಬಹುದು'' ಎಂದರು ಕಾಕಾ. ಕೊನೆಗೆ ಗಾಂಧೀಜಿ ಕಾಕಾರನ್ನು ದಿನಚರಿ ತೋರಿಸುವ ನಿಯಮದಿಂದ ವಿನಾಯತಿಪಡಿಸಿದರು.

ಕಾಕಾ ಕಾರಖಾನೀಸರ 26 ವರ್ಷಗಳ ಸೇವೆಗೆ ಜೀವಂತ ಸಾಕ್ಷಿಯಾಗಿ ಸಾವಿರಾರು ಸುಶಿಕ್ಷಿತ ಹರಿಜನ ತರುಣ-ತರುಣಿಯರಿದ್ದಾರೆ. ಉದ್ಧಾರಗೊಂಡು ಸಂಸಾರವಂದಿಗರಾದ ನೂರಾರು 'ಅಹಲ್ಯೆ'ಯರಿದ್ದಾರೆ. 69ನೇ ವಯಸ್ಸಿನಲ್ಲಿ 20ರ ತರುಣರಿಗಿಂತಲೂ ಉತ್ಸಾಹದಿಂದ ದುಡಿಯುವ ಕಾಕಾರನ್ನು ಸರಿಗಟ್ಟುವವರು ತೀರ ವಿರಳ. ಅವರ ಕಠೋರ ಹೊರ ಆವರಣದೊಳಗೆ ಹುದುಗಿರುವ ಮೃದುವಾದ ಹೃದಯಪುಷ್ಪದ ಪರಿಮಳವು ಪತಿತರನ್ನು ಪಾವನಗೊಳಿಸಿದೆ. ●

## ಕಾಳಜಿ

*ಸೇಂಟ್ ಮಾರ್ಥಾ ಆಸ್ಪತ್ರೆಯಲ್ಲಿ ನಡೆದ ಘಟನೆ. ಪ್ರತಿ ಗುರುವಾರ ಸಂಜೆ ರಾ.ಶಿ. ಇ.ಎನ್.ಟಿ. ಆಪರೇಶನ್ ಮಾಡಲು ಆಸ್ಪತ್ರೆಗೆ ಹೋಗಿ ಅಲ್ಲಿ ಬಡವರಿಗೆ ಉಚಿತವಾಗಿ ಶಸ್ತ್ರಚಿಕಿತ್ಸೆ ಮಾಡುತ್ತಿದ್ದರು. ಒಂದು ದಿನ ಆಪರೇಶನ್ ಆದ ಮೇಲೆ ಸೆಂಚುರಿ ಕ್ಲಬ್‌ನಲ್ಲಿ ಟೆನಿಸ್ ಆಡಬೇಕೆಂದು ಕ್ಯಾನ್‌ವಾಸ್ ಷೂಸ್ ಧರಿಸಿದ್ದ ಅವರು ಆಪರೇಷನ್‌ನಲ್ಲಿ ಮಗ್ನರಾಗಿದ್ದಾಗ ಕಾಲಬಳಿ ಮೆಲ್ಲನೆ ಏನೋ ಸುಳಿದಾಡಿದ ಹಾಗೆ ಬಗ್ಗಿದರೆ ಕಂಡದ್ದೇನು? ಓ.ಟಿ.ಯ ಮೇಲ್ವಿಚಾರಕಿಯನ್ನು ನೋಡಿಕೊಳ್ಳುತ್ತಿದ್ದ ಮದರ್ ಹತ್ತಿಯನ್ನು ಲೋಶನ್ನಿನಲ್ಲಿ ಅದ್ದಿಕೊಂಡು ಟೆನಿಸ್ ಷೂಸ್ ಕೊಳೆಯಾಗಬಾರದೆಂದು ಕ್ಯಾನ್‌ವಾಸ್ ಷೂಸ್ ಮೇಲೆ ಆಪರೇಶನ್ ಮಾಡುವಾಗ ಬಿದ್ದ ರಕ್ತದ ಹನಿಗಳನ್ನು ಒರೆಸುತ್ತಿದ್ದರಂತೆ. ಮದರ್ ತನ್ನ ಬಗ್ಗೆ ತೋರಿದ ಕಳಕಳಿಯನ್ನು ಕಂಡು ನಾವೆಲ್ಲ ಹಾಗಿರಲು ಕಲಿಯಬೇಕು ಎಂದು ಹೃದಯ ತುಂಬಿ ನುಡಿದಿದ್ದರು ರಾ.ಶಿ.*

*– ರಾಜೇಶ್ವರಿ ಇಂದಾಜೆ*

# ಚಿಂತಾ ದಹತಿ ಜೀವಿತಂ

ಶವವನ್ನು ದಹಿಸುವ ಬೆಂಕಿ ಹಾಗೂ ಮಾನಸಿಕ ವೇದನೆ ಇವೆರಡರಲ್ಲಿ ಯಾವುದು ಹೆಚ್ಚು ಅಪಾಯಕರ?

ಈ ಜೀವನ್ಮರಣಗಳ ಮೂಲಭೂತ ಪ್ರಶ್ನೆಗೆ ಉತ್ತರ ಹುಡುಕುವ ಪ್ರಸಂಗ ಇತ್ತೀಚೆಗೆ ಸರ್ವೋನ್ನತ ನ್ಯಾಯಾಧೀಶರ ಮುಂದೆ ಬಂತು!

ಹದಿಮೂರು ವರ್ಷಗಳ ಹಿಂದೆ ಉತ್ತರ ಪ್ರದೇಶದ ಮೂಲಚಂದ ಎಂಬುವವನ ಇಬ್ಬರು ಮಕ್ಕಳಾದ ದಯಾರಾಮ್ ಮತ್ತು ಗ್ಯಾಸೀರಾಮ ಇವರಿಬ್ಬರೂ ಸೇರಿ, ಜಮೀನುಗಳ ಜಗಳದಲ್ಲಿ 'ಅಮೀನ್' ಎಂಬ ಬೇಲೀಫನ ಕುತ್ತಿಗೆಯನ್ನು ತುಂಡರಿಸಿದ್ದರು. ಈ ಅಮಾನುಷ ಕೊಲೆಗೆ ಕಾರಣ ಸರಕಾರದ ಕರ ತುಂಬದಿದ್ದುದಕ್ಕಾಗಿ ಈ ಇಬ್ಬರ ಜಮೀನನ್ನು ಕೋರ್ಟಿನ ಬೇಲಿಫ್ ಬಹಿರಂಗ ಹರಾಜು ಮಾಡಿದ್ದು!

ನಾಲ್ಕು ವರ್ಷಗಳವರೆಗೆ ಸುಪ್ರೀಂ ಕೋರ್ಟ ತನಕ ದಾವೆ ನಡೆದು, ಸುಪ್ರೀಂ ಕೋರ್ಟು ಗ್ಯಾಸೀರಾಮನಿಗೆ ಕೆಳಗಿನ ಕೋರ್ಟುಗಳು ವಿಧಿಸಿದ್ದ ಮರಣದಂಡನೆಯ ಶಿಕ್ಷೆಯನ್ನು ಖಚಿತಪಡಿಸಿತು.

ಆದರೆ ಗ್ಯಾಸೀರಾಮನ ಆಯುಷ್ಯವಿನ್ನೂ ಗಟ್ಟಿಯಾಗಿತ್ತು.

ಆತ ತನ್ನ ಹೋರಾಟದ ಕಟ್ಟಕಡೆಯ ಮೆಟ್ಟಿಲನ್ನು ತುಳಿಯಲು ನಿರ್ಧರಿಸಿ ತನಗಿತ್ತ ಮರಣದಂಡನೆಯನ್ನು ರದ್ದು ಮಾಡಬೇಕೆಂದು ರಾಷ್ಟ್ರಪತಿಗಳಿಗೆ ಒಂದು ಅರ್ಜಿ ಸಲ್ಲಿಸಿದ. ಅವರು ಮರಣದಂಡನೆಯನ್ನು ಖಚಿತಪಡಿಸಿದರೂ ಪಾರಾದ!

ಹೇಗೆ?

ಗ್ಯಾಸೀರಾಮನು ರಾಷ್ಟ್ರಪತಿಗಳಿಗೆ ಸಲ್ಲಿಸಿದ ಕ್ಷಮಾದಾನದ ಅರ್ಜಿ ಉತ್ತರ ಪ್ರದೇಶ ಸರ್ಕಾರ ಹಾಗೂ ರಾಷ್ಟ್ರಪತಿಗಳ ಕಾರ್ಯಾಲಯಗಳಲ್ಲಿ 'ಸುದೀರ್ಘ' ವಿಶ್ರಾಂತಿ ಪಡೆಯುತ್ತಾ, ನಿದ್ರಿಸಹತ್ತಿತ್ತು!

ಸಾಕ್ಷಾತ್ ಕುಂಭಕರ್ಣನದೇ ನಿದ್ದೆ!!

ಪೂರ್ತಿ ಒಂಭತ್ತು ವರ್ಷಗಳ ನಂತರ ರಾಷ್ಟ್ರಪತಿಗಳ ಆಜ್ಞೆ, ಹೊರಬಿತ್ತು, ''ಗ್ಯಾಸೀರಾಮನನ್ನು ಗಲ್ಲಿಗೇರಿಸಿರಿ,'' ಎಂದು!!

ಗ್ಯಾಸೀರಾಮ ಬಲು ಘಾಟಿ! ''ತನಗೆ ಮರಣದಂಡನೆಯಾಗುವುದು ಎಂಬ ಒಂಭತ್ತು ವರ್ಷಗಳ ಯಾತನೆ, ವೇದನೆ, ಪ್ರತ್ಯಕ್ಷ ಮರಣ ದಂಡನೆಗಿಂತ ಭೀಕರವಾದುದು, ಆದ್ದರಿಂದ ಒಂಭತ್ತು ವರ್ಷಗಳ ಈ ಮಾನಸಿಕ ವೇದನೆಯನ್ನು ಪರಿಗಣಿಸಿ ನನ್ನನ್ನು ಮರಣ ದಂಡನೆಯಿಂದ ಮುಕ್ತಮಾಡಿ ಜೀವದಾನ ಮಾಡಬೇಕು!!'' ಎಂದು ಆತ ಸುಪ್ರೀಂ ಕೋರ್ಟಿಗೆ ಮತ್ತೊಂದು ಅರ್ಜಿ ಸಲ್ಲಿಸಿದ.

''ಹೌದೆಂದು'' ಗ್ಯಾಸೀರಾಮನ ಅಪೀಲನ್ನು ಸುಪ್ರೀಂ ಕೋರ್ಟು ಎತ್ತಿ ಹಿಡಿದು ಆತನಿಗೆ ಜೀವದಾನ ಮಾಡಿತು!!

ನ್ಯಾಯಾಧೀಶರಾದ ಶ್ರೀ ಸವ್ಯಸಾಚಿ ಮುಕರ್ಜಿ, ಹಾಗೂ ಶ್ರೀ ಬಂಕಿಂ ಚಂದ್ರ ರೇ ಅವರು ತಮ್ಮ ತೀರ್ಪು ಕೊಡುತ್ತಾ, ''ಶವವನ್ನು ದಹಿಸುವ ಅಗ್ನಿಗಿಂತ ಮನಸ್ಸನ್ನು ಸುಡುವ ಬೆಂಕಿ ಭೀಕರವಾದುದು. ಹೆಣವನ್ನು ಸುಡುವ ಬೆಂಕಿ ನಿರ್ಜೀವ ದೇಹವನ್ನು ಮಾತ್ರ ಸುಟ್ಟರೆ ಮಾನಸಿಕ ವೇದನೆ ಎಂಬ ಭಯಂಕರ ಬೆಂಕಿ ಜೀವವನ್ನೇ ಸುಟ್ಟುಬಿಡುವಂತಹದು! ಗ್ಯಾಸೀರಾಮ ಇಂತಹ ಮಾನಸಿಕ ವೇದನೆಯನ್ನು ಒಂಭತ್ತು ವರ್ಷ ಭೋಗಿಸಿದ್ದಾನೆ. ಆದ್ದರಿಂದ ಆತನಿಗೀಗ ಮರಣದಂಡನೆ ಸಲ್ಲ!!'' ಎಂದು ಹೇಳಿದರು.

ವಾಸುದೇವ ರಾ.ಕಲಘಟಗಿ

## ದಂಡದ ವಿಸ್ತರಣೆ - ಮಧುರದ ಅನಾದಿತನ

ಒಂದು ನೂರು ರೂಪಾಯಿ "ದಂಡ" ಹಾಕಿದರು ಎನ್ನುತ್ತೇವೆ. ಮಾಡಿದ ಯಾವುದೋ ತಪ್ಪಿಗಾಗಿ ಸರಕಾರ ಅಥವಾ ಯಾವುದೇ ಅಧಿಕಾರ ಹೊಂದಿದ ಅಧಿಕಾರಿ ಇಷ್ಟು ಹಣವನ್ನು ವಸೂಲು ಮಾಡಿ ಅಪರಾಧಿಯನ್ನು ಬಿಟ್ಟ ಎಂಬುದು ಅಭಿಪ್ರಾಯ. "ದಂಡ" ಎಂಬ ಪದದ ಮೂಲಾರ್ಥ ಬಡಿಗೆ ಅಥವಾ ಕೋಲು. ಹೀಗೆ ದಂಡ ಎಂದರೆ ದೈಹಿಕ ಶಿಕ್ಷೆಯೇ ಸೈ. ಅಪರಾಧಿಗೆ ಕೊಡುವ ಪೆಟ್ಟೇ ನಿಜವಾಗಿ ದಂಡ; ಹಾಗೆ ಕೊಡುವ ಶಿಕ್ಷೆಯ ಪ್ರಕ್ರಿಯೆ "ದಂಡನೆ". "ಮರಣ ದಂಡನೆ"ಯೆಂದರೆ ಘೋರ ಅಪರಾಧಕ್ಕೆ ಕೊಡುವ ಪರಮ ಶಾರೀರಿಕ ಶಿಕ್ಷೆ. ಅದಕ್ಕೆ ಕಡಿಮೆ ಮಟ್ಟದ ಅಪರಾಧಕ್ಕೆ ಸೆರೆಮನೆಯ ದಂಡನೆ ಕೊಡಬಹುದು. ಅಥವಾ ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿದ್ದಂತೆ ಕೊರಡೆಯೇಟು ಕೊಡುವುದೂ ದಂಡನೆಯೇ. ಚಿಲ್ಲರೆ ಅಪರಾಧಗಳಿಗೆ ಇಂಥ ದಂಡನೆಯ ಬದಲಿಗೆ ಆರ್ಥಿಕ ದಂಡನೆ ಕೊಡುವುದು ಅದರಲ್ಲಿ ಬೆತ್ತದ ಏಟು ಸೇರಿರದಿದ್ದರೂ ಅದು ದಂಡನೆಯೇ. ಇದು ವಿಸ್ತರಣೆಯಿಂದ ರೂಪುಗೊಂಡ ಗೌಣಾರ್ಥ. ಇದಲ್ಲದೆ ಬರೆಯ "ಛೀಮಾರಿ" ಹಾಕುವುದಕ್ಕೆ "ವಾಗ್ದಂಡ" ಅಥವಾ "ವಾಗ್ದಂಡನೆ" ಎಂದು ಶಾಸ್ತ್ರಗಳು ಹೆಸರಿಟ್ಟವೆ. ಕಡೆಗೀಗ ಬಡಿಗೆ ಉಪಯೋಗಿಸುವುದಕ್ಕೆ "ದಂಡ"ವೆಂಬ ಹೆಸರು ತಪ್ಪಿಯೇ ಹೋಗಿದೆ. ಬಂಧನದಲ್ಲಿಡುವುದು ಕೂಡ ಹಾಗೆಯೆ. ಅವಕ್ಕೆಲ್ಲ "ಶಿಕ್ಷೆ" ಎಂಬ ಶಬ್ದ ಬಳಕೆಗೆ ಬಂದಿದೆ.

ಈ "ದಂಡ" ಶಬ್ದ ದೇಶದ ಎಲ್ಲ ಕಡೆ ಆರ್ಥಿಕ ದಂಡವೆಂಬ ಅರ್ಥದಲ್ಲಿ ಪ್ರಯೋಗದಲ್ಲಿಲ್ಲ. ದಕ್ಷಿಣ ಕನ್ನಡದಲ್ಲಿ, ಮತ್ತು ನನಗೆ ತಿಳಿದ ಮಟ್ಟಿಗೆ ಕೇರಳದಲ್ಲಿ ಕೂಡ "ಅಪರಾಧ" ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ನಾಲ್ಕು ರೂಪಾಯಿ ಅಪರಾಧ ಕೊಡಬೇಕಾಯಿತು ಎನ್ನುತ್ತಾರೆ. ಅಪರಾಧ ಎಂದರೆ ಎಲ್ಲರಿಗೂ ಗೊತ್ತಿರುವಂತೆ "ತಪ್ಪು". "ರಾಧನ" ಅಲ್ಲದ್ದು "ಅಪರಾಧ". "ರಾಧ್" ಧಾತುವಿಗೆ ಸಾಧಿಸು, ಮೆಚ್ಚಿಸು, ಸಮಾಧಾನಪಡಿಸು ಇತ್ಯಾದಿ ಅರ್ಥಗಳು ವೇದಕಾಲದಿಂದ ನಡೆದು ಬಂದವು. ಮೆಚ್ಚದಿರುವಂಥ ಕೃತ್ಯ ಅಪರಾಧ. ಅಕೃತ್ಯ ಅನ್ನಿ. ಅಕೃತ್ಯಕ್ಕೆ ಕೊಡುವ ಶಿಕ್ಷೆಯೂ ಅಪರಾಧವೆಂಬರ್ಥವನ್ನು ಸಂಪಾದಿಸಿಕೊಂಡಿತು, ಕೆಲ ಪ್ರದೇಶಗಳಲ್ಲಿ ಮಾತ್ರ ಅನ್ನಿ.

ಇನ್ನು "ಶಿಕ್ಷಾ" ಎನ್ನುವುದೂ ನೇರವಾಗಿ ದಂಡನೆಯೆಂಬರ್ಥದ ಪದವಲ್ಲ. "ಶಿಕ್ಷೆಗೆ ಕಲಿಸು, ತರಬೇತು ಮಾಡು, ಸರಿದಾರಿಯಲ್ಲಿಡಲು ಕೊಡುವ ಉಪದೇಶ, ಅದಕ್ಕಾಗಿ ತೆಗೆದುಕೊಳ್ಳುವ ಕ್ರಮ" ಇತ್ಯಾದಿ ಅರ್ಥಗಳು. "ತಿದ್ದು" ಎಂದೂ ಹೇಳಬಹುದು. ತಿದ್ದುವುದಕ್ಕೆ ಕೆಲ ವೇಳೆ ದೇಹದಂಡನೆ ಮೊದಲಾದ ಉಗ್ರಕ್ರಮಗಳನ್ನು ಕೈಕೊಳ್ಳಬೇಕಾಗುತ್ತದೆ. ಆದ್ದರಿಂದ ಅದೂ ಶಿಕ್ಷೆ (ಶಿಕ್ಷಣ ಎಂಬುದು ಚಾಲ್ತಿಯಲ್ಲಿದೆ ತಾನೆ). ಕಡೆಗೀಗ ಈ ಕಡೆಯ ಅರ್ಥವೇ (ಕನ್ನಡದಲ್ಲಿ) ಬಲವಾಗಿಬಿಟ್ಟದೆಯಷ್ಟೆ.

"ದಂಡ" ಶಬ್ದ ತನ್ನ ಮೂಲಾರ್ಥವನ್ನುಳಿಸಿಕೊಂಡು ಪ್ರಯೋಗದಲ್ಲಿರುವುದೂ ಕಾಣಸುತ್ತದೆ. ಬ್ರಹ್ಮಚಾರಿ ಅಥವಾ ಸಂನ್ಯಾಸಿಗಳು ದಂಡವನ್ನು ಹಿಡಿದು ಹೋಗುತ್ತಾರೆ ಎಂಬಲ್ಲಿ ಅದು ನಿಜವಾ

ಗಿಯೂ ಕೋಲು ಅಥವಾ ಬಡಿಗೆಯೇ. "ದಂಡ ಪ್ರಣಾಮ" ಎಂಬಲ್ಲಿ ದಂಡದ ಹಾಗೆ ನೆಟ್ಟಗೆ ಅಡ್ಡಬಿದ್ದು ಮಾಡುವ ನಮಸ್ಕಾರ. ಇದಕ್ಕಿಂತಲೂ ಚಾಚಿದ ಅರ್ಥ "ದಂಡಧಾರಿ" (ದಂಡಿಸುವ ಅಧಿಕಾರವುಳ್ಳ ಅಧಿಕಾರಿ) ಎಂಬಲ್ಲಿ ಕಾಣಸುತ್ತದೆ. "ದಂಡ ನೀತಿ" ಎಂಬುದು ಅಧಿಕಾರ ನಡೆಸುವವರು ಅನುಸರಿಸಬೇಕಾದ ರೀತಿ ನೀತಿ - ರಾಜನೀತಿ. ಬೇರೆಲ್ಲ ಉಪಾಯಗಳು ನಡೆಯಲಾರದೆ ಹೋದರೆ ಅಧಿಕಾರ ನಡೆಸುವವರು ಬಳಸುವ ಉಪಾಯವನ್ನೂ "ದಂಡನೀತಿ" ಎನ್ನುತ್ತೇವೆ. ಈ ಶಬ್ದಗಳಿಂದೆಲ್ಲ ಧ್ವನಿಸುವ ಸಂಗತಿಯೆಂದರೆ, ಪರರ ಮೇಲೆ ಅಧಿಕಾರ ನಡೆಸುವವರಿಗೆ ದಂಡಿಸುವ ಅಧಿಕಾರ ಇರಲೇ ಬೇಕು ಎಂಬ ಸಾವಿರಾರು ವರ್ಷಗಳ ಸಾಮಾಜಿಕ ಅನುಭವ. ಈ ನೀತಿ ಯಾವಾಗಲೂ ನೀತಿಯುತವಾಗಿಯೇ ಇರುವುದೆಂಬ ಗ್ಯಾರಂಟಿ ಇಲ್ಲ. ಹೀಗೆ ನೀತಿ ಸಮ್ಮತವಲ್ಲದಿದ್ದರೂ ರಾಜಕಾರ್ಯದಲ್ಲಿ ಕೆಲ ವೇಳೆ ಉಪಯೋಗಿಸಬೇಕಾಗುವ ಉಪಾಯಕ್ಕೆ ಚಾಣಕ್ಯ "ಉಪಾಂಶುದಂಡ" ಎಂದು ಹೆಸರಿಟ್ಟಿದ್ದಾನೆ. ಅದರ ಅರ್ಥ ವಿಚಾರಣೆಯಿಲ್ಲದೆ ಗುಟ್ಟಾಗಿ ಕೊಲ್ಲಿಸುವುದು ಅಥವಾ ಮರ್ದಿಸುವುದು. ಸರ್ವಾಧಿಕಾರಿಗಳ ಕೈಯಲ್ಲಿ ಈ "ಉಪಾಂಶುದಂಡ" ಒಂದು ಭಯಪ್ರದವಾದ ಆಯುಧವಾಗಿರುತ್ತದೆ.

ಹೋಲಿಕೆಗಾಗಿ ಇಂಗ್ಲೀಷಿನ Penalty (ಪೆನಾಲ್ಟಿ)ಯನ್ನು ತೆಗೆದುಕೊಳ್ಳಬಹುದು. ಪ್ರಸ್ತುತವಾಗಿ ಈ ಪದ ಯಾವುದೊಂದು ಕಾನೂನು, ನಿಯಮ ಅಥವಾ ಒಡಂಬಡಿಕೆಯನ್ನು ಮುರಿದಿದ್ದಕ್ಕೆ ಪ್ರತಿಯಾಗಿ ಕೊಡುವ ಶಿಕ್ಷೆ, ವಿಶೇಷವಾಗಿ ಧನದಂಡವನ್ನು ನಿರ್ದೇಶಿಸುತ್ತದೆ. ಆದರೆ ಪ್ರಥಮತಃ ಅದು ಲ್ಯಾಟಿನ್ನಿನ Poena (=ನೋವು=ದೇಹದಂಡನೆ) ಎಂಬ ಶಬ್ದದಿಂದ ಹಳೇ ಫ್ರೆಂಚ್ ಮೂಲಕ ಇಂಗ್ಲೀಷಿನಲ್ಲಿ ಸೇರಿದ್ದು. ಆದರೆ ಸಾಧಾರಣವಾಗಿ ಪ್ರಚಲಿತವಾದ ಇಂಗ್ಲಿಷ್ ಪದ fine (ಫೈನ್) ಲ್ಯಾಟಿನ್ನಿನ finis (ಫಿನಿಸ್=ಸಮಾಪ್ತಿ)ಯಿಂದ ಬಂದಿದ್ದು. ಅದಕ್ಕೆ ಯಾವುದಾದರೊಂದು ದಾವೆಯ ಕೊನೆಯ ನಿರ್ಣಯಕ್ಕಾಗಿ ಕೊಡುವ ಮೊತ್ತ ಎಂದು ಅರ್ಥ. (ನವಿರು, ಸೂಕ್ಷ್ಮ ಎಂಬರ್ಥದ fine ಬೇರೆ ಮೂಲದ್ದೇ ಪದ) ಅರ್ಥಾತ್ ಅಂತಿಮ ಪರಿಹಾರ ಧನವೇ fine. ಅದೂ ಧನದಂಡ ಎಂದೇ ಇಂದು ಅರ್ಥಕೊಡುತ್ತದೆ.

★

ಯಾವುದೊಂದು ರುಚಿರವಾದ ಪದಾರ್ಥವನ್ನು "ಮಧುರ" ಎನ್ನುತ್ತೇವೆ. ಮಧುರವಾದ ಪಾನಕ ಇತ್ಯಾದಿ. ಅದರ ಅರ್ಥವನ್ನೇ ವಿಸ್ತರಿಸಿ ಮಧುರ ಸ್ವರವೆಂದಲ್ಲದೆ ಮಧುರವಾದ ತುಟಿಗಳು ಇತ್ಯಾದಿಯಾಗಿ ಆಲಂಕಾರಿಕವಾಗಿ ಮಧುರ ಸ್ಮರಣೆ ಮೊದಲಾದ ಅಮೂರ್ತ ಕಲ್ಪನೆಗಳಿಗೂ ಅನ್ವಯಿಸುತ್ತೇವೆ. ಆದರೆ ಈ ಮಧುರದ ಹಿಂದಿನ ಅನಾದಿ ಎನ್ನಬಹುದಾದ ಚರಿತ್ರೆಯನ್ನು ಯೋಚಿಸುವುದಿಲ್ಲ.

"ಮಧುರ"ದಲ್ಲಿ "ಮಧು" ಮತ್ತು ಎಂಬ ಎರಡು ಅಂಗಗಳಿವೆ. "ರ" ಎಂಬುದು ಬರೇ ವಿಶೇಷಣ ಪ್ರತ್ಯಯ. ಮಧುವಿನಂತಿರುವುದು ಮಧುರ. "ಮಧು"ವೆಂದರೆ ಮೂಲತಃ ಜೇನು. ಅನಂತರ ಅದರಿಂದ ಮಾಡಿದ ಮಾದಕ ಪೇಯ. ಜೇನು ಎಂದ ಮೇಲೆ ಸಿಹಿಯಾದದ್ದು; ಆದ್ದರಿಂದ ರುಚಿಯಾದದ್ದು, ಮೆಚ್ಚುವಂಥಾದ್ದು. ಸಂತೋಷಕರವಾದದ್ದು.

ಹೀಗೆನ್ನುವಾಗ ಮಧು ಅಥವಾ ಜೇನು ಮನುಷ್ಯನಿಗೆ ಪರಿಚಯವಾದ ಅತಿ ಪ್ರಾಚೀನ ಸಿಹಿ ವಸ್ತು ಎಂಬುದನ್ನು ನಾವು ಗಮನಿಸುವುದಿಲ್ಲ. ಮನುಷ್ಯನು ಬಹುಶಃ ಕರಡಿಯಿಂದ ಜೇನು ಕದಿಯುವುದನ್ನು ಕಲಿತ. ಬೇಟೆಯಾಡಿ, ಗಡ್ಡೆ ಗೆಣಸು, ಹಣ್ಣು ಹಂಪಲಿನ ಮೇಲೆ ಜೀವಿಸುತ್ತಿದ್ದ ಪೂರ್ವಶಿಲಾಯುಗಾವಸ್ಥೆಯಲ್ಲೇ ಅದು ಅವನಿಗೆ ಪರಿಚಿತವಾಗಿರಬೇಕು. ಏಕೆಂದರೆ ನೈಸರ್ಗಿಕ ಪರಿಸರದಲ್ಲೇ ಅದು ಜೇನ್ನೊಣ ಮೊದಲಾದ ಕೀಟಗಳಿಂದ ತಯಾರಿಸಲ್ಪಡುತ್ತಿತ್ತು. ಸಂಸ್ಕೃತವಲ್ಲದೆ ಗ್ರೀಕ್ (midu), ಸ್ಲಾವಿಕ್ (medu), ಲಿಥುವೇನಿಯನ್ (midus), ಇಂಗ್ಲೀಷ್ (meodu) ಭಾಷೆಗಳಲ್ಲಿ ಜ್ಞಾತಿಗಳಿರುವ ಈ ಪದ "ಮಧು" ಎಂಬ ರೂಪದಲ್ಲಿ ಆದಿ ಭಾರೋಪ್ಯ ಭಾಷೆಯಲ್ಲಿ ಇದ್ದಿರಬೇಕೆಂದು ಊಹಿಸುತ್ತಾರೆಂಬುದು ಆಶ್ಚರ್ಯವಲ್ಲ. ಯಾವುದೇ ತರದ ಬೇಸಾಯವನ್ನು ಅರಿಯದ ಕಾಲದಿಂದ ನಮ್ಮ ಪೂರ್ವಜರಿಗೆ ಈ ಪದಾರ್ಥ ತಿಳಿದಿತ್ತು. ಕಾಲಾಂತರದಲ್ಲಿ ಅದರ ಮದ್ಯವನ್ನು ಅವರು ಮಾಡಿದರು. ವೇದಗಳಲ್ಲಿ ಕೂಡ ಅದರ ಅನೇಕಾರ್ಥ ಪ್ರಯೋಗಗಳಿವೆ. ಹೀಗೆ ಮಧುರ ಎಂಬುದು ಅನಾದಿಯಾದ ಪದ. ●

ಪಾವೆಂ.

# ಸಾಂಗತಿ



ಕಾಲೇಜಿನ ಎದುರಿಗಿರುವ ಮೇಫ್ಲವರ್ ಮರಕ್ಕೆ ಒರಗಿ ಜೀವನ ನಿಂತಿದ್ದಾನೆ. ಬೆಳಗ್ಗೆ ಹನ್ನೊಂದು ಗಂಟೆಯಿಂದಲೂ ಆತ ಅಲ್ಲೇ ನಿಂತಿರುವುದು. ಈಗ ಗಂಟೆ ಒಂದಾಯಿತು. ಶಿರಸಿಯ ಕಾಲೇಜಿನಲ್ಲಿ ಓದುತ್ತಿರುವ ಈತ ಇಲ್ಲಿಗೆ , ಈ ಉಡುಪಿಗೆ ಬಂದು, ಕಾಲೇಜಿನೆದುರು ಎರಡು ತಾಸು ಕಾಯುತ್ತಾ ನಿಂತಿದ್ದಾನೆ ಎಂದರೆ ಅಚ್ಚರಿಯ ವಿಷಯವೇ ಸರಿ. ಅಚ್ಚರಿಯಾದರೂ ಅಸಂಭವವೇನೂ ಅಲ್ಲ. ಯಾಕೆಂದರೆ, ಆತ ಕಾಯುತ್ತಿರುವುದು ತನ್ನ ಪ್ರಿಯತಮೆಯನ್ನು!

ಜೀವನನ ಸ್ನೇಹಿತನೊಬ್ಬ ಮುಂಬಯಿಯಲ್ಲಿದ್ದಾನೆ. ಅವನಿಗೂ ಪ್ರೀತಿಗೂ ದೂರದ ಸಂಬಂಧ. ಅವನ ಮೂಲಕವೇ ಜೀವನನಿಗೆ ಪ್ರೀತಿಯ ಪರಿಚಯವಾದದ್ದು. ಪರಿಚಯ ಅಂದರೆ ಕೇವಲ ಪತ್ರ ಮುಖೇನ ಮಾತ್ರ. ಜೀವನ ಮತ್ತು ಪ್ರೀತಿ ಇಬ್ಬರೂ ಇನ್ನೂ ಒಮ್ಮೆಯೂ ಭೇಟಿಯಾಗಿಲ್ಲ. ಪತ್ರಮಿತ್ರತ್ವ ಬೆಳೆದು, ಬಲಿತು ಪ್ರೇಮಕ್ಕೆ ಅವಕಾಶ ನೀಡಿತು. ಪರಸ್ಪರ ಫೋಟೋಗಳ ವಿನಿಮಯವಾಯಿತು. ಭವಿಷ್ಯದ ಬದುಕಿನ ಸುಂದರ ಕನಸುಗಳನ್ನು ಪತ್ರದಲ್ಲೇ ಹೆಣೆದರು, ಬದುಕನ್ನು ಬಂಗಾರ ಮಾಡುವ ಯೋಜನೆಗಳನ್ನು ರೂಪಿಸಿಕೊಂಡರು. ವಿದ್ಯಾಭ್ಯಾಸ ಮುಗಿಯುವವರೆಗೆ ಮದುವೆಯನ್ನು ತಡೆಹಿಡಿಯಲು ನಿರ್ಧರಿಸಿಕೊಂಡರು.

ಈ ದಿನ ...

ಜೀವನನಿಗೆ ಮನಸ್ಸು ತಡೆಯಲಿಲ್ಲ. ತನ್ನ ಬಾಳಸಂಗಾತಿಯಾಗುವ 'ಏಳುಮಲ್ಲಿಗೆ ತೂಕದ ರಾಜಕುಮಾರಿ'ಯಂತೆ ಫೋಟೋದಲ್ಲಿ ಕಂಗೊಳಿಸುವ ಪ್ರೀತಿಯನ್ನು ನೋಡಲೇಬೇಕು ಎನ್ನಿಸಿಬಿಟ್ಟಿತು. ಸರಿ, ಕಾಲೇಜಿಗೆ ಚಕ್ಕರ್ ಹೊಡೆದು ಉಡುಪಿಗೆ ಬಂದ. ಅವಳಿಗಾಗಿ ಕಾಯುತ್ತಾ ಮೇಫ್ಲವರ್ ಮರಕ್ಕೆ ಒರಗಿ ನಿಂತ.

ಹುಡುಗಿಯರ ಗುಂಪೊಂದು ಕಾಲೇಜಿನಿಂದ ಹೊರಗೆ ಬಂತು. ಜೀವನ ಅವರೆಡೆಗೆ ನಡೆದ.

ತಮ್ಮತ್ತಲೇ ಬಂದ ಅಪರಿಚಿತ ಯುವಕನನ್ನು ಕೆಕ್ಕರಿಸಿ ನೋಡಿದರು ಆ ಮಿಡಿ, ಮಿನಿ, ಮ್ಯಾಕ್ಸಿ ಕನ್ಯೆಯರು.

"ಕ್ಷಮಿಸಿ..... ನೀವು ಯಾವ ಕ್ಲಾಸಿನವರು ಗೊತ್ತಿಲ್ಲ. ಬಿ.ಕಾಂ.ಫಸ್ಟ್ ಇಯರ್ ವಿದ್ಯಾರ್ಥಿನಿಯರಾಗಿದ್ದರೆ......?"

ಜೀವನನ ಮಾತನ್ನು ನಡುವೆಯೆ ತಡೆಯುತ್ತಾ ಒಬ್ಬ 'ಮಿನಿ', "ಹೌದು, ನಾವು ಬಿ.ಕಾಂ. ಫಸ್ಟ್ ಇಯರ್ ಸ್ಟುಡೆಂಟ್ಸ್," ಎಂದಳು.

"ಹಾಗಾದರೆ ನಿಮಗೆ ಪ್ರೀತಿ ನಾಯಕ್ ಅನ್ನೋ ಹುಡುಗಿ ಗೊತ್ತಿದೆಯಲ್ವಾ.......... ನಿಮ್ಮ ಕ್ಲಾಸಿನವಳೇ?" ಎಂದ ಜೀವನ.

"ಓಹೋ ಗೊತ್ತಿದೆ," ನಾಲ್ಕೈದು ಕಂಠಗಳು ಒಟ್ಟಿಗೆ ಉತ್ತರಿಸಿದವು.

"ಅವಳನ್ನು ಸ್ವಲ್ಪ ಕಾಣಬೇಕಾಗಿತ್ತು," ಎಂದ ಜೀವನ.

"ನೀವು ಯಾರು ?" ಮ್ಯಾಕ್ಸಿಯೊಂದು ಕೇಳಿತು.

ಜೀವನನಿಗೆ ಥಟ್ಟನೆ ಏನು ಹೇಳಲೂ ತೋಚಲಿಲ್ಲ.

ತುಸು ತಡವರಿಸಿದರೂ ಸಾವರಿಸಿಕೊಂಡು

ಹೇಳಿದ: "ನಾನು ಶಿರಸಿಯವನು. ಪ್ರೀತಿಯ ರಿಲೇಟಿವ್...."

"ಹೌದಾ..... ಆದರೆ.... ಪ್ರೀತಿ ಇವೊತ್ತು ಕಾಲೇಜಿಗೆ ಬಂದಿಲ್ಲ........" ಎಂದಳೊಬ್ಬಳು.

"ಛೇ ಎಂಥಾ ಕೆಲಸವಾಯಿತು....."ಜೀವನ ತನ್ನಲ್ಲೇ ಗೊಣಗಿಕೊಂಡರೂ ಹುಡುಗಿಯರ ಸೂಕ್ಷ್ಮ ಕಿವಿಗೆ ಅದು ಕೇಳಿಸಿಯೇ ಬಿಟ್ಟಿತು.

"ಪ್ರೀತಿಯ ಮನೆಗೆ ಹೋಗಿ..... ಆಕೆ ಮನೆಯಲ್ಲೇ ಇರಬಹುದು," ಎಂದರು.

"ನಂಗೆ ಅವಳ ಮನೆ ಎಲ್ಲಿದೇಂತ ಗೊತ್ತಿಲ್ಲ," ಎಂದ ಜೀವನ.

"ಮತ್ತೆ ರಿಲೇಟಿವ್ ಅಂದ್ರಿ ?" ಒಬ್ಬ ಹುಡುಗಿ ಕಣ್ಣು ಕಿರಿದುಗೊಳಿಸಿ ಕೇಳಿಯೇ ಬಿಟ್ಟಳು.

ಜೀವನನಿಗೆ ತಾನು ತಪ್ಪು ಮಾತಾಡಿದೆ ಎನ್ನಿಸಿತು. ಇನ್ನೂ ಹೆಚ್ಚು ಹೊತ್ತು ಇವರೊಡನೆ ಮಾತಾಡುವುದು ಅಪಾಯ ಎಂದುಕೊಂಡು, "ಅವರು ಈಗ ಬೇರೆ ಮನೆ ಮಾಡಿದ್ದಾರಂತೆ...." ಎಂದವನೇ ದುಡು ದುಡು ಹೆಜ್ಜೆ ಹಾಕಿದ. ಹಿಂದಿನಿಂದ ಆ ಬೆಡಗಿಯರ ನಗು ಕೇಳುತ್ತಿತ್ತು.

ಜೀವನ ಬಸ್ ನಿಲ್ದಾಣಕ್ಕೆ ಬಂದ.

ಶಿರಸಿಗೆ ಹೊರಡುವ ಬಸ್ ರೆಡಿಯಾಗಿತ್ತು. ಹತ್ತಿ ಕುಳಿತ.

ಬಸ್ಸು ಹೊರಟಿತು.....

★

ಕುಮಟಾ ಸ್ಟ್ಯಾಂಡಿನಲ್ಲಿ ಬಸ್ ನಿಲ್ಲುವಾಗ ಸಂಜೆಯಾಗಿತ್ತು.

"ಯಾರೂ ಇಳಿಯಬೇಡಿ. ಇಲ್ಲಿ ಹೆಚ್ಚು ಹೊತ್ತು ಬಸ್ಸು ನಿಲ್ಲೋದಿಲ್ಲ," ಕಂಡಕ್ಟರ್ ಕೂಗಿದ್ದರಿಂದ ಜೀವನ ಕೆಳಗಿಳಿಯಲಿಲ್ಲ.

ಮೂರು ನಿಮಿಷಗಳ ನಂತರ ಈ ಬಸ್ಸಿನ ಪಕ್ಕದಲ್ಲೇ ಇನ್ನೊಂದು ಬಸ್ಸು ಬಂದು ನಿಂತಿತು. ಅದು ಶಿರಸಿಯಿಂದ ಉಡುಪಿಗೆ

*ಟಿ.ಎಂ.ಜಗದೀಶ್*

ಹೋಗುವ ಬಸ್ಸು.

ಆ ಬಸ್ಸಿನೊಳಗೆ ಕಣ್ಣು ಹಾಯಿಸಿದ ಜೀವನನಿಗೆ ಒಂದು ಅನುಮಾನ ಮೂಡಿತು. "ತನಗೆ ನೇರವಾಗಿ ಆ ಬಸ್ಸಿನ ಸೀಟಿನಲ್ಲಿ ಕಿಟಕಿಯ ಬಳಿ ಕುಳಿತ ಆಕೆ ಪ್ರೀತಿ ಇರಬಹುದೇ ಛೆ... ಇರಲಿಕ್ಕಿಲ್ಲ." ಎಂದುಕೊಂಡ.

ಆ ಹುಡುಗಿಯೂ ಇವನನ್ನೇ ನೋಡುತ್ತಿದ್ದಳು. ಜೀವನ ಅವಳನ್ನೇ ಗಮನಿಸತೊಡಗಿದಾಗ ಆಕೆ ಮುಖ ಹೊರಗೆ ಹಾಕಿ, "ಕ್ಷಮಿಸಿ, ನಿಮ್ಮ ಹೆಸರು 'ಜೀವನ' ಅಲ್ವಾ" ಎಂದಳು.

"ಹೌದು....."ಜೀವನ ಹೇಳುವಷ್ಟರಲ್ಲಿ ಆಕೆ "ಜೀವನ.... ನಾನು ಪ್ರೀತಿ...." ಎಂದಳು. "ಆಂ..... ಖುಷಿಯಲ್ಲಿ ಉದ್ಗರಿಸಿದ ಜೀವನ, "ನಾನು ಕಾದೂ ಕಾದೂ..... " ಎನ್ನುತ್ತಿದ್ದಂತೆ ಪ್ರೀತಿ, "ನಾನೂ ಅಷ್ಟೆ..... ನಿನಗಾಗಿ ನಿನ್ನ ಕಾಲೇಜಿನಲ್ಲಿ ಕಾದೂ ಕಾದೂ......"

ಪ್ರೀತಿಯ ಮಾತು ಪೂರ್ತಿಯಾಗಿರಲಿಲ್ಲ ಜೀವನನ ಬಸ್ಸು ಹೊರಟೇಬಿಟ್ಟಿತು.

"ಜೀವನ......" ಪ್ರೀತಿ ಏನೋ ಹೇಳಹೊರಟಿದ್ದಳು. "ಪ್ರೀತಿ..... ನಾನು" ಜೀವನ್ ಏನೆಂದನೋ ಯಾರಿಗೆ ಗೊತ್ತು ?

ಕೇವಲ ಎರಡು ನಿಮಿಷಗಳ ಭೇಟಿ.

ಪ್ರೀತಿ ಮರಳಿ ಉಡುಪಿಯತ್ತ......

ಜೀವನ ಮರಳಿ.....

ಇಲ್ಲ.

ಜೀವನ ಶಿರಸಿ ತಲುಪಲಿಲ್ಲ. ದೇವಿಮನೆ ಘಾಟಿನಲ್ಲಿ ಜೀವನ ಪ್ರಯಾಣಿಸುತ್ತಿದ್ದ ಬಸ್ಸು ಪಲ್ಟಿಹೊಡೆದು ಅಪಘಾತದಲ್ಲಿ ಸತ್ತವರ ಹೆಸರಿನ ಲಿಸ್ಟಿನಲ್ಲಿ ಜೀವನನ ಹೆಸರೂ ಸೇರಿಕೊಂಡಿತು.

ಜೀವನ ತನ್ನ ಜೀವನದಲ್ಲಿ ಪ್ರೀತಿಯನ್ನು ಕೇವಲ ಎರಡು ನಿಮಿಷಗಳ ಕಾಲ ಮಾತ್ರ ಸಂಧಿಸಿದ. ಜೀವನ ಸತ್ತಿದ್ದರೂ ಪ್ರೀತಿಯಿನ್ನೂ ಬದುಕಿದ್ದಾಳೆ.

'ಶಶಿಪ್ರಭ'

# ಕಾದಿರುವನು ಕೃಷ್ಣ....
# ರಾಧೆ ಬರುವಳೆಂದು....

ರಾತ್ರಿ, ನದಿಯ ದಡ, ಕಾತರ....

ರಾಧೆಗಾಗಿ ಕಾಯುತ್ತಿದ್ದಾನೆ ಕೃಷ್ಣ....

ತಾರೆಗಳ ಚಮಕಿನಾಟದಲ್ಲಿ ಆತನ ಮನದಾಸೆಯ ಬಾಗಿಲುಗಳು ತೆರೆದು - ಮುಚ್ಚಿ ಮಾಡುತ್ತಲೇ ಇರುತ್ತವೆ.

ಊಹುಂ. ರಾಧೆ ಬರುವುದಿಲ್ಲ. ಆಕೆಯ ನೆನಪುಗಳು ಮಾತ್ರ ಬರಲಾರಂಭಿಸುತ್ತವೆ ಧಾರಾವಾಹಿಯಾಗಿ.

ವೈಗೈ ನದಿಯ ನೀರಿನ ಒಂದೊಂದು ಅಲೆ ದಡಕ್ಕಪ್ಪಳಿಸಿದಾಗಲೆಲ್ಲ ಒಂದೊಂದು ನೆನಪು.

ಕೃಷ್ಣನ ಕಾತರದ ರಾತ್ರಿಗಳು ಹೀಗೇ ಕಳೆದು ಹೋಗುತ್ತಲಿವೆ.

ಯಾರು ಈ ಕೃಷ್ಣ? ಯಾರು ಆ ರಾಧೆ?

ಆತ ಪರಮಕುಡಿಯ ಕುಷ್ಠರೋಗಿ. ಆಕೆ ಫ್ರಾನ್ಸಿನಿಂದ ಬಂದು, ಇದ್ದು, ಈ ಕೃಷ್ಣನ ರಾಧೆಯಾಗಿ ಮರಳಿ ತವರಿಗೆ ಹೋದ ತರುಣಿ. ಹೆಸರು ಅನ್ನೆ ಮೇರಿ.

ಮದಿರೆ ಮತ್ತು ಮತ್ತೇರಿಸುವ ಅತ್ತರಿನ ನಾಡು ಫ್ರಾನ್ಸಿನಿಂದ ಭಾರತಕ್ಕೆ 'ಸಾಕ್ಷಾತ್ಕಾರ' ಬಯಸಿ ಬಂದ ಅನ್ನೆ ಮೇರಿಗೆ, ಗೀತೆ ಉಪನಿಷತ್ತು ರಾಮಾಯಣಗಳ ನಾಡಿಗೆ ಬಂದ ಅನ್ನೆ ಮೇರಿಗೆ, "ಭಾರತದಲ್ಲಿ ಗುರುವೊಬ್ಬನನ್ನು ಕರುಣಿಸು" ಎಂದು ಏಸುವಿನಲ್ಲಿ ಸಾವಿರ ಸಲ ಕೋರಿಕೊಂಡ ಅನ್ನೆ ಮೇರಿಗೆ ರಾಮೇಶ್ವರದಲ್ಲಿ ಗೆಳೆಯ-ಗುರು ಎರಡೂ ಆಗಿ ಎದುರು ಬಂದು ನಿಂದಾತ ಈ ಕೃಷ್ಣ.

ಅದಕ್ಕೂ ಮೊದಲು ಏಳು ವರ್ಷಗಳ ಕಾಲ ಫ್ರಾನ್ಸಿಸ್ ಎಂಬವನೊಡನೆ ಸ್ವಚ್ಛಂದ ಜೀವನ ನಡೆಸಿದ್ದಳು ಅನ್ನೆ ಮೇರಿ. ವಿವಾಹದ ಪ್ರಸ್ತಾಪವೆತ್ತಿದಾಗ ಆತ ಹಿಂಜರಿದ. ಇಪ್ಪತ್ತನಾಲ್ಕರ ಹರೆಯದ ಅನ್ನೆ ಮೇರಿಗೆ ಬದುಕು ಶೂನ್ಯವೆನಿಸತೊಡಗಿತು. ಶಾಂತಿಯನ್ನರಸುತ್ತ ಫ್ರಾನ್ಸಿಸ್‌ನೊಂದಿಗೆ ಭಾರತಕ್ಕೆ (1979ರಲ್ಲಿ) ಬಂದಳು.

ಅದೇ ವರ್ಷದ ಮಾರ್ಚ್ ತಿಂಗಳಿನ ಒಂದು ಶನಿವಾರ. ಇನಿಯ ಫ್ರಾನ್ಸಿಸ್ ಹಾಗೂ ಇತರ ಕೆಲವರೊಂದಿಗೆ ಮೇರಿಯ ಮನಸ್ಸು ಗಾಂಜಾದ ಹೊಗೆ ಚಹದ ಹಿತಗಳೊಂದಿಗೆ ಹಗುರವಾಗಿ ಸಂಚರಿಸುತ್ತಿದ್ದಾಗಲೇ ಆಕೆಗೆ 'ಗುರು' ಗೋಚರಿಸಿದ. ಆದರೆ ಆಕೆ ಅಂದುಕೊಂಡಿದ್ದಂತೆ ಆತ ಕಾವಿ ತೊಟ್ಟಿರಲಿಲ್ಲ, ಮೈಗೆ ನಾಮಬಳಿದುಕೊಂಡಿರಲಿಲ್ಲ, ಕತ್ತಿಗೆ ತುಳಸಿ ಮಣಿಸರವನ್ನು ಧರಿಸಿರಲಿಲ್ಲ. ಮೈಸುಟ್ಟಂಥ ಕಪ್ಪು ಚರ್ಮದ ಮೇಲೆ ಬಿಳಿಯ ಕಲೆಗಳ, ಮುರುಟಿದ ಬೆರಳುಗಳ,

('WEEK' ಪತ್ರಿಕೆಯಿಂದ ಸಾಭಾರ)

ಳ್ಳತೊಡಗಿದವು. ಕಿವಿಯಲ್ಲಿ ಅದೇ ಅದೇ ಪ್ರತಿಧ್ವನಿ.. ''ಧ್ಯಾನ, ಯೋಗ, ಗೀತೆ, ಉಪನಿಷತ್ತು.... ನನಗೆಲ್ಲ ಗೊತ್ತು....''

ಅವರೆಲ್ಲ ಅಲ್ಲಿಂದೆದ್ದರು. ಮೇರಿಗೆ ಆತ ಗುರುವಾಗಿ ತೋರಿದರೆ ಉಳಿದವರಿಗೆ ಆತ 'ಗಾಂಜಾ ಗುರು'ವಾಗಿ ಕಂಡಿದ್ದ.



ಹುಣ್ಣು ದೇಹದ ಆತ ಇವರಿದ್ದೆಡೆಯೇ ಬಂದು ನಿಂತಿದ್ದ. ಹರಕುಮುರುಕು ಇಂಗ್ಲೀಷಿನಲ್ಲಿ ''ನಾನು ಕೃಷ್ಣ... ಇಲ್ಲಿಯ ಗೈಡ್... ಗೀತೆ ಉಪನಿಷತ್ತು ಗೊತ್ತು. ಯೋಗ ಕಲಿಸಬಲ್ಲೆ.. ಗಾಂಜಾ ಕೂಡ ಸರಬರಾಜು ಮಾಡಬಲ್ಲೆ'' ಎಂದ.

ಉಳಿದವರ ಮೇಲೆ ಆತನ ಮಾತುಗಳು ಪರಿಣಾಮ ಬೀರಲಿಲ್ಲ. ಅರೆದೆರೆದ ಕಣ್ಣುಗಳ ಅನ್ನೆ ಮೇರಿಗೆ ಮಾತ್ರ ಆತನ ಮಾತು ಮನಸ್ಸಿನಾಳಕ್ಕಿಳಿದಿತ್ತು. ಇದ್ದಕ್ಕಿದ್ದಂತೆ ಪ್ರಜ್ವಲಿತ ಜ್ಯೋತಿಯೊಂದು ಎದುರಾದಂತೆ... ಆಕೆ ಪೂರ್ತಿ ಕಣ್ಣು ತೆರೆಯಲು ಪ್ರಯತ್ನಿಸಿದಷ್ಟೂ ಅವು ಮುಚ್ಚಿಕೊ

ಅಲ್ಲಿಂದ ಆರಂಭಗೊಂಡ ಕೃಷ್ಣ ಹಾಗೂ ಮೇರಿಯ ಸಂಬಂಧ ಬಿಡಲಾರದ್ದಾಗಿತ್ತು. ಮೇರಿಗೆ 'ರಾಧಾ' ಎಂದು ಹೆಸರಿಟ್ಟು ಕೃಷ್ಣ ಆಕೆಯ ಬಹುದಿನಗಳ ಅನೇಕ ಸಮಸ್ಯೆಗಳಿಗೆ ಉತ್ತರವಾದ. ಮೇರಿ ಕೃಷ್ಣನ ಪ್ರೀತಿಪಾಶಕ್ಕೆ ಸಿಕ್ಕ ಮೇಲೂ ಫ್ರಾನ್ಸಿಸ್ ಅನೇಕ ದಿನಗಳು ಅಲ್ಲಿದ್ದ. ಆಕೆಯ ಒಲವಿಗಾಗಿ ಹಂಬಲಿಸಿದ. ಆದರೆ 'ರಾಧಾ'ಳ ನೆನಪಿನಾಳದಲ್ಲಿ ಫ್ರಾನ್ಸಿಸ್‌ನ ನೆನಪು ಸಮಾಧಿಯಾಗಿತ್ತು. ಏಳು ವರ್ಷಗಳ ನಿರಂತರ ದಾಂಪತ್ಯದ ನೆನಪನ್ನಷ್ಟೇ ಹೊತ್ತು ಆತ ಹಿಂದಿರುಗಿದ.

ಪ್ರತಿಯೊಂದು ಕೆಲಸದಲ್ಲೂ ಕೃಷ್ಣನಿಗೆ ನೆರವಾಗುತ್ತಿದ್ದ ರಾಧೆ ಸಂಪೂರ್ಣವಾಗಿ ಅವನಿಗೆ ಅರ್ಪಿತಳಾದಳು. ಫ್ರಾನ್ಸಿಸ್ 'ಮೇರಿ'ಯ ದೇಹದ ಮೇಲಷ್ಟೇ ಪ್ರಭುತ್ವ ಸಾಧಿಸಿದ್ದರೆ, ಕೃಷ್ಣ 'ರಾಧೆ'ಯ ತನುಮನವನ್ನೆಲ್ಲ ಹಿತವಾಗಿ ಆಕ್ರಮಿಸಿದ. ಅಂದೇ ಆಕೆ "ನೀನು ನನ್ನ ದೇವರು, ನಿನ್ನ ನುಡಿ ಸಾಕ್ಷಾತ್ ಪರಮಾತ್ಮ" ನಂತೆ ಎಂದು ತನ್ನ ದಿನಚರಿಯಲ್ಲಿ ಒಲವು ತುಂಬಿದ ಅಕ್ಷರಗಳಲ್ಲಿ ಬರೆದಳು.

ಇವರ ಈ ನಿರಂತರ ಒಡನಾಟಕ್ಕೆ ವೈಗೈ ನದಿ ತನ್ನ ಮೌನ ಪ್ರೋತ್ಸಾಹ, ಮುದ ತುಂಬಿಸಿತು. ಆದರೆ ಇದನ್ನು ಅಲ್ಲಿನ ಸಾರ್ವಜನಿಕರು ಸಹಿಸಲಿಲ್ಲ. "ಈ ರೀತಿಯ ನಿಮ್ಮ ವರ್ತನೆ ಸಾರ್ವಜನಿಕದ್ದಲ್ಲ" ಎಂದು ಗುಡುಗಿದರು. ಇದಕ್ಕೊಂದು ಅಂತಿಮ ತೆರೆಯೆಳೆಯಲು ರಾಧಾ-ಕೃಷ್ಣರು ಮದುವೆಯಾಗುವ ನಿರ್ಧಾರಕ್ಕೆ ಬಂದರು. ಸೌರಾಷ್ಟ್ರ ಬ್ರಾಹ್ಮಣನಾದ ರಾಧಾ ಕೃಷ್ಣ ಅಯ್ಯರ್ ಸಾರ್ವಜನಿಕ ಸಭೆಯೊಂದರಲ್ಲಿ ಅರಿಸಿನ ಕೊಂಬೊಂದನ್ನು ಮೇರಿಯ ಕೊರಳಿಗೆ ಕಟ್ಟಿದ. ಫ್ರಾನ್ಸಿನಲ್ಲಿ ಹುಟ್ಟಿದ ರೋಮನ್ ಕ್ಯಾಥೋಲಿಕ್ ಕನ್ಯೆ ಅನ್ನೆ ಮೇರಿಗೆ ತಾಳಿ ಕಟ್ಟಿಸಿಕೊಳ್ಳುವ ಸೌಭಾಗ್ಯ ಇಲ್ಲಿ ಒದಗಿ ಬಂದು ಆಕೆ ಕೃಷ್ಣನ 'ಅಧಿಕೃತ' ಪತ್ನಿಯೆನಿಸಿದಳು.

ಕೃಷ್ಣನಿಗಾಗಿ ಮಾಡುವ ಪ್ರತಿಯೊಂದು ಕೆಲಸದಲ್ಲೂ ರಾಧಾಳಿಗೆ ಇನ್ನಿಲ್ಲದ ಹುರುಪು. 20ರೂ. ಗಳಿಗೆ ಯಾರದೋ ಮನೆಯ ಒಂದು ಭಾಗವನ್ನು ಬಾಡಿಗೆ ಹಿಡಿದು ಸಂಸಾರ ಪ್ರಾರಂಭಿಸಿದಳು. ಆತನಿಗಾಗಿ ಅಡುಗೆ ಮಾಡುತ್ತಿದ್ದಳು. ಆತನ ಬಟ್ಟೆಗಳನ್ನು ಶುಭ್ರವಾಗಿ ತೊಳೆದು, ಆತನ ಕೈಗಳಲ್ಲಿನ ಹುಣ್ಣುಗಳಿಗೆ ಮದ್ದು ಹಾಕುತ್ತಿದ್ದಳು. ಹಾಸಿಗೆಯ ಪಾಲಿನಲ್ಲೂ ಆಕೆ ಅತ್ಯಂತ ಸುಖಿಯಾಗಿಯೇ ಇದ್ದಳು. ಹಿಂದೂ ಕುಲೀನ ಸ್ತ್ರೀಯಂತೆ ಆತ ಬಿಟ್ಟ ಎಂಜಲು ತಟ್ಟೆಯಲ್ಲಿಯೇ ಆಕೆ ಊಟ ಮಾಡುತ್ತಿದ್ದಳು. ಬೀದಿನಲ್ಲಿಯಲ್ಲಿ ನೀರು ಹಿಡಿದುಕೊಂಡು ಬರುವುದು, ಸಗಣಿಯ ನೀರಿನಿಂದ ಮನೆಯನ್ನು ಸ್ವಚ್ಛಗೊಳಿಸುವದೆಲ್ಲವನ್ನೂ ಆಕೆ ಸಂತೋಷದಿಂದಲೇ ಮಾಡುತ್ತಿದ್ದಳು.

ಮನೆಯ ಖರ್ಚು - ವೆಚ್ಚ ಏರತೊಡಗಿದ ಹಾಗೆ ಬ್ಯಾಂಕಿನಲ್ಲಿದ್ದ ಮೇರಿಯ ಹಣ ಖಾಲಿಯಾಗತೊಡಗಿತು. ರಾಧಾ ಫ್ರಾನ್ಸ್‌ನಲ್ಲಿದ್ದ ತನ್ನ ತಾಯ್ತಂದೆಯರಿಗೆ ಪತ್ರ ಬರೆದು ತನಗಾಗಿ ಹಣ ಹಾಗೂ ಕೃಷ್ಣನಿಗಾಗಿ ಔಷಧಿಗಳನ್ನು ತರಿಸಿದಳು. ಅದೂ ಖರ್ಚಾದಾಗ ಬಡತನ ಮತ್ತೆ ಬಾಗಿಲು ತಟ್ಟಿತು. ಕೃಷ್ಣ ಹೊರಗಿದ್ದಾಗ ಮೇರಿ ಬೇರೆ ದೇಶದ ಪ್ರವಾಸಿಗರಿಗೆ ಗೈಡ್ ಆಗಿ ಕೆಲಸ ಮಾಡುತ್ತಿದ್ದರೂ ಅದರ ಹಣ ಯಾವುದಕ್ಕೂ ಸಾಲುತ್ತಿರಲಿಲ್ಲ.

ಈ ಹೊತ್ತಿಗೆ ರಾಧಾ ಸಂಪೂರ್ಣ ಜರ್ಜರಿತಳಾಗಿ ಬಿಟ್ಟಿದ್ದಳು. ಜ್ವರದ ಕಾಟ ಅವಳನ್ನು ಮೂರು ತಿಂಗಳ ತನಕ ಎಡೆಬಿಡದೆ ಕಾಡಿತು. ಅಲ್ಲಿಯ ಡಾಕ್ಟರನೊಬ್ಬ ಈಕೆಗೆ ಮಲೇರಿಯಾ ಎಂದು ಚಿಕಿತ್ಸೆ ನೀಡಿದ. ಆದರೆ ಅದು ಮಲೇರಿಯಾ ಆಗಿರಲಿಲ್ಲ. ಇದೆಲ್ಲವುಗಳಿಂದ ನಿಶ್ಶಕ್ತಿ ಹೊಂದಿ ಕಳೆಗುಂದಿದ ರಾಧಾ ತನ್ನ ಮೊದಲಿನ ಕಾಂತಿಯನ್ನೇ ಕಳೆದುಕೊಂಡುಬಿಟ್ಟಳು.

ಆದರೆ ಇದಾವುದೂ ಅವಳನ್ನು ಬಾಧಿಸಲೇ ಇಲ್ಲ. ತನ್ನ ಈ ರೀತಿಯ ಖಾಯಿಲೆಯಿಂದ ತಾನು ತನ್ನ ದೇವರಿಗೆ ಅನವಶ್ಯಕವಾಗಿ ಹೊರೆಯಾಗಿಬಿಟ್ಟೆನಲ್ಲಾ ಎಂಬ ಪಾಪಪ್ರಜ್ಞೆ ಅವಳನ್ನು ಕಾಡತೊಡಗಿತು. ತೃಪ್ತ ಜೀವನ ನೀಡಬೇ

ಕೆಂದು ಬಂದ ತಾನೇ ಅವನನ್ನು ಅವಲಂಬಿಸು ವಂತಾಯ್ತಲ್ಲ ಎಂದು ಕೊರಗುತ್ತಿದ್ದ ಅವಳಿಗೆ ದಾರಿ ತೋಚಲೇ ಇಲ್ಲ.

ಈ ಸಮಯದಲ್ಲಿ ರಾಮೇಶ್ವರದಲ್ಲಿ ತಂಗಿದ್ದ ಫ್ರಾನ್ಸಿನ ಪ್ರವಾಸಿ ಎಲಿಜಬೆತ್ ರಾಧಾಳ ನೆರವಿಗೆ ಬಂದಳು. ಪಾಂಡಿಚೇರಿಯಲ್ಲಿದ್ದ ಫ್ರಾನ್ಸ್‌ನ ಕಚೇರಿಗೆ ಮೇರಿಯ ಸುದ್ದಿ ಕೊಟ್ಟಳು. ಮೇರಿ ಮತ್ತೆ ಫ್ರಾನ್ಸ್‌ಗೆ ತೆರಳುವ ವಿಚಾರ ಮಾಡಿದಳು.

''ನಾನು ಅಲ್ಲಿ ಯಾವುದಾದರೂ ಕೆಲಸ ಹುಡುಕಿ ಹಣ ಸಂಪಾದಿಸುತ್ತೇನೆ. ಇನ್ನೆರಡು ವರ್ಷಗಳಲ್ಲಿ ಭಾರತಕ್ಕೆ ತಾನು ಸಾಕಷ್ಟು ಹಣ ದೊಂದಿಗೆ ಬರುತ್ತೇನೆ, ಆಗ ನಾವು ನಮ್ಮದೇ ಒಂದು ಆಶ್ರಮ ಕಟ್ಟೋಣ'' ಎಂದು ಕೃಷ್ಣನಿಗೆ ಸಾಂತ್ವನ ಹೇಳಿದಳು. ಆಶ್ರಮ ಕಟ್ಟುವುದು ಕೃಷ್ಣನ ಬಹುದಿನಗಳ ಬಯಕೆಯಾಗಿತ್ತು.

ಟೈಫಾಯಿಡ್‌ನಿಂದ ನರಳುತ್ತಿದ್ದ ಆಕೆಗೆ ಪಾಂಡಿಚೇರಿಯ ಫ್ರಾನ್ಸ್‌ನ ಕಚೇರಿ ಒಳ್ಳೆಯ ಚಿಕಿತ್ಸೆ ಕೊಡಿಸಿತು. 42 ತಿಂಗಳ ವಿಚಿತ್ರ ಹಾಗೂ ಗಾಢ ಒಲವಿನ ಬದುಕಿನ ನಂತರ ಒಲ್ಲದ ಮನಸ್ಸಿನಿಂದ ಮೇರಿ ಕೃಷ್ಣನನ್ನು ಬಿಟ್ಟು ಫ್ರಾನ್ಸಿಗೆ ತೆರಳಿದಳು.

ಈಗಾಕೆ ತನ್ನ ತಂಗಿಯೊಡನೆ ಫ್ರಾನ್ಸ್‌ಯಲ್ಲಿದ್ದಾಳೆ. ''ನನ್ನಗಿನ್ನೂ ಒಳ್ಳೆಯ ಕೆಲಸ ಸಿಕ್ಕಿಲ್ಲ, ಸಿಕ್ಕ ಕೂಡಲೇ ಸಾಕಷ್ಟು ಹಣದೊಂದಿಗೆ ಭಾರತಕ್ಕೆ ಮರಳುತ್ತೇನೆ, ನನ್ನ ಸುಖದ ನೆಲೆ ಭಾರತದಲ್ಲೇ ಇದೆ'' ಎನ್ನುತ್ತಾಳೆ.

ಆಗಾಗ್ಗೆ ಆಕೆಯ ಆರಾಧ್ಯ ದೈವ ಕೃಷ್ಣನಿಗೆ ಪತ್ರಗಳ ಮೂಲಕ ಪ್ರವಾಹೋಪಾದಿಯಲ್ಲಿ ಪ್ರೀತಿ ಹರಿದುಬರುತ್ತದೆ. ಕೆಲವೊಮ್ಮೆ ಮೇರಿ ಹಣವನ್ನೂ ಕಳುಹಿಸುತ್ತಾಳೆ. ಆಕೆಯ ನಿರೀಕ್ಷೆಯಲ್ಲೇ ವೈಗೈಯ ಅಲೆಗಳೊಡನೆ ಪ್ರತಿಗಂಟೆಗಳನ್ನೂ ಲೆಕ್ಕ ಮಾಡುತ್ತ ಕೃಷ್ಣ ಕಾಲ ಕಳೆಯುತ್ತಿದ್ದಾನೆ. ನೆನಪುಗಳ ತಿರುಗಾಟದಲ್ಲಿ ಏರಿಳಿಯುತ್ತಾನೆ. ರಾಧೆ ಪುನಃ ಬರುವಳೆ ಎಂದು ಆಶೆಯಿಂದ ಕಾಯುತ್ತಾನೆ.

●

# ಪರೀಕ್ಷೆ

ಮೂಲ: ಜೆಫೆರಿ ಆರ್ಚರ್

ಅನು: ಆರ್.ವಿ.ಕಟ್ಟಿಮನಿ

ಇಗ್ನ್ಯಾಶಿಯಸ್ ಅಗರ್ಬಿ ನೈಜೀರಿಯಾದ ಆರ್ಥಿಕ ಮಂತ್ರಿಯಾಗಿ ಆಯ್ಕೆಯಾದಾಗ ಕೆಲವು ಜನರಷ್ಟೇ ಈ ನೇಮಕದ ಬಗೆಗೆ ಆಸಕ್ತಿ ತೋರಿಸಿದರು. ಸಿನಿಕರ ಅಭಿಪ್ರಾಯದ ಪ್ರಕಾರ ಇಗ್ನ್ಯಾಶಿಯಸ್, ಹದಿನೇಳು ವರ್ಷಗಳಲ್ಲಿ ಆಯ್ಕೆಯಾದ ಹದಿನೇಳನೆಯ ಆರ್ಥಿಕ ಮಂತ್ರಿ.

ಅಧಿಕಾರ ಸ್ವೀಕರಿಸಿದ ನಂತರ ಇಗ್ನ್ಯಾಶಿಯಸ್ ಪಾರ್ಲಿಮೆಂಟಿನಲ್ಲಿ ಸಾರ್ವಜನಿಕ ರಂಗದಿಂದ ರಾಜಕೀಯ ಭ್ರಷ್ಟಾಚಾರ ಮತ್ತು ಲಂಚವನ್ನು ಹೊಡೆದೋಡಿಸುವುದಾಗಿ ಹೇಳಿಕೆಯಿತ್ತ. ಯಾವೊಬ್ಬ ಸರಕಾರಿ ಅಧಿಕಾರಿಯೂ ತಾನು ನಿಷ್ಕಳಂಕನಾಗಿದ್ದುದನ್ನು ತೋರಿಸಿಕೊಡುವವರೆಗೆ ಅವನ ಅಧಿಕಾರ ಸುರಕ್ಷಿತವಾಗಿರುವುದಿಲ್ಲವೆಂದೂ ಎಚ್ಚರಿಸಿದ.

ಇದು ಕೂಡ ಈ ಮೊದಲು ಆಗಿಹೋದ ಹದಿನಾರು ಮಂತ್ರಿಗಳ ಹೇಳಿಕೆಯಂತೆಯೆ ಎಂದು ರಾಜಧಾನಿಯ 'ಟಾಗೋಸ್ ಟೈಮ್ಸ್' ಪತ್ರಿಕೆಯ ಸಂಪಾದಕ ಭಾವಿಸಿದ್ದರಿಂದ ಈ ಸುದ್ದಿ ಆ ಪ್ರಮುಖ ಪತ್ರಿಕೆಯಲ್ಲಿ ಪ್ರಕಟವಾಗಲೇ ಇಲ್ಲ.

ಆದರೆ ಇಗ್ನ್ಯಾಶಿಯಸ್ ತನ್ನ ಆತ್ಮವಿಶ್ವಾಸ ಕಳೆದುಕೊಳ್ಳದೆ ತನ್ನ ಉದ್ದೇಶದ ಕಡೆಗೆ ದೃಢ ನಿಶ್ಚಯದಿಂದ ಮುಂದುವರಿದ. ಆಯ್ಕೆಯಾದ ಕೆಲವೇ ದಿನಗಳಲ್ಲಿ ಆತ ಆಹಾರ ಖಾತೆಯ ಕಿರಿಯ ಅಧಿಕಾರಿಯೊಬ್ಬನನ್ನು, ಧಾನ್ಯಗಳ ಆಮದಿನಲ್ಲಿ ಸುಳ್ಳು ದಾಖಲೆ ಪತ್ರಗಳನ್ನು ಸೃಷ್ಟಿಸಿ ಸರಕಾರದ ಕಣ್ಣಿಗೆ ಮಣ್ಣೆರಚಲು ಪ್ರಯತ್ನಿಸಿದ್ದಕ್ಕಾಗಿ ಜೈಲಿಗೆ ಕಳುಹಿಸಿದ. ನಂತರ ಅವನು ಲೆಬನಾನಿನ ಪ್ರಮುಖ ಫೈನಾನ್ಸಿಯರ್‌ನನ್ನು ವಿನಿಮಯ ನಿಯಂತ್ರಣದ ನಿಬಂಧನೆಗಳನ್ನು ಉಲ್ಲಂಘಿಸಿದ್ದಕ್ಕಾಗಿ ಬಂಧಿಸಿದ. ಲಂಚ ಸ್ವೀಕರಿಸುತ್ತಿದ್ದ ಪೋಲೀಸ್ ಮುಖ್ಯಾಧಿಕಾರಿಯನ್ನು ಸಾಕ್ಷ್ಯಾಧಾರಗಳ ಸಮೇತ ಹಿಡಿದು, ನಾಲ್ಕು ತಿಂಗಳುಗಳ ವಿಚಾರಣೆಯ ನಂತರ ಒಂದೂವರೆ ವರ್ಷ ಜೈಲಿಗೆ ಕಳುಹಿಸಿದ.

ಈ ಘಟನೆಯಿಂದ ಇಗ್ನ್ಯಾಶಿಯಸ್ ಪ್ರಮುಖ ಪತ್ರಿಕೆ 'ಲಾಗೋಸ್ ಟೈಮ್ಸ್'ನ ಮುಖ ಪುಟದಲ್ಲಿ ರಾರಾಜಿಸಿದ. ಆ ಪತ್ರಿಕೆ ಅವನನ್ನು "ರಾಜಕೀಯ ಕೊಳೆ ಹೊಡೆದೋಡಿಸುವ ಇಗ್ನ್ಯಾಶಿಯಸ್, 'ಮಿ.ಕ್ಲೀನ್' " ಎಂದು ವರ್ಣಿಸಿತು. ಒಬ್ಬರಾದ ನಂತರ ಒಬ್ಬರು ತಪ್ಪಿತಸ್ಥರು, ಬಂಧನಕ್ಕೊಳಗಾದಂತೆ, ಇಗ್ನ್ಯಾಶಿಯಸ್‌ನ ವರ್ಚಸ್ಸು ಏರುತ್ತಲೇ ಹೋಯಿತು. ಇಗ್ನ್ಯಾಶಿಯಸ್ ರಾಷ್ಟ್ರದ ಮುಖ್ಯಸ್ಥ ಜನರಲ್ ಒಟೋಬಿಯನ್ನು ಕೂಡ ತನ್ನ ಪರಿಶೀಲನೆಯಿಂದ ಹೊರತಾಗಿಟ್ಟಿರಲಿಲ್ಲವೆಂಬ ಸುದ್ದಿ ಬಲವಾಗಿ ಹಬ್ಬಿತು.

ಈಗ ಕೇವಲ ಇಗ್ನ್ಯಾಶಿಯಸ್ ಒಬ್ಬನೇ ಹತ್ತು ಕೋಟಿ ಡಾಲರುಗಳಿಗಿಂತಲೂ ಹೆಚ್ಚಿನ ಮೌಲ್ಯದ ವಿದೇಶಿ ಒಪ್ಪಂದಗಳನ್ನು ಪರೀಕ್ಷಿಸಿ, ಪರಿಶೀಲಿಸಿ, ಪಾಸು ಮಾಡುವ ಅಧಿಕಾರ ಹೊಂದಿದ್ದ. ಅವನು ತೆಗೆದುಕೊಳ್ಳುವ

ಪ್ರತಿಯೊಂದು ನಿರ್ಣಯವೂ, ಅವನ ವಿರೋಧಿಗಳಿಂದ ತೀವ್ರವಾದ ಪರೀಕ್ಷೆಗೆ ಒಳಪಡುತ್ತಿದ್ದರೂ, ಅವನ ಹೆಸರಿಗೆ ಯಾವುದೇ ಕಳಂಕ ತಗುಲಲಿಲ್ಲ.

ಇಗ್ನ್ಯಾಶಿಯಸ್ ಆರ್ಥಿಕ ಮಂತ್ರಿಯಾಗಿ ಎರಡನೇ ವರ್ಷವೂ ಅಧಿಕಾರದಲ್ಲಿ ಮುಂದುವರಿದಾಗ, ಮೊದಲು ಮೂಗು ಮುರಿದ ಸಿನಿಕರು ಕೂಡ ಈಗ ಅವನ ಸಾಧನೆಗಳನ್ನು ಗುರುತಿಸತೊಡಗಿದರು. ಜನರಲ್ ಒಟೋಬಿ ಕೂಡ ಇಗ್ನ್ಯಾಶಿಯಸ್ಸನ ದಕ್ಷತೆಯಲ್ಲಿ ವಿಶ್ವಾಸ ತಳೆದಿದ್ದರಿಂದಲೇ ಆತನನ್ನು ಸಮಾಲೋಚನೆಗಾಗಿ ಕರೆಸಿದ್ದ.

ತನ್ನ ಸ್ಟಡಿ ರೂಮಿನಲ್ಲಿ ಆತನನ್ನು ಸ್ವಾಗತಿಸಿದ ಜನರಲ್ ಒಟೋಬಿ ಆರಂಭಿಸಿದ:

"ಇಗ್ನ್ಯಾಶಿಯಸ್, ನಾನು ಈಗಷ್ಟೇ ಇತ್ತೀಚಿನ ಬಜೆಟ್ ರಿಪೋರ್ಟ್ ಪರಿಶೀಲಿಸಿದ್ದೇನೆ. ನಿನ್ನ ಅಭಿಪ್ರಾಯದ ಪ್ರಕಾರ ಸಾರ್ವಜನಿಕ ಕಂದಾಯ ಇಲಾಖೆಗೆ ಪ್ರತಿ ವರ್ಷವೂ ವಿದೇಶೀ ಕಂಪನಿಗಳು ಮಧ್ಯವರ್ತಿಗಳಿಗೆ ಕೊಡುವ ಲಂಚದ ರೂಪದಲ್ಲಿ ಲಕ್ಷಾಂತರ ಡಾಲರಗಳಷ್ಟು ಹಣ ಹಾನಿಯಾಗುತ್ತಿದೆ. ನನಗೂ ರಿಪೋರ್ಟ್ ಪರಿಶೀಲಿಸಿದ ನಂತರ ಅದು ಸರಿಯೆನಿಸಿತು. ಈ ಹಣ ಯಾರ ಜೇಬಿಗೆ ಹೋಗುತ್ತಿದೆ ಎನ್ನುವುದೇನಾದರೂ ನಿನಗೆ ತಿಳಿದಿದೆಯೇ? ನನಗೆ ತಿಳಿಯಬೇಕಾಗಿದ್ದುದು ಅದೇ."

ಇಗ್ನ್ಯಾಶಿಯಸ್ ನೇರವಾಗಿ ಕುಳಿತುಕೊಂಡ. ಅವನ ದೃಷ್ಟಿ ರಾಷ್ಟ್ರ ಪ್ರಮುಖನ ಮೇಲಿದ್ದುದು ಕೊಂಚವೂ ಅತ್ತಿತ್ತ ಸರಿಯಲಿಲ್ಲ.

"ನನ್ನ ಸಂದೇಹದ ಪ್ರಕಾರ ಆ ಹಣದ ಬಹುಭಾಗವನ್ನು ಸ್ವಿಸ್ ಬ್ಯಾಂಕ್‌ಗಳ ಖಾತೆಗಳಲ್ಲಿ ಜಮಾ ಮಾಡಲಾಗುತ್ತಿದೆ. ಆದರೆ ನಾನು ಸದ್ಯಕ್ಕೆ ಅದನ್ನು ರುಜುವಾತು ಮಾಡಲು ಅಸಮರ್ಥ."

"ಹಾಗಿದ್ದರೆ, ಅದನ್ನು ರುಜುವಾತು ಮಾಡಲು ನಿನಗೆ ಯಾವ ರೀತಿಯ ಅಧಿಕಾರ ಬೇಕಿದ್ದರೂ ನಾನು ಕೊಡುತ್ತೇನೆ. ಆ ದ್ರೋಹಿಗಳನ್ನು ಬಯಲಿಗೆಳೆಯಲು ನೀನು ಆ ಅಧಿಕಾರವನ್ನು ಯಾವ ರೀತಿ ಬೇಕಾದರೂ ಉಪಯೋಗಿಸಬಹುದು. ನನ್ನ ಸಂಪುಟದಲ್ಲಿರುವ ಈಗಿನ ಮತ್ತು ಹಿಂದೆ ಇದ್ದ ಪ್ರತಿಯೊಬ್ಬ ವ್ಯಕ್ತಿಯನ್ನೂ ಶೋಧಿಸಲು ಪ್ರಾರಂಭಿಸು. ನಿನಗೆ ಸಂಶಯ ಬಂದ ವ್ಯಕ್ತಿ ಯಾವುದೇ ಮಟ್ಟದ ಅಧಿಕಾರಿಯಾಗಿರಲಿ, ಹಿಂಜರಿಯಬೇಡ," ಎಂದ ಒಟೋಬಿ.

"ಇಂತಹುದೊಂದು ಕೆಲಸದಲ್ಲಿ ನಾನು ಯಶಸ್ವಿಯಾಗಬೇಕಾದರೆ, ನಿಮ್ಮಿಂದ ಸಹಿ ಮಾಡಲ್ಪಟ್ಟ ವಿಶೇಷ ಅಧಿಕಾರಪತ್ರ ಬೇಕಾಗುತ್ತವೆ, ಜನರಲ್....."

"ಅಂತಹ ಪತ್ರ ಇಂದು ಸಂಜೆ ಆರು ಗಂಟೆಗೆ ನಿನ್ನ ಮೇಜಿನ ಮೇಲಿರುತ್ತದೆ," ಜನರಲ್ ಒಟೋಬಿ ನುಡಿದ.

"ಮತ್ತು ನಾನು ವಿದೇಶಗಳಿಗೆ ಹೋದಾಗ ಅಲ್ಲಿ ಬೇಕಾಗಬಹುದಾದ ಪೂರ್ಣಾಧಿಕಾರವುಳ್ಳ ರಾಯಭಾರಿ ದರ್ಜೆ..."

"ಸರಿ."

"ಧನ್ಯವಾದಗಳು" ಎಂದು ನುಡಿದ ಇಗ್ನ್ಯಾಶಿಯಸ್ ಮಾತು ಕತೆ ಮುಗಿಯಿತೆನ್ನುವಂತೆ ಕುರ್ಚಿಯಿಂದ ಎದ್ದ.

ಇಗ್ನ್ಯಾಶಿಯಸ್‌ನ ಜೊತೆಗೇ ಎದ್ದು ಬಂದ ಜನರಲ್ ಒಟೋಬಿ, ಬಾಗಿಲ ಬಳಿ ಬಂದ ನಂತರ, "ನಿನಗೂ ನನಗಿರುವಷ್ಟೇ ಶತ್ರುಗಳು ಇರಬಹುದಾದ್ದರಿಂದ ಇದು ನಿನಗೆ ಬೇಕಾಗಬಹುದು" ಎನ್ನುತ್ತಾ ಸಣ್ಣ ಆಟೋಮ್ಯಾಟಿಕ್ ಪಿಸ್ತೂಲೊಂದನ್ನು ಕೊಟ್ಟ.

ಇಗ್ನ್ಯಾಶಿಯಸ್ ಆ ಪಿಸ್ತೂಲನ್ನು ತನ್ನ ಜೇಬಿನಲ್ಲಿಟ್ಟುಕೊಂಡು, ಮೆಲು ಧ್ವನಿಯಲ್ಲಿ ಧನ್ಯವಾದಗಳನ್ನರ್ಪಿಸಿದ. ನಂತರ ಒಂದು ಮಾತನ್ನೂ ಆಡದೆ, ನಾಯಕನಿಂದ ಬೀಳ್ಕೊಂಡು ತನ್ನ ಕಾರ್ಯಾಲಯಕ್ಕೆ ವಾಪಸು ಬಂದ.

'ಸ್ಟೇಟ್ ಬ್ಯಾಂಕ್ ಆಫ್ ನೈಜೀರಿಯಾ'ದ ಚೇರ್‌ಮನ್ನನ ಅರಿವಿಗೆ ಬಾರದಂತೆ ಮತ್ತು

ಯಾವುದೇ ಅಧಿಕಾರಿಗಳಿಂದ ಅಡೆತಡೆಯಿಲ್ಲದೆ, ಇಗ್ನ್ಯಾಶಿಯಸ್ ತಾನು ಕೈಗೊಂಡ ಕಾರ್ಯವನ್ನು ಉತ್ಸುಕತೆಯಿಂದ ಮಾಡತೊಡಗಿದ. ತಾನು ಕಂಡುಕೊಂಡ ವಿಷಯಗಳನ್ನು ಯಾರೊಂದಿಗೂ ಚರ್ಚಿಸಲಿಲ್ಲ. ಮೂರು ತಿಂಗಳುಗಳ ನಂತರ ಅವನು ದಾಳಿಗೆ ಸಿದ್ಧನಾದ.

ಬಹು ಜನ ನೈಜೀರಿಯನ್ನರು ರಜೆಯ ಮೇಲೆ ಹೋಗಿರುತ್ತಿದ್ದುದರಿಂದ ಅವನ ಗೈರು ಹಾಜರಿ ಅಷ್ಟೇನೂ ಗಮನಾರ್ಹವಾಗಿ ಎದ್ದು ಕಾಣುತ್ತಿರಲಿಲ್ಲ. ಆದ್ದರಿಂದ ಆತ ತನ್ನ ಅನಿಯೋಜಿತ ವಿದೇಶ ಪ್ರವಾಸಕ್ಕೆ ಅಗಸ್ಟ್ ತಿಂಗಳನ್ನು ಆರಿಸಿಕೊಂಡ.

ಇಗ್ನ್ಯಾಶಿಯಸ್ ತನಗೆ, ತನ್ನ ಹೆಂಡತಿ ಮತ್ತು ಇಬ್ಬರು ಮಕ್ಕಳಿಗೆ ಓರ್ಲಾಂಡೋಗೆ ವಿಮಾನದ ಟಿಕೆಟ್‌ಗಳನ್ನು ಬುಕ್ ಮಾಡಲು, ತನ್ನ ಕಾರ್ಯದರ್ಶಿಗೆ ಹೇಳಿ ಅದಕ್ಕೆ ತಗಲುವ ಮೊತ್ತವನ್ನು ತನ್ನ ವೈಯಕ್ತಿಕ ಬ್ಯಾಂಕ್ ಅಕೌಂಟಿನಿಂದ ತೆಗೆದುಕೊಳ್ಳುವಂತೆ ಸೂಚಿಸಿದ.

ಫ್ಲೋರಿಡಾಗೆ ಬಂದಿಳಿದ ಇಗ್ನ್ಯಾಶಿಯಸ್ಸನ ಕುಟುಂಬ ಸ್ಥಳೀಯ ಮ್ಯಾರಿಯಟ್ ಹೋಟೆಲ್‌ನಲ್ಲಿ ತಂಗಿತು. ಅಲ್ಲಿ ತಾನು ಕೆಲವು ದಿನಗಳವರೆಗೆ ವ್ಯಾಪಾರ ಸಂಬಂಧವಾಗಿ ನ್ಯೂಯಾರ್ಕಿನಲ್ಲಿ ಕಳೆಯಬೇಕಾಗಿ ಬಂದಿದೆಯೆಂದೂ ನಂತರ ಅವರನ್ನು ಭೇಟಿಯಾಗಿ ಉಳಿದ ರಜೆಯನ್ನು ಅವರೊಂದಿಗೆ ಕಳೆಯುವುದಾಗಿಯೂ ತನ್ನ ಕುಟುಂಬದವರಿಗೆ ಹೇಳಿ ಮರುದಿನ ಬೆಳಿಗ್ಗೆ ನ್ಯೂಯಾರ್ಕಿಗೆ ಹೋಗುವ ವಿಮಾನವನ್ನೇರಿದ. ಲಾಗಾರ್ಡಿಯಾದಿಂದ ಕೆನಡಿ ಏರ್‌ಪೋರ್ಟ್‌ವರೆಗೆ ಕೆಲವೇ ನಿಮಿಷಗಳ ಟ್ಯಾಕ್ಸಿ ಸವಾರಿ ಮಾಡಿ, ಅಲ್ಲಿ ಬಟ್ಟೆ ಬದಲಾಯಿಸಿ, ನಗದು ಹಣ ಕೊಟ್ಟು, ರಿಟರ್ನ್ ಟೂರಿಸ್ಟ್ ಟಿಕೆಟ್ ತೆಗೆದುಕೊಂಡು ಸ್ವಿಸ್ ಏರ್ ಫ್ಲೈಟ್‌ನಲ್ಲಿ ಜಿನೀವಾಗೆ ಹಾರಿದ.

ಜಿನೀವಾಗೆ ಬಂದಿಳಿದ ಇಗ್ನ್ಯಾಶಿಯಸ್, ಅಲ್ಲಿನ ಅಪ್ರಸಿದ್ಧ ಹೋಟೆಲೊಂದರಲ್ಲಿ ತಂಗಿ, ಎಂಟು ಗಂಟೆಗಳವರೆಗೆ ಗಾಢವಾಗಿ ನಿದ್ದೆ ಹೋದ. ಮರುದಿನ ಬೆಳಗಿನ ಉಪಾಹಾರದ ನಂತರ ತಾನು ಮೊದಲೆ ತಯಾರಿಸಿಕೊಂಡ ಬ್ಯಾಂಕುಗಳ ಪಟ್ಟಿಯೊಂದನ್ನು ಪರಿಶೀಲಿಸತೊಡಗಿದ.

ಆತ ತನ್ನ ಕಾರ್ಯವನ್ನು ತಾನಿಳಿದುಕೊಂಡಿದ್ದ ಹೋಟೆಲಿಗೆ ಸಮೀಪದಲ್ಲಿಯೇ ಇದ್ದ ಗೆರ್ಬರ್ ಎತ್‌ಸ್ಸೈ ಬ್ಯಾಂಕ್‌ನಿಂದ ಪ್ರಾರಂಭಿಸಲು ನಿರ್ಧರಿಸಿದ. ರೂಮ್ ಸರ್ವೀಸಿನವನಿಂದ ಟೆಲಿಫೋನ್ ನಂಬರನ್ನು ಖಚಿತ ಪಡಿಸಿಕೊಂಡು ತಾನಾರೆಂಬುದನ್ನು ತಿಳಿಯಪಡಿ



ಸುತ್ತಾ ಫೋನ್ ಮಾಡಿದ. ಬ್ಯಾಂಕ್‌ನ ಚೇರ್‌ಮನ್ ಇಗ್ನ್ಯಾಶಿಯಸ್ಸನನ್ನು ಹನ್ನೆರಡು ಗಂಟೆಗೆ ನೋಡಲು ಒಪ್ಪಿಕೊಂಡ.

ಕೈಯಲ್ಲಿ, ಬಳಸಿ ಬಳಸಿ ಹಳೆಯದಾಗಿದ್ದ ಬ್ರಿಫ್‌ಕೇಸ್ ಒಂದನ್ನು ಮಾತ್ರ ಹಿಡಿದುಕೊಂಡು ನಿಗದಿತ ಸಮಯಕ್ಕೆ ಕೆಲವು ನಿಮಿಷ ಮೊದಲೇ ಬ್ಯಾಂಕಿನಲ್ಲಿ ಕಾಲಿಟ್ಟ ಇವನನ್ನು ಸ್ವಾಗತಿಸಲು ಬೂದು ಬಣ್ಣದ ಸೂಟ್, ಬಿಳಿ ಶರ್ಟ್ ಮತ್ತು ಬೂದುಬಣ್ಣದ ರೇಷ್ಮೆ ಟೈ ಕಟ್ಟಿಕೊಂಡು ನಿಂತಿದ್ದ ಯುವಕನೊಬ್ಬ, ಬಾಗಿ ವಂದಿಸಿ, ತಾನು ಚೇರ್‌ಮನ್ನರ ಪಿ.ಎ. ಎಂದು ಪರಿಚಯಿಸಿಕೊಂಡ. ಆ ಯುವಕ ಇಗ್ನ್ಯಾಶಿಯಸ್‌ನನ್ನು ಚೇರ್‌ಮನ್ನರ ಆಫೀಸಿನ ಕಡೆಗೆ ಕರೆದೊಯ್ದು. ಲಿಫ್ಟ್‌ನಲ್ಲಿ ಹನ್ನೊಂದನೇ ಅಂತಸ್ತು ಸೇರಿಕೊಳ್ಳುವವರೆಗೆ ಅವನು ಒಂದು ಮಾತೂ ಆಡಲಿಲ್ಲ. ಚೇಂಬರಿನ ಬಾಗಿಲನ್ನು ಮೃದುವಾಗಿ ತಟ್ಟಿದ ಆ ಯುವಕ, ''ನೈಜೇರಿಯಾದ ಫೈನಾನ್ಸ್ ಮಿನಿಸ್ಟರ್ ಸರ್,'' ಎನ್ನುತ್ತಾ ಬಾಗಿಲು ತಳ್ಳಿದ.

ಚೇರ್‌ಮನ್ ತನ್ನ ಆಸನದಿಂದ ಎದ್ದು ಅತಿಥಿಯನ್ನು ಸ್ವಾಗತಿಸಿದ. ಆತ ಕೂಡ ಬೂದು ಬಣ್ಣದ ಸೂಟು, ಬಿಳಿ ಶರ್ಟ್ ಮತ್ತು ಬೂದು ಬಣ್ಣದ ರೇಷ್ಮೆ ಟೈ ಕಟ್ಟಿಕೊಂಡಿರುವುದನ್ನು ಇಗ್ನ್ಯಾಶಿಯಸ್ ಗಮನಿಸಿದ.

''ಗುಡ್ ಮಾರ್ನಿಂಗ್ ಮಿನಿಸ್ಟರ್,'' ಎನ್ನುತ್ತಾ ಚೇರ್‌ಮನ್ ಆ ರೂಮಿನ ಒಂದು ಮೂಲೆಯಲ್ಲಿ ಹಾಕಲಾಗಿದ್ದ ಸುಖಾಸನಗಳ ಬಳಿ ಕರೆದೊಯ್ದು ಇಗ್ನ್ಯಾಶಿಯಸ್‌ನನ್ನು ಕೂಡಿಸಿದ. ತಾನೂ ಅವನ ಎದುರಿಗೆ ಕುಳಿತುಕೊಳ್ಳುತ್ತಾ, ''ನೀವು ಕುಡಿಯುವ ಹಾಗಿದ್ದರೆ ಇಬ್ಬರಿಗೂ ಕಾಫಿ ಹೇಳುತ್ತೇನೆ,'' ಎಂದ.

ಇಗ್ನ್ಯಾಶಿಯಸ್ ಸಮ್ಮತಿಸೂಚಕವಾಗಿ ತಲೆಯಾಡಿಸಿ, ತನ್ನ ಸವಕಲು ಬ್ರೀಫ್‌ಕೇಸ್ ಅನ್ನು ತಾನು ಕುಳಿತಿದ್ದ ಕುರ್ಚಿಯ ಪಕ್ಕದಲ್ಲಿ ನೆಲದ ಮೇಲಿಟ್ಟ. ಕೊಂಚ ಹೊತ್ತು ಜಿನೀವಾದ ಸುಂದರ ಕಾರಂಜಿಯ ಬಗೆಗೆ ಮಾತಾಡಿದ. ಯುವತಿಯೊಬ್ಬಳು ಮೂವರಿಗೂ ಕಾಫಿ ತಂದಿಟ್ಟು ಹೋದಳು.

ಕಾಫಿ ಕುಡಿದ ನಂತರ ಇಗ್ನ್ಯಾಶಿಯಸ್ ವ್ಯವಹಾರಕ್ಕಿಳಿದ.

''ನಮ್ಮ ರಾಷ್ಟ್ರದ ಮುಖ್ಯಸ್ಥ ನನ್ನನ್ನು ನಿಮ್ಮ ಬ್ಯಾಂಕಿಗೆ ಒಂದು ಅಸಾಧಾರಣ ಬೇಡಿಕೆಯೊಂದಿಗೆ ಕಳಿಸಿದ್ದಾರೆ'' ಅವನು ಆರಂಭಿಸಿದ. ಚೇರ್ಮನ್‌ನ ಮುಖದ ಮೇಲಾಗಲಿ, ಅವನ ಅಸಿಸ್ಟೆಂಟ್‌ನ ಮುಖದ ಮೇಲಾಗಲಿ ಆಶ್ಚರ್ಯದ ಕೊಂಚ ಸುಳಿವೂ ಕಂಡು ಬರಲಿಲ್ಲ. ಇಗ್ನ್ಯಾಶಿಯಸ್ ಮುಂದುವರಿಸಿದ: ''ಅವರು, ನೈಜೇರಿಯಾದ ಪ್ರಜೆಗಳು ನಿಮ್ಮ



ಬ್ಯಾಂಕಿನಲ್ಲಿ ಹೊಂದಿರುವ ಅಕೌಂಟ್‌ಗಳ ನಂಬರ್‌ಗಳನ್ನು ತಿಳಿದುಕೊಳ್ಳುವ ಗುರುತರ ಹೊಣೆಯನ್ನು ನನ್ನ ಮೇಲೆ ಹೊರಿಸಿದ್ದಾರೆ.''

ಇದನ್ನು ಕೇಳಿದ ಚೇರ್‌ಮನ್ನನ ತುಟಿಗಳು ಅಲುಗಾಡಿದವು: ''ನನಗೆ ಅವುಗಳನ್ನು ಬಯಲು ಮಾಡುವ ಸ್ವಾತಂತ್ರ್ಯ ಸ್ವಾತಂತ್ರ್ಯವಿಲ್ಲವೆಂದು...''

''ನನ್ನ ಮಾತನ್ನು ಪೂರ್ತಿಗೊಳಿಸಲು ಬಿಡಿ. ಮೊದಲನೆಯದಾಗಿ ನಾನು ನನ್ನ ಸರಕಾರದ ಸಂಪೂರ್ಣ ಅಥಾರಿಟಿಯೊಂದಿಗೆ ಬಂದಿದ್ದೇನೆ'' ಎಂದು ಹೇಳಿ ನಂತರ ಮಾತು ನಿಲ್ಲಿಸಿದ ಇಗ್ನ್ಯಾಶಿಯಸ್ ತನ್ನ ಕೋಟಿನ ಒಳ ಜೇಬಿನಿಂದ, ಉದ್ದನೆಯ ಕವರನ್ನು ಹೊರದೆಗೆದು ಚೇರ್‌ಮನ್ನನ ಕೈಗೆ ಕೊಟ್ಟ. ಆ ಕವರನ್ನು ತೆಗೆದುಕೊಂಡ ಚೇರ್‌ಮನ್ ಅದರೊಳಗಿನ ಪತ್ರವನ್ನು ತೆಗೆದು ನಿಧಾನವಾಗಿ ಓದತೊಡಗಿದ.

ಓದುವುದು ಮುಗಿದ ನಂತರ ಆತ ತನ್ನ ಗಂಟಲು ಸರಿಪಡಿಸಿಕೊಂಡು, ''ಮಹನೀಯರೆ, ಈ ಪತ್ರಕ್ಕೆ ನನ್ನ ದೇಶದಲ್ಲಿ ಬೆಲೆಯಿಲ್ಲ ಎಂದು ಹೇಳಲು ನನಗೆ ಸಂಕೋಚವಾಗುತ್ತದೆ'' ಈ ಎನ್ನುತ್ತಾ ಆ ಪತ್ರವನ್ನು ಕವರಿನಲ್ಲಿಟ್ಟು ಅದನ್ನು ಇಗ್ನ್ಯಾಶಿಯಸ್ಸನಿಗೆ ಮರಳಿ ಕೊಟ್ಟ. ''ನೀವು ನಿಮ್ಮ ರಾಷ್ಟ್ರದ ಮುಖ್ಯಸ್ಥನ ಪೂರ್ಣ ಸಹಕಾರದೊಂದಿಗೆ, ಇಲ್ಲಿಗೆ ರಾಯಭಾರಿ ಮತ್ತು ಮಂತ್ರಿಯಾಗಿ ಬಂದಿದ್ದೀರೆಂಬುದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಅದಕ್ಕೋಸ್ಕರ ನಮ್ಮ ಬ್ಯಾಂಕಿನ ಗೌಪ್ಯ ಕಾಯುವ ನಿಯಮವನ್ನು ಮುರಿಯುವಂತಿಲ್ಲ. ನಿಮಗೆ ಸಹಾಯ ಮಾಡಲಾಗದುದಕ್ಕೆ ನಾನು ವಿಷಾದಿಸುತ್ತೇನೆ. ಏನು ಮಾಡುವುದು? ಬ್ಯಾಂಕಿನ ನಿಯಮಗಳೇ ಹಾಗಿವೆ'' ಎನ್ನುತ್ತಾ ಚೇರ್‌ಮನ್ ಮೀಟಿಂಗ್ ಕೊನೆಗೊಂಡಿತೆನ್ನುವಂತೆ ಎದ್ದ; ಆದರೆ ಇಗ್ನ್ಯಾಶಿಯಸ್ ಚೇರ್‌ಮನ್ನನಿಗೆ ಕುಳಿತುಕೊಳ್ಳುವಂತೆ ಸನ್ನೆ ಮಾಡುತ್ತಾ ಮುಂದುವರಿಸಿದ:

''ನನ್ನ ರಾಷ್ಟ್ರದ ಮುಖ್ಯಸ್ಥರು ಇನ್ನು ಮುಂದೆ ನನ್ನ ರಾಷ್ಟ್ರ ಮತ್ತು ಸ್ವಿಟ್ಜರ್‌ಲ್ಯಾಂಡಿನ ಮಧ್ಯೆ ನಡೆಯುವ ವ್ಯವಹಾರಗಳಿಗೆ ನಿಮ್ಮ ಬ್ಯಾಂಕ್‌ನ ಮೂಲಕ ಮಧ್ಯವರ್ತಿಯಾಗಿ ವರ್ತಿಸಲು ನನಗೆ ಪೂರ್ಣ ಅಧಿಕಾರ ಕೊಟ್ಟು ನಿಮ್ಮ ಬ್ಯಾಂಕಿಗೆ ಕಳಿಸಿದ್ದಾರೆ,'' ಧ್ವನಿಯನ್ನು ಮೃದುಗೊಳಿಸುತ್ತಾ ನುಡಿದ ಇಗ್ನ್ಯಾಶಿಯಸ್.

''ನೀವು ನಮ್ಮ ಮೇಲಿಟ್ಟಿರುವ ವಿಶ್ವಾಸಕ್ಕಾಗಿ ತುಂಬಾ ಸಂತೋಷ. ಆದರೂ, ನಾವು ನಮ್ಮ ನಿಲುವನ್ನು ಬದಲಾಯಿಸಲಾಗುವುದಿಲ್ಲ. ನಮ್ಮ ಗ್ರಾಹಕರ ಗೌಪ್ಯ ಕಾಪಾಡುವುದು ನಮ್ಮ ಧರ್ಮ,'' ಚೇರ್‌ಮನ್ ಉತ್ತರಿಸಿದ.

ಇಗ್ನ್ಯಾಶಿಯಸ್ ಗೊಂದಲಗೊಳ್ಳಲಿಲ್ಲ. ''ಹಾಗಿದ್ದಮೇಲೆ ನಮ್ಮ ರಾಷ್ಟ್ರದ ವಿನಂತಿಯ ಮೇರೆಗೂ ನಿಮ್ಮ ಬ್ಯಾಂಕ್ ಸಹಕಾರ ನೀಡಲು ನಿರಾಕರಿಸಿದ್ದನ್ನು, ಸ್ವಿಸ್ ಸರಕಾರದ ವಿದೇಶಾಂಗ ಕಾರ್ಯಾಲಯಕ್ಕೆ ತಿಳಿಸಲು ಜನೀವಾದಲ್ಲಿನ ನಮ್ಮ ರಾಯಭಾರಿಗೆ ಹೇಳಲಾಗುತ್ತದೆ ಮಿ.ಗೆರ್ಬರ್. ಆದರೆ ಈ ಸಂದಿಗ್ಧ ಪರಿಸ್ಥಿತಿಯಿಂದ ನೀವು ತಪ್ಪಿಸಿಕೊಳ್ಳಲೂ ಬಹುದು. ಅದು ತುಂಬಾ ಸರಳ. ನಮ್ಮ ದೇಶದ ಪ್ರಜೆಗಳು ನಿಮ್ಮ ಬ್ಯಾಂಕಿನಲ್ಲಿ ಹೊಂದಿರುವ ಅಕೌಂಟುಗಳ ನಂಬರು ಮತ್ತು ಹಣದ ಮೊತ್ತ ತಿಳಿಸಿದರೆ ಸಾಕು. ನಾವು ಈ ಮಾಹಿತಿಯ ಮೂಲವನ್ನು ಬಹಿರಂಗಪಡಿಸುವುದಿಲ್ಲವೆಂದು ನಿಮಗೆ ನಾನು ಭರವಸೆ ಕೊಡುತ್ತೇನೆ.''

''ಆದರೆ, ನಮ್ಮ ಸರಕಾರ ನಿಮ್ಮ ರಾಯಭಾರಿಗೆ, ಸ್ವಿಸ್ ಕಾನೂನಿನ ಪ್ರಕಾರ ಇಂತಹ ವಿಷಯದಲ್ಲಿ ಕೈ ಹಾಕಲು ಬರುವುದಿಲ್ಲವೆಂದು ಖಂಡಿತವಾಗಿಯೂ ಹೇಳುತ್ತದೆ ಮಿ.ಇಗ್ನ್ಯಾಶಿಯಸ್.''

''ಹಾಗಿದ್ದರೆ, ನೀವು ಈ ವಿವರಗಳನ್ನು ಕೊಡುವವರೆಗೆ, ಸ್ವಿಜಸ್‌ಲ್ಯಾಂಡಿನೊಂದಿಗೆ,

ಯಾವುದೇ ವಿಧವಾದ ವ್ಯಾಪಾರ ವಹಿವಾಟುಗಳನ್ನು ನಡೆಸದಿರುವಂತೆ ನಮ್ಮ ಸರಕಾರಕ್ಕೆ ಸೂಚನೆ ಕೊಡುತ್ತೇನೆ.''

''ಅದು ನಿಮ್ಮ ಹಕ್ಕು, ಮಂತ್ರಿಗಳೆ,'' ಅಲುಗಾಡದೆ ಚೇರ್‌ಮನ್ ಉತ್ತರಿಸಿದ.

''ಮತ್ತು ನಿಮ್ಮ ದೇಶದವರು ನೈಜೇರಿಯದಲ್ಲಿ ಇತ್ತೀಚೆಗೆ ಮಾಡಿಕೊಂಡಿರುವ ಪ್ರತಿಯೊಂದು ಒಪ್ಪಂದವನ್ನೂ ನಾವು ಪುನಃ ಪರಿಶೀಲಿಸಬೇಕಾಗುತ್ತದೆ.''

''ಅಂತಹ ನಿರ್ಣಯ ತೆಗೆದುಕೊಳ್ಳುವುದು ಕೊಂಚ ದುಡುಕಿನದೆಂದು ನಿಮಗನ್ನಿಸುವುದಿಲ್ಲವೆ?''

''ಅಂತಹ ನಿರ್ಧಾರ ತೆಗೆದುಕೊಳ್ಳಬೇಕಾಗಿ ಬಂದರೆ ನಾನು ಹಿಂದಡಿಯಿಡುವುದಿಲ್ಲವೆಂದು ನಿಮಗೆ ಒತ್ತಿ ಹೇಳುತ್ತೇನೆ ಮಿ.ಗೆರ್ಬರ್ ಒಂದು ವೇಳೆ ಆ ಹೆಸರುಗಳನ್ನು ತಿಳಿದುಕೊಳ್ಳುವ ನನ್ನ ಪ್ರಯತ್ನದಲ್ಲಿ ನಿಮ್ಮ ದೇಶದೊಂದಿಗೆ ವಿರಸ ಕಟ್ಟಿಕೊಳ್ಳಬೇಕಾಗಿಬಂದರೂ ನಾನು ಹಿಂಜರಿಯುವುದಿಲ್ಲ'' ಇಗ್ನ್ಯಾಶಿಯಸ್ ನುಡಿದ.

''ಇರಬಹುದು ಮಂತ್ರಿಗಳೆ, ಹೇಗಾದರೂ ಆಗಲಿ, ಗ್ರಾಹಕರ ಗೌಪ್ಯ ಕಾಪಾಡುವ ನಮ್ಮ ನಿಲುವನ್ನು ಬದಲಾಯಿಸುವುದಿಲ್ಲ'' ಚೇರ್‌ಮನ್ ಉತ್ತರಿಸಿದ.

''ಹಾಗಿದ್ದ ಮೇಲೆ ನಾನು ಇವತ್ತೇ ನಮ್ಮ ರಾಯಭಾರಿಗೆ ಜನೀವಾದಲ್ಲಿ ನಮ್ಮ ರಾಯಭಾರಿ ಕಚೇರಿಯನ್ನು ಮುಚ್ಚಲು ಸೂಚನೆ ಕೊಡುತ್ತೇನೆ ಮತ್ತು ಲಾಗೋಸ್‌ನಲ್ಲಿನ ನಿಮ್ಮ ರಾಯಭಾರಿಯನ್ನು ದೇಶದಿಂದ ಹೊರಕ್ಕೆ ಕಳಿಸಬೇಕೆಂದು ಶಿಫಾರಸು ಮಾಡುತ್ತೇನೆ.''

ಮೊದಲ' ಬಾರಿಗೆ ಚೇರ್‌ಮನ್ ತನ್ನ ಹುಬ್ಬೇರಿಸಿದ.

''ಮತ್ತೂ ಏನೆಂದರೆ'' ಇಗ್ನ್ಯಾಶಿಯಸ್ ಮುಂದುವರಿಸಿದ, ''ನಾನು ಲಂಡನ್ನಿನಲ್ಲೊಂದು ಪತ್ರಿಕಾಗೋಷ್ಠಿಯನ್ನು ಏರ್ಪಡಿಸಿ



ನಿಮ್ಮ ಬ್ಯಾಂಕಿನ ವರ್ತನೆಯಿಂದ ನಮ್ಮ ರಾಷ್ಟ್ರದ ಮುಖ್ಯಸ್ಥ ಹೇಗೆ ಅಸಂತುಷ್ಟನಾಗಿದ್ದಾನೆಂಬುದನ್ನು ಹೇಳುತ್ತೇನೆ. ಆ ರೀತಿಯ ಪ್ರಚಾರದಿಂದ ನಿಮ್ಮ ಗ್ರಾಹಕರಲ್ಲಿ ಬಹುಜನರು ತಮ್ಮ ಖಾತೆಗಳನ್ನು ಮುಚ್ಚಲು ಬಯಸುತ್ತಾರೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಉಳಿದವರು, ನಿಮ್ಮನ್ನು ಸುರಕ್ಷಿತ ಎಂದು ಭಾವಿಸಿದವರು, ಈ ಅಪಪ್ರಚಾರದಿಂದಾಗಿ ಬೇರೆ ಕಡೆ ತಮ್ಮ ವ್ಯವಹಾರ ಪ್ರಾರಂಭಿಸಲೂಬಹುದು.''

ಮಂತ್ರಿ ಕೊಂಚ ಹೊತ್ತು ತಡೆದ. ಆದರೆ ಚೇರ್‌ಮನ್ ಪ್ರತಿಕ್ರಿಯಿಸಲಿಲ್ಲ.

''ಇನ್ನು ನನಗೆ ಬೇರೆ ದಾರಿಯೇ ಇಲ್ಲ.'' ಎಂದು ಏಳುತ್ತಾ ಇಗ್ನ್ಯಾಶಿಯಸ್ ನುಡಿದ.

ಕೊನೆಗೂ ಮಂತ್ರಿ ಹೊರಡುತ್ತಾನಲ್ಲ ಎಂದು ಮೈಮುರಿದುಕೊಂಡ ಚೇರ್‌ಮನ್. ಆದರೆ ಇಗ್ನ್ಯಾಶಿಯಸ್ ತನ್ನ ಜೇಬಿಗೆ ಕೈ ಹಾಕಿ ಸಣ್ಣ ಪಿಸ್ತೂಲೊಂದನ್ನು ಹೊರ ತೆಗೆದುದನ್ನು ನೋಡಿ ಭಯದಿಂದ ಬೆವೆತು ಬಿಟ್ಟ. ನೈಜೇರಿಯಾದ ಆರ್ಥಿಕ ಮಂತ್ರಿ ಮುಂದೆ ಬಂದು ಪಿಸ್ತೂಲಿನ ನಳಿಗೆಯನ್ನು ಚೇರ್‌ಮನ್ನನ ತಲೆಗೆ ಗುರಿಯಿಟ್ಟಾಗ ಆ ಇಬ್ಬರು ಸ್ವಿಸ್ ಬ್ಯಾಂಕರೂ ಶಿಲಾ ಪ್ರತಿಮೆಗಳಂತೆ ಸ್ತಂಭಿತರಾ

ದರು.

''ನನಗೆ ಆ ಹೆಸರುಗಳು ಮತ್ತು ವಿವರಗಳು ಬೇಕೇ ಬೇಕು ಮಿ. ಗೆರ್ಬರ್. ನಾನೀಗ ಯಾವುದಕ್ಕೂ ಹೇಸುವುದಿಲ್ಲವೆಂದು ನೀವು ತಿಳಿದುಕೊಂಡಿರಬೇಕು. ಒಂದು ವೇಳೆ ನೀವು ತಕ್ಷಣವೇ ಆ ಹೆಸರು ಮತ್ತು ವಿವರಗಳನ್ನು ಕೊಡದಿದ್ದರೆ ನಿಮ್ಮ ತಲೆಯನ್ನು ಸಿಡಿಸಿಬಿಡುತ್ತೇನೆ. ತಿಳೀತಾ?''

ಹಣೆಯ ಮೇಲೆ ಬೆವರು ಹರಿಯುತ್ತಿರುವಂತೆ ಚೇರ್‌ಮನ್ ಮೆಲ್ಲಗೆ ತಲೆಯಾಡಿಸಿದ. ''ಮತ್ತು ನಂತರ ಅವನು'' ಎಂದು ಕೆಲವೇ ಅಡಿಗಳ ದೂರದಲ್ಲಿ ಶಿಲಾ ಪ್ರತಿಮೆಯಂತೆ ನಿಂತಿದ್ದ ಸಹಾಯಕನ ಕಡೆ ಕೈ ತೋರಿಸುತ್ತಾ ಇಗ್ನ್ಯಾಶಿಯಸ್ ಹೇಳಿದ,

''ಈ ಬ್ಯಾಂಕಿನಲ್ಲಿ ನೈಜೀರಿಯನ್ ವ್ಯಕ್ತಿ ಹೊಂದಿರುವ ಪ್ರತಿಯೊಂದು ಅಕೌಂಟ್‌ಗಳ ವಿವರ ಮತ್ತು ಆ ವ್ಯಕ್ತಿಗಳ ಹೆಸರು, ಇವುಗಳ ಪಟ್ಟಿ ನನಗೆ ಬೇಕು ಇಲ್ಲದಿದ್ದರೆ ನಾನು ನಿಮ್ಮ ಚೇರ್‌ಮನ್ನನ ತಲೆಯನ್ನು ನುಚ್ಚುನೂರು ಮಾಡುತ್ತೇನೆ. ನಾನು ಹೇಳಿದ್ದು ಕೇಳಿಸ್ತಾ?'' ಸ್ವರದಲ್ಲಿ ತೀಕ್ಷ್ಣತೆಯನ್ನು ಬೆರೆಸಿದ ಇಗ್ನ್ಯಾಶಿಯಸ್.

ಆ ಯುವಕ ಚೇರ್‌ಮನ್ನನ ಕಡೆ ನೋಡಿದ. ಅವನು ಭಯದಿಂದ ನಡುಗುತ್ತಿದ್ದರೂ, ಸ್ಪಷ್ಟವಾಗಿ ಫ್ರೆಂಚ್ ಭಾಷೆಯಲ್ಲಿ ನುಡಿದ, ''ಬೇಡ''.

''ಸರಿ'' ಫ್ರೆಂಚಿನಲ್ಲೆ ಮೆಲುಧ್ವನಿಯಲ್ಲಿ ಉತ್ತರಿಸಿದ ಆ ಸಹಾಯಕ.

''ನಾನು ನಿಮಗೆ ಯಾವುದೇ ಅವಕಾಶ ಕೊಡಲಿಲ್ಲವೆಂದು ದೂರಬೇಡಿ'' ಎನ್ನುತ್ತಾ ಇಗ್ನ್ಯಾಶಿಯಸ್, ಪಿಸ್ತೂಲಿನ ಸೇಫ್ಟಿಕ್ಯಾಪ್ ಅನ್ನು ಎಳೆದ. ಈಗ ಚೇರ್‌ಮನ್ನನ ಮುಖದ ಮೇಲೆ ಬೆವರು ಹರಿಯತೊಡಗಿತ್ತು. ಅವನ ಸಹಾಯಕ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು, ಪಿಸ್ತೂಲು ಸಿಡಿಯುವುದನ್ನು ನಿರೀಕ್ಷಿಸತೊಡಗಿದ.

''ಭಲೆ'' ಎಂದ ಇಗ್ನ್ಯಾಶಿಯಸ್, ಚೇರ್‌ಮನ್ನನ ತಲೆಗೆ ಆನಿಸಿದ್ದ ಪಿಸ್ತೂಲನ್ನು ತೆಗೆದು ಜೇಬಿನಲ್ಲಿಟ್ಟುಕೊಳ್ಳುತ್ತಾ, ತಾನು ಕುಳಿತಿದ್ದ ಸೀಟಿನ ಬಳಿ ಮರಳಿದ.

ಮಂತ್ರಿ ಕುರ್ಚಿಯ ಪಕ್ಕದಲ್ಲಿಟ್ಟಿದ್ದ ತನ್ನ ಸವಕಲು ಬ್ರಿಫ್ ಕೇಸನ್ನು ಎತ್ತಿಕೊಂಡು, ಅದನ್ನು ತನ್ನ ಮುಂದಿದ್ದ ಗಾಜಿನ ಟೇಬಲ್ ಮೇಲಿಟ್ಟು ಅದರ ಕೊಂಡಿಗಳನ್ನು ಒತ್ತಿ ಬ್ರೀಫ್‌ಕೇಸ್ ತೆರೆದ.

ಬ್ಯಾಂಕರರಿಬ್ಬರೂ ಬ್ರೀಫ್‌ಕೇಸಿನಲ್ಲಿ ಸಾಲಾಗಿ ಜೋಡಿಸಲಾಗಿದ್ದ ನೂರು ಡಾಲರ್ ನೋಟುಗಳ ಕಟ್ಟುಗಳ ಕಡೆ ದೃಷ್ಟಿ ಬೀರಿದರು. ಬ್ರೀಫ್‌ಕೇಸಿನ ಪ್ರತಿಯೊಂದು ಅಂಗುಲವೂ ನೂರು - ಡಾಲರುಗಳ ನೋಟುಗಳಿಂದ ಭರ್ತಿಯಾಗಿತ್ತು. ಆ ಬ್ರೀಫ್‌ಕೇಸಿನಲ್ಲಿನ ಹಣದ ಮೊತ್ತ ಸುಮಾರು ಅರ್ಧ ಕೋಟಿ ಡಾಲರುಗಳಷ್ಟಾಗಬಹುದೆಂದು ಚೇರ್‌ಮನ್ ಮನಸ್ಸಿನಲ್ಲೇ ಲೆಕ್ಕಹಾಕಿದ.

''ನಾನು ನಿಮ್ಮ ಬ್ಯಾಂಕಿನಲ್ಲಿ ಖಾತೆ ತೆರೆಯಬೇಕೆಂದಿದ್ದೇನೆ... ಏನಂತೀರಿ ಮಿ. ಗೆರ್ಬರ್?''

●

*ಒಂದು ದೊಡ್ಡ ನಗರದಲ್ಲಿ ವ್ಯಕ್ತಿಚಿತ್ರ ಪ್ರದರ್ಶನದ ಏರ್ಪಾಡು ಆಗಿತ್ತು. ಪ್ರದರ್ಶನವನ್ನು ವೀಕ್ಷಿಸುತ್ತಾ ಬರುತ್ತಿದ್ದ ಓರ್ವಳು ಒಂದೆಡೆ ನೋಡುತ್ತಾ ''ಛೇ, ಎಂತಹ ಅಶ್ಲೀಲ ಡ್ರೆಸ್ ತೊಡಿಸಿದ್ದಾರೆ ಇವಳಿಗೆ? ಹಣೆಯಲ್ಲಿ ಕುಂಕುಮ ಕೂಡ ಇಲ್ಲ, ನೋಡಿದರೆ ವಿಧವೆ ಹಾಗೆ ಕಾಣಿಸುತ್ತಾಳೆ'' ಎಂದಳು. ಆಗ ಪಕ್ಕದಲ್ಲೇ ನಿಂತಿದ್ದ ಗೈಡ್ ಹೇಳಿದ, ''ಮೇಡಂ, ಅಲ್ಲಿರೋದು ಚಿತ್ರ ಅಲ್ಲ, ಕನ್ನಡಿ.''*

*- ಗಣಪತಿ ಮಾನಿಗದ್ದೆ*



# ನಾವು ಕಳೆದುಕೊಂಡ ಶೇಕ್ಸ್‌ಪಿಯರನ 'ಧ್ವನಿ'

— ನಾರಾಯಣ ರಾಯಚೂರ್ —

ಆ ವೃದ್ಧ, ಇಪ್ಪತ್ತು ವರ್ಷಗಳಷ್ಟು ಹಿಂದೆಯೇ ತನಗೆ ಗಂಟುಬಿದ್ದ ಕ್ಯಾನ್ಸರಿನ ಪರಿವೆಯೂ ಇಲ್ಲದೇ - ಅದಕ್ಕಾಗಿ ತಾನು ಆರು ಬಾರಿ ಶಸ್ತ್ರಚಿಕಿತ್ಸೆಗೆ ಒಳಗಾದದ್ದನ್ನೂ ಮರೆತು - ಜಗತ್ತಿನ ಮಹಾನ್ ಕಲಾವಿದ, ಲೇಖಕರ ಆ ಮೇಳದಲ್ಲಿ, ಪಾದರಸದ ಚುರುಕಿನೊಂದಿಗೆ ಅಡ್ಡಾಡಿ, ನಕ್ಕು-ನಗಿಸಿ ನಲಿದದ್ದು... ಅಭಿಮಾನಿಗಳ ಶುಭಾಶಯಗಳ ಭಾರ ಹೊತ್ತು ಉತ್ಸಾಹದೊಂದಿಗೆ ಉಲಿದದ್ದು... ಜಗತ್ತಿನಾದ್ಯಂತದ ಆತನ ಅಭಿಮಾನಿಗಳನ್ನು ಪುಳಕಿತಗೊಳಿಸುತ್ತಿದ್ದ ದೃಶ್ಯ ಅದು. ಆ ಆತ್ಮೀಯ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅಸಾಧ್ಯವಾದವರೆಲ್ಲ, ಆ ಸಂದರ್ಭದಲ್ಲೇ ಚಿತ್ರಿಸಲಾಗಿದ್ದ ವಿಡಿಯೋ ಕ್ಯಾಸೆಟ್‌ನಲ್ಲಿ ಸಮಾರಂಭವನ್ನು ಕಂಡು ಸಂಭ್ರಮಿಸಿದರು...

ಅದು ಸುಮಾರು ಮೂರು ವರ್ಷಗಳ ಹಿಂದೆ (21 ಮೇ 1987) ನಡೆದ ಆತನ ಎಂಬತ್ತನೆಯ ಹುಟ್ಟುಹಬ್ಬದ ಸಂದರ್ಭ. ಹುಟ್ಟುಹಬ್ಬವನ್ನು ಆಚರಿಸಿದ ರೀತಿಯೂ ವಿನೂತನವೆ. ಅಂದು ಆತನನ್ನು ಹೊಗಳುವ ಭಾಷಣಗಳಿರಲಿಲ್ಲ, ಆತನ ಸಾಧನೆಗಳನ್ನೆಲ್ಲ ವರ್ಣಿಸುವ ಬಣ್ಣದ ಮಾತುಗಳಿರಲಿಲ್ಲ. ಜಗ

ತ್ತಿನ ಅನೇಕ ಕಲಾವಿದರು, ಬರೆಹಗಾರರು ಬಂದು ಆತನೊಂದಿಗೆ ಆತ್ಮೀಯವಾಗಿ ದಿನ ಗಳೆದರು.

ಈಗ ಆರು ತಿಂಗಳ ಹಿಂದೆ (11 ಜುಲೈ 1989), ಆತ ಇಹಲೋಕ ಯಾತ್ರೆ ಮುಗಿಸಿದ ದಿನ, ''ಶೇಕ್ಸ್‌ಪಿಯರ್ ನಮಗಿನ್ನು ಸುಲಭ ವಾಗಿ ಅರ್ಥವಾಗಲಾರ'' ಎಂದೂ, ''ತಾನು ಕಣ್ಮರೆಯಾಗಿ ನಾಲ್ಕು ಶತಮಾನಗಳ ನಂತರ ಶೇಕ್ಸ್‌ಪಿಯರ್ ತನ್ನ 'ಧ್ವನಿ'ಯನ್ನು ಕಳೆದು ಕೊಂಡ'' ಎಂದೂ ಹಲುಬಿದವರು ಹಲವು ಜನ.

ಹೌದು. ಶೇಕ್ಸ್‌ಪಿಯರನ ಪಾತ್ರಗಳಿಗೆ ವಿಶಿಷ್ಟ ಜೀವ-ಚೇತನಗಳನ್ನು ತುಂಬಿ, ರಂಗ ಭೂಮಿ-ಸಿನಿಮಾಗಳ ಮೂಲಕ ಜಗತ್ತಿನಾ ದ್ಯಂತ ವೀಕ್ಷಕ ಸಮುದಾಯದ ಮನವನ್ನು ಸೂರೆಗೊಂಡವ ಲಾರೆನ್ಸ್ ಆಲಿವಿಯೆ. ಎಂಬ ತ್ತುಮೂರು ವರ್ಷಗಳ ತನ್ನ ತುಂಬು ಬದು ಕಿಗೆ (ಜನನ: 1907) ವಿದಾಯ ಹೇಳಿದ ಆತ ಶೇಕ್ಸ್‌ಪಿಯರ್‌ನನ್ನು, ಆತನ ಪಾತ್ರಗಳನ್ನು ಅಮರವಾಗಿಸಿದವ.

1823ರಷ್ಟು ಹಿಂದೆ ಕೋಲ್ರಿಜ್ ಮಹಾ ಶಯ ಅಂದಿನ ವಿಖ್ಯಾತ ಗಂಗಭೂಮಿ ನಟ ಕೀನ್‌ನನ್ನು ಕುರಿತು, ''ಆತ ರಂಗದ ಮೇಲೆ ನಟಿಸುತ್ತಿರುವುದನ್ನು ನೋಡುವುದೆಂದರೆ ಶೇಕ್ಸ್‌ಪಿಯರನನ್ನು ಓದುತ್ತ ಕುಳಿತಂತೆಯೆ,'' ಎಂದಿದ್ದ. ಅಂದಿನಿಂದ ನೂರೈವತ್ತು ವರ್ಷ ಗಳ ನಂತರ ಆಲಿವಿಯೆನ ಬಗ್ಗೆ ಕೂಡ ಇದೇ ಮಾತನ್ನು ನಾವು ಹೇಳಬಹುದಾದರೂ ಲ್ಯಾರಿ (ಆತನನ್ನು ಅಭಿಮಾನಿಗಳು ಹಾಗೆ ಕರೆಯುತ್ತಿ ದ್ದರು) ಅದಕ್ಕಿಂತ ಒಂದು ಹೆಜ್ಜೆ ಮುಂದಿಟ್ಟ. ತಾನು ಒಬ್ಬ ಉತ್ತಮ ಕಲಾವಿದನಾಗಿ ಬೆಳೆದಂ ತೆಯೇ 'ಉತ್ತಮ' ಕಲಾವಿದರ ಒಂದು ಬಳಗ ವನ್ನೇ ಆತ ಬೆಳೆಯಿಸಿದ.

ಒಮ್ಮೆ ಜಗದ್ವಿಖ್ಯಾತ ಬಾಕ್ಸರ್ ಮಹ ಮ್ಮದ ಅಲಿ ''ನಾನೇ ಸರ್ವಶ್ರೇಷ್ಠ'' ಎಂದಿದ್ದ. ಆದರೆ ಆಲಿವಿಯೆಗೆ ಹೀಗೆ ಹೇಳಿ ಕೊಳ್ಳಬೇಕಾಗಿರಲಿಲ್ಲ. ಯಾಕೆಂದರೆ ಹಾಗೆಂದು ಆತ ತನ್ನಷ್ಟಕ್ಕೆ ತಾನು ಎಂದೂ



*''ಪ್ರೇಕ್ಷಕಸಮುದಾಯವನ್ನು ಎಂದಿಗೂ ಗೌರವಾದರಗಳಿಂದ ಕಾಣಬೇಕು; ಅದನ್ನೆಂದೂ ಕಡೆಗಾಣಿಸುವುದು ಸಲ್ಲ. ಕರವಸ್ತ್ರದ ಮರೆಯಲ್ಲಿ ವಿಕಾರವಾಗಿ ಸೀನುವುದಾಗಲಿ, ರಂಗದ ನೇಪಥ್ಯದಿಂದ ಯಾರನ್ನೋ ಸನ್ನೆ ಮಾಡಿ ಕರೆಯುವವದಾಗಲಿ ಅತಿ ಸುಲಭ, ಆದರೆ ರಂಗದ ಮೇಲೊಮ್ಮೆ ಬಂದರಾಯ್ತು, ನಿಮ್ಮೆಲ್ಲ ಹಾವಭಾವ, ಮಾತು-ಪಿಸುಮಾತುಗಳನ್ನು ವೀಕ್ಷಿಸುವ, ಆಲಿಸುವ ಕಣ್ಣುಗಳು-ಕಿವಿಗಳು ಸದಾ ಸಿದ್ಧವಿರುತ್ತವೆ - ಜಾಗರೂಕವಾಗಿರುತ್ತವೆ. ಈ ಪ್ರೇಕ್ಷಕ ಮಹಾಶಯನನ್ನು ಪ್ರದರ್ಶಕ ಗೌರವಿಸಬೇಕು. ಆತನೂ (ಪ್ರೇಕ್ಷಕನೂ) ನಿಮ್ಮನ್ನೂ (ಪ್ರದರ್ಶಕನನ್ನು) ಗೌರವಿಸಬಹುದು, ಆರಾಧಿಸಬಹುದು. ಆತನನ್ನು (ಪ್ರೇಕ್ಷಕನನ್ನು) ಪ್ರದರ್ಶಕ ಸುಲಭವಾಗಿ ಮರುಳುಗೊಳಿಸಬಹುದು- ನಿಜ; ಪ್ರೇಕ್ಷಕ ಬಯಸುವುದು ಅದನ್ನೇ; ಹಾಗೆಂದು ನೀವಾತನನ್ನು ಗೊಂದಲಕ್ಕೀಡು ಮಾಡದಂತೆಯೂ ಎಚ್ಚರವಹಿಸುವು ದಗತ್ಯ.''*

*ಲಾರೆನ್ಸ್ ಆಲಿವಿಯೆ*

ಭಾವಿಸಿಕೊಂಡಿರಲಿಲ್ಲ. ಬದಲಿಗೆ,

"ನಟ ಮುಷ್ಟಿಮಲ್ಲನಂತೆ ಶಕ್ತಿಶಾಲಿಯಾಗಿಯೂ, ಜಟ್ಟಿಯಂತೆ ಪಟ್ಟುಬಲ್ಲವನಾಗಿಯೂ, ನರ್ತಕ-ನಟನಂತೆ ಹಗುರವಾಗಿಯೂ ಇರುವುದಗತ್ಯ" ಎಂದು ಹೇಳಿದ್ದನಷ್ಟೇ ಅಲ್ಲ, ಹಾಗೆ ಸಾಧನೆಗೈದೂ ಇದ್ದ.

ಒಂದೊಂದು ಪಾತ್ರದ ಬಗ್ಗೆಯೂ ಗಾಢವಾದ ಚಿಂತನೆ ನಡೆಸುತ್ತಿದ್ದ ಆಲಿವಿಯೆ. ಆ ಚಿಂತನೆಯ ಫಲ-ಆ ಪಾತ್ರವಾಗಿ ಆತನ ಅದ್ಭುತ ಅಭಿನಯ. "'ಒಥೆಲೋ' ಪಾತ್ರವನ್ನಾತ ಅಭಿನಯಿಸಬೇಕಾದಾಗ ಆತನ ಸ್ವಾಧ್ಯಾಯ ಹೇಗಿತ್ತೆಂದರೆ ಒಂದು ಕಾರಿನ ಭಾಗಗಳನ್ನೆಲ್ಲ ಬಿಚ್ಚಿ ಬಿಚ್ಚಿ ನೋಡಿ ಮತ್ತೆ ಜೋಡಿಸಿದ ಹಾಗೆ, ಆದರೆ ಕಾರಿಗೊಂದು ಹೊಸ ಸ್ವರೂಪ ಬಂದ ಹಾಗೆ" ಎನ್ನುತ್ತಾರೆ ಆತನನ್ನು ಬಲ್ಲವರು.

ಆಲಿವಿಯೆ ಚಿಕ್ಕವನಾಗಿದ್ದಾಗ ಆತನ ಧ್ವನಿ ಯಾರಿಗೂ ಮೆಚ್ಚುಗೆ ಹುಟ್ಟಿಸುವಂತಿರಲಿಲ್ಲ. ಆತನೇ ಆ ಧ್ವನಿಯನ್ನು ಮೆಚ್ಚಿಕೊಂಡಿರಲಿಲ್ಲ. 'ಧ್ವನಿಭಂಗ'ವಾಗುವ ವಯಸ್ಸಾದರೂ ಅವನ ಧ್ವನಿ ಕೀರಲಾಗುತ್ತ ಹೋಯಿತು. ಆದರೆ ಈ 'ಅನಾನುಕೂಲ'ವನ್ನಾತ 'ಆಸ್ತಿ'ಯನ್ನಾಗಿ ಮಾಡಿಕೊಂಡ. ಸತತ ಸಾಧನೆಗೈದು ಧ್ವನಿಯನ್ನು ದಾಸನನ್ನಾಗಿಸಿಕೊಂಡ. "ಒಂದು ಕಾಲದ ಆ ಕೀರಲು ಧ್ವನಿ, ಅಪಸ್ವರದ ಧ್ವನಿ ಶೇಕ್ಸ್‌ಪಿಯರನ ಕಾವ್ಯಮಯ ಸಂಭಾಷಣೆಗಳಿಗೆ, ವಿಭಿನ್ನ ಪಾತ್ರಗಳಿಗೆ ಜೀವಧ್ವನಿಯಾಯ್ತು" ಎಂದು ಖ್ಯಾತ ಧ್ವನ್ಯಾಭಿನಯ ಪಟು ಝುಲ್ ಉಲಾನಿ ಉದ್ಗರಿಸುತ್ತಾನೆ.

ಎಲ್ಲ ಅಪ್ಪಂದಿರಂತೆ ಈತನ ಅಪ್ಪ (ಡೊರ್‌ಕಿಂಗ್‌ನ ಪಾದ್ರಿ) ಜೆರಾರ್ಡ್ ಆಲಿವಿಯೆನಿಗೂ 'ಮಗ ರಂಗನಟನಾಗುವುದು' ಬೇಕಿರಲಿಲ್ಲ. ಆದರೆ ತಾಯಿಗೆ ಮಗನ ಒಲವನ್ನು ಪೋಷಿಸುವ ಮನಸ್ಸು. ಹತ್ತರೆಳವೆಯಲ್ಲೇ ತನ್ನ ಶಾಲೆಯ ನಾಟಕವೊಂದರಲ್ಲಿ ಪಾತ್ರವಹಿಸಿ ಅಂದಿನ ಖ್ಯಾತ ರಂಗನಟಿ ಡೇಮ್ ಸಿಬಿಲ್ ಥೊರ್‌ನ್‌ಡಿಕೆಯಿಂದ "ಇವನಲ್ಲೊಬ್ಬ ನಟನಿದ್ದಾನೆ - ಜನ್ಮಜಾತ ನಟ" ಎಂದು ಪ್ರಶಂಸಿತನಾಗಿದ್ದ ಬಾಲಕ. ತಾಯಿ ಮುಂದೆರಡು ವರ್ಷಗಳಲ್ಲೇ, ಕಣ್ಣುಮುಚ್ಚಿದಳು. ತಂದೆ ಇವನನ್ನು ಹಿರಿಯಣ್ಣ ರಿಚರ್ಡ್‌ನ ಸುಪರ್ದಿಗೆ ಒಪ್ಪಿಸಿದ. ಆ ಅಣ್ಣನೊಂದಿಗೆ ಭರತಭೂಮಿಗೆ ಬಂದು ಚಹಾತೋಟಗಳಲ್ಲಿ ದುಡಿಯಬೇಕಾಗಿದ್ದ ಲಾರೆನ್ಸ್ ಅದೃಷ್ಟವಶಾತ್ ತಾಯ್ನಾಡಿನಲ್ಲೇ ಉಳಿದು ರಂಗ



ಭೂಮಿಯಲ್ಲಿ ಬೆಳೆಯುವಂತಾಯಿತು. ತಂದೆಯೂ ಈತನ ಇಚ್ಛೆಗೆ ಮಣಿಯಲೇಬೇಕಾಯಿತು. ಹದಿನೇಳರ ಯುವಕ ಲಾರೆನ್ಸ್ ಆಲಿವಿಯೆ ರಾಯಲ್ ಆಲ್ಬರ್ಟ್ ಹಾಲ್‌ನ ಸೆಂಟ್ರಲ್ ಸ್ಕೂಲ್ ಆಫ್ ಡ್ರಾಮಾ ವಿದ್ಯಾರ್ಥಿಯಾದ.

ರಂಗಶಿಕ್ಷಣ ಪಡೆದಾದ ನಂತರದ ಆಲಿವಿಯೆಯ ಬವಣೆ ಬಹುಶಃ ಆತನನ್ನು ಹೆಚ್ಚು ದೃಢನನ್ನಾಗಿಸಿರಬೇಕು. ಕೊನೆಗೆ ಸರ್ ಬ್ಯಾರಿ ಜಾಕ್‌ಸನ್ನರ 'ಬರ್ಮಿಂಗ್ ಹ್ಯಾಂ ರೆಪರ್ಟರಿ'

ಯಲ್ಲಿ ಕೆಲಸ ಸಿಕ್ಕು, ಆಲಿವಿಯೆ ಪ್ರಯೋಗ ದಿಂದ ಪ್ರಯೋಗಕ್ಕೆ ಬೆಳೆಯತೊಡಗಿದ. ಅಲ್ಲಿಯೇ ರಾಲ್ಫ್ ರಿಚರ್ಡಸನ್ನರ ಪರಿಚಯ ವಾಗಿ ಇಬ್ಬರೂ ಆತ್ಮೀಯ ಸ್ನೇಹಿತರಾಗುವಂ ತಾಯಿತು. ಶಿಸ್ತು, ಶ್ರಮ, ಪ್ರಯತ್ನಶೀಲತೆಗ ಳನ್ನು ರೂಢಿಸಿಕೊಂಡರೂ, ಶ್ರೇಷ್ಠಮಟ್ಟದ ಪ್ರದರ್ಶನ ನೀಡಿದರೂ ಆಲಿವಿಯೆಗೆ ದುರ್ದೈವ ಬೆಂಬಿಡದ ಭೂತವಾಯಿತು. ಆಗ ಆತ ಅಂತರ್ಮುಖಿಯಾದ. ಚಲನಚಿತ್ರ ರಂಗ ದೆಡೆ ಲಕ್ಷ್ಯ ಹರಿಯಿಸಿ ಲಂಡನ್ ಹಾಗೂ



ಹಾಲಿವುಡ್‌ಗಳ ಚಿತ್ರಗಳಲ್ಲಿ ನಟಿಸತೊಡಗಿದ ನಾದರೂ ಇಲ್ಲಿಯೂ ಯಶಸ್ಸು (ಬಾಕ್ಸಾ ಫೀಸು ದೃಷ್ಟಿಯಿಂದ) ಆತನಿಗೊಲಿಯಲಿಲ್ಲ.

ಮೂವತ್ತರ ದಶಕದ ಮಧ್ಯದವರೆಗೂ ಆಲಿವಿಯೆಯನ್ನು ಸತಾಯಿಸಿದ ಅದೃಷ್ಟ 1935ರ ಹೊತ್ತಿಗೆ ಸೋಲೊಪ್ಪಲೇಬೇಕಾ ಯಿತು. ಆತನ ಪಾಲಿಗೆ ಶೇಕ್ಸ್‌ಪಿಯರನೇ ಭಾಗ್ಯವಿಧಾತನಾಗಬೇಕಾಯಿತು.

'ರೋಮಿಯೋ ಆ್ಯಂಡ್ ಜ್ಯೂಲಿಯೆಟ್' ನಾಟಕ ಪ್ರದರ್ಶನ ಆರು ತಿಂಗಳುಗಟ್ಟಲೇ 'ಹೌಸ್‌ಫುಲ್' ಆಯಿತು. ಮುಂದೆರಡು ವರ್ಷಗಳಲ್ಲಿ ಓಲ್ಡ್‌ವಿಕ್ ಪ್ರಯೋಗಿಸಿದ 'ಹ್ಯಾಮ್‌ಲೆಟ್' ಅಂತೂ ಲಾರೆನ್ಸನನ್ನು ಪ್ರಸಿ ದ್ಧಿಯ ಉತ್ತುಂಗಕ್ಕೇರಿಸಿತು. ಅದುವರೆಗೂ ಹಲವಾರು ಕಂಪನಿಗಳು ಪ್ರಯೋಗಿಸಿದ್ದ 'ಹ್ಯಾಮ್‌ಲೆಟ್' (ಐವತ್ತಕ್ಕೂ ಹೆಚ್ಚು ಕಂಪನಿ ಗಳು ನಿರ್ಮಿಸಿದವೆನ್ನುತ್ತಾರೆ) ಗಿಂತಲೂ ಆಲಿ ವಿಯೆ ನಟಿಸಿದ್ದ ಈ ನಾಟಕ ಪ್ರಯೋಗ ವಿಭಿನ್ನ-ವಿಶಿಷ್ಟ ಎಂಬ ಪ್ರಶಂಸೆ ಬೇರೆ. ಆಲಿವಿ ಯೆಯೊಂದಿಗೆ ಜಾನ್ ಗೀಲ್‌ಗುಡ್, ಅಲೆಕ್ ಗಿನ್ನಿಸ್ ಕೂಡ ಇದ್ದರು. ಈ ಮೂವರ ಯತ್ನ ದಿಂದಾಗಿ ಶೇಕ್ಸ್‌ಪಿಯರನ ನಾಟಕಗಳು ಮತ್ತೆ ಹೊಸ ಜೀವ ತಳೆದು ಪ್ರಯೋಗಗೊಳ್ಳತೊಡ ಗಿದವು: 'ಹೆನ್ರಿ ದಿ ಫಿಫ್ತ್', 'ಮ್ಯಾಕ್‌ಬೆತ್', 'ಕೊರಿಯೋಲನಸ್', 'ಟ್ವೆಲ್ತ್ ನೈಟ್' ಹೀಗೇ....

ಜಾನ್ ಗೀಲ್‌ಗುಡ್ ಆಗಾಗ ಹೇಳುತ್ತಿದ್ದ ರಂತೆ, "ನನಗೆ ಧ್ವನಿಯಿತ್ತು.. ಲ್ಯಾರಿಗೆ ಕಾಲು ಗಳಿದ್ದವು.." ಎಂದು. ಗೀಲ್‌ಗುಡ್‌ನ ಪಾತ್ರ ಗಳಿಗೆ ಆತನ ಧ್ವನಿಯೇ ಮೆರುಗು ನೀಡುತ್ತಿ ದ್ದರೆ ಆಲಿವಿಯೆಯ ಕರಾರುವಾಕ್ಕಾದ ನಡಿ ಗೆಯ ಕ್ರಮ ಆತನ ಪಾತ್ರಗಳನ್ನು ಎತ್ತಿ ನಿಲ್ಲಿಸುತ್ತಿತ್ತಂತೆ.

ರಂಗಕ್ರಿಯೆಯ ಜತೆಜತೆಗೇ ಸಾಮಾಜಿಕ, ರಾಜಕೀಯ ವಿದ್ಯಮಾನಗಳಿಗೂ ಪ್ರತಿಕ್ರಿಯಿ ಸುತ್ತಿದ್ದ ಆಲಿವಿಯೆ. ದ್ವಿತೀಯ ಮಹಾಯು ದ್ಧದಲ್ಲಿ ಯೋಧನಾಗಿ ಪಾಲ್ಗೊಳ್ಳುವ ತನ್ನಾಶೆ ಈಡೇರದಿದ್ದಾಗ ಆಲಿವಿಯೆ ಒಟ್ಟು ಇನ್ನೂರು ಗಂಟೆಗಳಷ್ಟು ಕಾಲ ವಾಯುಯಾನ ಮಾಡಿ ಹಲವು ಪ್ರಚಾರಚಲನಚಿತ್ರಗಳನ್ನು ನಿರ್ಮಿಸಿ ದನಲ್ಲದೇ ಬಾನುಲಿಯ ಮೂಲಕವೂ ಮಾತ ನಾಡಿ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ದೇಶಸೇವೆಗೈದ.

ಅಷ್ಟೇ ಅಲ್ಲ, ಪರಿಸರ ರಕ್ಷಣೆಯ ಕುರಿತು ಇನ್ನೂ ಜಗತ್ತು ಅಷ್ಟಾಗಿ ಯೋಚಿಸದಿದ್ದ ಸಮಯದಲ್ಲಿಯೆ, ಪರಿಸರವಾದಿಯಾಗಿ ಆತ



ಎಂಬತ್ತರ ಆಲಿವಿಯೆ

ನನ್ನು ಗುರುತಿಸಿದರು ಪ್ರೇಕ್ಷಕರು - ಚೆಕೋವನ 'ಅಂಕಲ್ ವಾನ್ಯಾ' ನಾಟಕದ 'ಆಸ್ಟ್ರೋವ್' ಪಾತ್ರವನ್ನಾತ ಅಭಿನಯಿಸಿದ್ದನ್ನು ನೋಡಿದಾಗ.

ಯುದ್ಧಾನಂತರ ಎಂದಿನಂತೆ 'ಓಲ್ಡ್ ವಿಕ್' ಪ್ರಯೋಗಗಳತ್ತ ಗಮನ ಹರಿಸಿದ ಆಲಿವಿಯೆ, ಶೇಕ್ಸ್‌ಪಿಯರನ ನಾಟಕಗಳಲ್ಲದೆ ಸಾಫೋಕ್ಲಿಸ್‌ನ 'ಈಡಿಪಸ್', ಜೀನೆಯ 'ಅಂತಿಗೊನೆ' ವಿಲ್ಡರ್‌ನ 'ಸ್ಕಿನ್ ಆಫ್ ಅವರ್ ಟೀಥ್' ಮುಂತಾದುವುಗಳನ್ನು ರಂಗಕ್ಕೆ ತಂದ. ನಡುನಡುವೆ ಚಲನಚಿತ್ರಗಳತ್ತ ಲಕ್ಷ್ಯ. ನ್ಯಾಶನಲ್ ಥಿಯೇಟರಿನ ನಿರ್ದೇಶಕನಾಗಿ ಮಹತ್ವದ ಕಾರ್ಯಗಳನ್ನು ಕೈಗೊಂಡ. ಸ್ಟ್ರಿಂಡ್‌ಬರ್ಗ್‌ನ 'ಡ್ಯಾನ್ಸ್ ಆಫ್ ಡೆಥ್' ಓನೀಲ್‌ನ 'ಲಾಂಗ್ ಡೇಸ್ ಜರ್ನಿ ಇನ್ ಟು ನೈಟ್' ಮುಂತಾದ ನಾಟಕಗಳನ್ನು ನಿರ್ದೇಶಿಸಿ, ನಟಿಸಿದ.

ಶ್ರೇಷ್ಠ ವ್ಯಾಯಾಮಪಟುವೂ ಆಗಿದ್ದ ಆಲಿವಿಯೆ ಪಾತ್ರವೊಂದರ ಸಲುವಾಗಿ ನಡೆಸುತ್ತಿದ್ದ ಸಿದ್ಧತೆ ವಿಶಿಷ್ಟವಾಗಿತ್ತು. ನೆಗೆತ, ತಲೆಕೆಳಗಾದ ನಡಿಗೆ ಮುಂತಾದವುಗಳಂತೂ ಸಾಮಾನ್ಯವಾಗಿ ಇದ್ದೇ ಇರುತ್ತಿದ್ದವು. ನಾಟಕಗಳಲ್ಲಿ ಉದ್ದ ಮೂಗು ಹಚ್ಚಿಕೊಳ್ಳುವುದು, ದೈಹಿಕ ಸಾಮರ್ಥ್ಯ ಪ್ರದರ್ಶಿಸುವ ಸಾಹಸಗಳನ್ನು ಪ್ರದರ್ಶಿಸುವುದೆಂದರೆ ಆತನಿಗೆ ಎಲ್ಲಿಲ್ಲದ ಉತ್ಸಾಹ. ಒಮ್ಮೊಮ್ಮೆ ಲಹರಿ ಬಂತೆಂದರೆ ಒಂದೇ ರಾತ್ರಿ, ಬೇರೆ ಬೇರೆ ಎರಡು ನಾಟಕಗಳಲ್ಲಿ ಎರಡು ಪಾತ್ರಗಳನ್ನು ಅಭಿನಯಿಸಿಬಿಡುತ್ತಿದ್ದನಂತೆ: ಒಂದು 'ಈಡಿಪಸ್' ಪಾತ್ರವಾದರೆ ಆ ನಾಟಕ ಮುಗಿದು ಅರ್ಧಗಂಟೆಯೊಳಗಾಗಿ ಮತ್ತೊಂದು ನಾಟಕದಲ್ಲಿ ಹಾಸ್ಯ ಪಾತ್ರ!

ಚಿತ್ರರಂಗದ ಅತ್ಯುಚ್ಚ ಪ್ರಶಸ್ತಿ 'ಆಸ್ಕರ್' ಅನ್ನು ಪಡೆದ ಆಲಿವಿಯೆ ಶೇಕ್ಸ್‌ಪಿಯರ್‌ನ ಹಲವಾರು ನಾಟಕಗಳನ್ನು ಬೆಳ್ಳಿ ತೆರೆಗೆ ತಂದ. (ಹೆನ್ರಿ ದಿ ಫಿಫ್ತ್, ರಿಚರ್ಡ್ ದಿ ಥರ್ಡ್, ಒಥೆಲೊ,) 'ಹೆನ್ರಿ ದಿ ಫಿಫ್ತ್' ಚಿತ್ರವೇ



ಆತನಿಗೆ 'ಆಸ್ಕರ್' ಪ್ರಶಸ್ತಿ ತಂದುಕೊಟ್ಟಿದ್ದು. 'ಲೈಫ್' ಪತ್ರಿಕೆ ಆಗ ''ಪಂಡಿತ ಪಾಮರ ಪ್ರೇಕ್ಷಕರಿಬ್ಬರೂ ಮೆಚ್ಚಿಕೊಳ್ಳುವಂತೆ ಆಲಿವಿಯೆ, ಶೇಕ್ಸ್‌ಪಿಯರ್ ಮಹಾಕವಿಯ ಕಾವ್ಯ (ನಾಟಕ)ವನ್ನು ಅದ್ಭುತ ರೀತಿಯಲ್ಲಿ ಚಿತ್ರಿಸಿ ಬೆಳ್ಳಿತೆರೆಯ ಮೇಲೆ ಮಹಾಕಾವ್ಯವನ್ನೇ ಸೃಜಿಸಿದ್ದಾರೆ'' ಎಂದು ಪ್ರಶಂಸಿಸಿತು. 'ದಿ ಪ್ರಿನ್ಸ್ ಆ್ಯಂಡ್ ದಿ ಶೋ ಗರ್ಲ್', 'ದಿ ಲಿಟಲ್ ರೋಮಾನ್ಸ್' ಹಾಗೂ 'ದಿ ಎಂಟರ್‌ಟೇನರ್' ಮುಂತಾದ ಐವತ್ತಕ್ಕೂ ಹೆಚ್ಚು ಚಿತ್ರಗಳನ್ನಾತ ನಿರ್ಮಿಸಿದ. ('ದಿ ಎಂಟರ್‌ಟೇನರ್' ಭಾರತದಲ್ಲಿ ನಿಷೇಧಿಸಲ್ಪಟ್ಟಿತು. ಅದರ ಒಂದು ಪ್ರತಿಯನ್ನು ನಾವು ಪುಣೆಯ ಚಿತ್ರಾಗಾರದಲ್ಲಿ ನೋಡಬಹುದು. )

ಆಲಿವಿಯೆಗೆ ಮೂವರು ಹೆಂಡಂದಿರು. ಈ ಪೈಕಿ 'ಗಾನ್ ವಿತ್ ದಿ ವಿಂಡ್'ನ ಗಾಯಕಿ ವಿವಿಯನ್ ಲೀ ಮೊದಲನೆಯವಳು. ಇಪ್ಪತ್ತು ವರ್ಷ ಜತೆಯಾಗಿದ್ದು ಹಲವಾರು ಒಳ್ಳೆಯ ಪ್ರಯೋಗಗಳನ್ನು (ಎರಡೂ ರಂಗಗಳಲ್ಲಿ) ನೀಡಿ ಬೇರ್ಪಡೆಯಾದರು. ನಂತರ ಚಿತ್ರ ನಟಿ ಜೋನ್ ಪ್ಲೌ-ರೈಟ್ ಲ್ಯಾರಿಯ ಕೈಹಿಡಿದಳು. ಈಕೆಯಿಂದ ಮೂರು ಮಕ್ಕಳನ್ನು ಪಡೆದ ಆಲಿವಿಯೆ.

ರಂಗ-ಚಿತ್ರರಂಗಗಳಿಂದ ದುಡಿದ ಹಣವನ್ನು ಆಲಿವಿಯೆ ಉಳಿಸಿಕೊಳ್ಳಲಿಲ್ಲ. ಒಂದು ದೃಷ್ಟಿಯಿಂದ 'ದಗ್ಧಹಸ್ತ' ಆತನದು. ಇತ್ತೀಚಿನ ದಿನಗಳಲ್ಲಂತೂ ಹಣಕ್ಕಾಗಿ ಸಿನಿಮಾಗಳಲ್ಲಿ ಪಾತ್ರವಹಿಸಬೇಕಾದಂಥ ಪ್ರಸಂಗ ಆತನಿಗೊದಗಿತ್ತು. ತನ್ನ ನಲವತ್ತನೆಯ ವಯಸ್ಸಿಗೆ (1947), ರಂಗಭೂಮಿಗೆ ಸಲ್ಲಿಸಿದ ಸೇವೆಗಾಗಿ ಬ್ರಿಟನ್ನಿನ 'ನೈಟ್' ಪದವಿ ಪಡೆದಿದ್ದ ಈ ನಿಗರ್ವಿ ತನ್ನ ಸತತ ಅಧ್ಯಯನ, ಅನುಭವಗಳ ಫಲವಾಗಿ 'ಕನ್‌ಫೆಶನ್ ಆಫ್ ಆ್ಯನ್ ಆ್ಯಕ್ಟರ್' ಹಾಗೂ 'ಆನ್ ದಿ ಆರ್ಟ್ ಆಫ್ ಆ್ಯಕ್ಟಿಂಗ್' ಎಂಬ ಎರಡು ಗ್ರಂಥಗಳನ್ನು ಈ ಜಗತ್ತಿಗೆ ನೀಡಿದ. ●

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಪ್ರಾಂಜಲಿ
   (ಅ) ಕೈಮುಗಿದವ
   (ಆ) ಯೋಗಶಾಸ್ತ್ರ
   (ಇ) ಉಗುಳಿದ್ದು
   (ಈ) ನಳಿಗೆ
2. ವ್ಯಗ್ರ
   (ಅ) ಮೊಂಡತನ
   (ಆ) ಕೋಪ
   (ಇ) ಮಗ್ನ
   (ಈ) ಮುರಿದದ್ದು
3. ಪ್ರಾಂಜಲ
   (ಅ) ಇದ್ದಲಿ
   (ಆ) ತರೆದ
   (ಇ) ಎತ್ತರವಾದ
   (ಈ) ಪಂಡಿತ
4. ಅಗ್ನಿದಿವ್ಯ
   (ಅ) ದೇವಲೋಕದ ಬೆಂಕಿ
   (ಆ) ಕೆಂಬಣ್ಣ
   (ಇ) ಯಜ್ಞ
   (ಈ) ಬೆಂಕಿಯಿಂದ ಪರೀಕ್ಷೆ
5. ಪ್ರೋಷಿತ
   (ಅ) ಸೇವಕ
   (ಆ) ಕಳೆದುಹೋದ
   (ಇ) ಸಿಂಪಡಿಸಿದ
   (ಈ) ದೇಶಾಂತರ ಹೋದ
6. ದಾರಣ
   (ಅ) ಹೊತ್ತುಕೊಳ್ಳುವಿಕೆ
   (ಆ) ಮದುವೆ
   (ಇ) ಸಿಗಿಯುವುದು
   (ಈ) ಬಹಳ ನೋವುಂಟುಮಾಡುವ
7. ತೊಳ್ಳೆ
   (ಅ) ತೂತು
   (ಆ) ಸಂಕಟ
   (ಇ) ಹೊಗಳಿಕೆ
   (ಈ) ತಿರುಳು
8. ತೋಮಾಲೆ
   (ಅ) ಸೋಮಾರಿ ಹೆಣ್ಣು
   (ಆ) ಜೋಲಾಡುವ ಮಾಲೆ
   (ಇ) ಚಾಡಿಪುರುಕ
   (ಈ) ಒದ್ದೆಬಟ್ಟೆ
9. ಮಸ್ಕೇರಿ
   (ಅ) ಬಿದಿರಿನ ತುಂಡು
   (ಆ) ಲೇವಡಿ
   (ಇ) ಬೈರಾಗಿ
   (ಈ) ಹರಿತವಾದ ಆಯುಧ
10. ಮಸಲಾ
   (ಅ) ಪದಾರ್ಥಕ್ಕೆ ರುಚಿತರುವ ಸಾಂಬಾರ
   (ಆ) ತೀಕ್ಷ್ಣ
   (ಇ) ಒಂದು ವೇಳೆ
   (ಈ) ಮದವೇರಿದ
11. ಲೋಹಿತ
   (ಅ) ಕೆಂಪು
   (ಆ) ಸವಾರ
   (ಇ) ಹಕ್ಕಿ
   (ಈ) ಆಸೆ ಬುರುಕ
12. ಹಕನಾಕ
   (ಅ) ಹಕ್ಕುದಾರ
   (ಆ) ಮೂಗಿನ ತುದಿ
   (ಇ) ಒಂದು ಮಟ್ಟದ ಸ್ವರ್ಗ
   (ಈ) ನ್ಯಾಯಾನ್ಯಾಯ ವಿಚಾರವಿಲ್ಲದ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

1. ಪ್ರಾಂಜಲಿ
(ಅ) ಕೈಮುಗಿದವ, ಅಂಜಲಿಬದ್ಧ; ವಿನಯ ತೋರಿಸುವ ಉದಾ: ಪ್ರಾಂಜಲಿಯಾಗಿ ಬೇಡಿಕೊಂಡ. (ಸಂ. ಪ್ರ=ಹೆಚ್ಚಿನ+ಅಂಜಲಿ=ಬೊಗಸೆ)

2. ವ್ಯಗ್ರ
(ಇ) ಮಗ್ನ, ಒಂದು ವಿಷಯದಲ್ಲಿ ಪೂರ್ಣ ಮನಸ್ಸು ತೊಡಗಿಸಿದ; ಆಸಕ್ತ, ತಲ್ಲೀನ. ಉದಾ: ವ್ಯಗ್ರ ಚಿತ್ತ (ಸಂ.)

3. ಪ್ರಾಂಜಲ
(ಅ) ತೆರೆದ, ಮುಚ್ಚುಮರೆ ಮಾಡದ. ಉದಾ: ಪ್ರಾಂಜಲ ಮನಸ್ಸು (ಸಂ.)

4. ಅಗ್ನಿದಿವ್ಯ
(ಈ) ಅಗ್ನಿಪರೀಕ್ಷೆ, ಬೆಂಕಿಯಲ್ಲಿ ಬೀಳಿಸಿ ಒಬ್ಬನ ಸತ್ಯ ಪರೀಕ್ಷೆ ಮಾಡುವುದು, ಹಾಗೆ ಪರೀಕ್ಷೆಗೊಳಪಡುವ ಪ್ರಾಚೀನ ರೂಢಿ. ಉದಾ: ಸೀತೆ ಅಗ್ನಿದಿವ್ಯಕ್ಕೆ ಒಳಗಾದಳು. (ಸಂ.)

5. ಪ್ರೋಷಿತ
(ಈ) ದೇಶಾಂತರ ಹೋದ, ಪ್ರವಾಸ ಹೋದ, ಉದಾ: ಪ್ರೋಷಿತ ಭರ್ತೃಕೆ=ದೂರದಲ್ಲಿರುವ ಗಂಡನ ಹೆಂಡತಿ; ವಿರಹಿಣಿ. (ಸಂ.)

6. ದಾರಣ
(ಇ) ಸಿಗಿಯುವುದು, ಸೀಳುವುದು. ಉದಾ: ಹೃದಯ ದಾರಣ=ತೀವ್ರದುಃಖಕಾರಕ (ಸಂ.)

7. ಪೊಳ್ಳು
(ಅ) ತೂತು, ರಂಧ್ರ. ಉದಾ: ತೊಳ್ಳೆಯಲ್ಲಿ ಇರುವೆಗಳು ಮನೆ ಮಾಡಿದ್ದವು. (ದೇಶ್ಯ, ಪೊಳ್ಳು-ಹೊಳ್ಳೆ)

8. ತೋಮಾಲೆ
(ಅ) ಜೋತಾಡುವ ಮಾಲೆ, ಉದ್ದನ್ನ ಮಾಲೆ, ಉದಾ. ತೋಮಾಲೆ ಸೂಡಿಕೊಳ್ಳುವುದು ಈಗಿನ ಮೋಡಿ. (ಪ್ರಾಕೃತ-ಥೋರ=ದೊಡ್ಡ+ಸಂ.ಮಾಲಾ)

9. ಮಸ್ಕೀರಿ
(ಅ) ತಮಾಷೆ, ಲೇವಡಿ, ಗೇಲಿ. ಉದಾ: ಮಾಸ್ತರಿಗೆ ಮಸ್ಕೀರಿ ಮಾಡುತ್ತೀಯಾ? (ಮರಾಠಿ-ಮಸ್ಕರೀ-ಪಾರಸಿಕ-ಮಶ್ಕರೀ)

10. ಮಸ್‌ಲಾ
(ಇ) ಒಂದು ವೇಳೆ, ಅಕಸ್ಮಾತ್ತಾಗಿ. ಉದಾ: ಮಸಲಾ ಅವಳು ನಿನ್ನನ್ನು ಒಪ್ಪಿದಳೆಂದಿಟ್ಟುಕೋ. (ಅರಬ್ಬಿ-ಮಸಲನ್-ಉದಾಹರಣೆಗೆ)

11. ಲೋಹಿತ
(ಅ) ಕೆಂಪು, ಕೆಂಬಣ್ಣದ, ತಾಮ್ರದಿಂದ ಮಾಡಿದ. ಉದಾ: ಲೋಹಿತ ವರ್ಣದ ಕಿರಣ. (ಸಂ.)

12. ಹಕನಾಕ
(ಈ) ನ್ಯಾಯಾನ್ಯಾಯವಿಲ್ಲದ, ವಿಚಾರಹೀನ, ನಾಲಾಯಖ. ಉದಾ: ಬರೇ ಹಕನಾಕ ಮನುಷ್ಯ.(ಮರಾಠಿ-ಅರಬ್ಬಿ ಹಕ್-ನಾ ಹಕ್ = ನ್ಯಾಯಾನ್ಯಾಯ)

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| 6- 8 | ಸರಿಯಿದ್ದರೆ | ... ಸಾಧಾರಣ |
| 9-10 | " | ... ಉತ್ತಮ |
| 11-12 | " | ... ಅತ್ಯುತ್ತಮ |

# ಬಂಡಾಯ



ಮೂಲ ಕಾದಂಬರಿ: ವ್ಯಾಸರಾಯ ಬಲ್ಲಾಳ

ಸಂಗ್ರಹ: ಎ.ರಮಾ ಕಾರಂತ

ಬಂಡಾಯ

# ಎರಡನೆಯ ಮತ್ತು ಕೊನೆಯ ಕಂತು

ಅಪಾಂಗ ಕಲ್ಯಾಣ ಕೇಂದ್ರದ ಉದ್ಘಾಟನೆ ರಾಜೀವನ ಮೂಲಕ ಆದಷ್ಟು ಬೇಗನೆ ಆಗುವುದು ಒಳ್ಳೆಯದೆಂದು ಸತೀಶ ನಿರ್ಧರಿಸಲು ತಿವಾರಿಯ ಕೊಲೆಯೇ ಮುಖ್ಯ ಕಾರಣವಾದರೂ ಕಲ್ಯಾಣಿಯ ಬಳಿಯೆ ನಿರ್ಮಾಣಗೊಳ್ಳುತ್ತಿದ್ದ 'ಫೈನ್ ಕೆಮಿಕಲ್ಸ್' ಕಾರ್ಖಾನೆಯ ಕೆಲಸ ಯಾವ ಕಾರಣಕ್ಕೂ ನಿಲ್ಲಬಾರದು ಎಂಬ ಆತುರವೂ ಬೆರೆತಿತ್ತು. ಅಮೇರಿಕನ್ 'ವಿಲ್‌ಬರ್‌ಸನ್' ಸಂಸ್ಥೆಯೊಂದಿಗೆ ಸಹಕರಿಸುವ ಕಾರ್ಯಕ್ರಮಕ್ಕೆ ಯಾವ ವ್ಯತ್ಯಯವೂ ಬರಬಾರದು.

ಪುಣೆಯ ರಾಜ ರಸ್ತೆಯ ಬಳಿಯೆ, ಸುಂದರವಾದ ಮಾವಿನ ತೋಪಿನಲ್ಲಿ 'ಕಲ್ಯಾಣಿ ಅಪಾಂಗ ಕಲ್ಯಾಣ ಕೇಂದ್ರ. ಸುಡು ಬಿಸಿಲಿನಲ್ಲೂ ತಂಪು ಸೂಸುವ ಮಾವಿನ ಮರಗಳ ನಡುವೆ, ನಾಲ್ಕಾರು ಕೋಣೆಗಳಿರಬಹುದಾದ ಪುಟ್ಟ ಕಟ್ಟಡ. ಕಟ್ಟಡದ ಮುಚ್ಚಿದ ಹೆಬ್ಬಾಗಿಲಿಗೆ ಬಣ್ಣದ ಟೇಪು... ಹೊರಗಡೆ ಚಪ್ಪರ, ವೇದಿಕೆ, ಮೈಕ್ ಎಲ್ಲ ಸಾರ್ವಜನಿಕ ವೈಭವದ ವೈಖರಿ ಸಾರುವ ಸಲಕರಣೆಗಳು.

''ವೆಲ್ ಕಮ್. ಬನ್ನಿ... ನಮ್ಮ ಬೇಡಿಕೆಯನ್ನು ಮನ್ನಿಸಿ ಬಂದುದಕ್ಕಾಗಿ ಧನ್ಯವಾದ'' ಎಂದ ಸತೀಶ ರಾಜೀವನ ಕೈಕುಲುಕುತ್ತಾ.

ಮೊದಲು ಉದ್ಘಾಟನೆ, ನಂತರ ಸಭೆ. ಹೆಬ್ಬಾಗಿಲಿನಿಂದ ವೇದಿಕೆಯ ಬಳಿ ಕುಳಿತಿದ್ದ ಅತಿಥಿಗಳ ಪರಿಚಯ ಮಾಡಿಕೊಟ್ಟಾಗ, ಅಲ್ಲಿದ್ದ ಸತೀಶನ ಉದ್ಯಮ ಸ್ನೇಹಿತರನ್ನು ಗುರುತಿಸುವುದು ರಾಜೀವನಿಗೆ ಸಾಧ್ಯವಾಗದಿದ್ದರೂ, 'ದೈನಿಕ ಸಕಾಳ್'ನ ಚಿತ್ರೆ ಮತ್ತು ಜಾಧವ್, 'ಇಂಡಿಯನ್ ಎಕ್ಸ್‌ಪ್ರೆಸ್'ನ ಕುಂಟೆ, ಹಾಗೂ ಕ್ಯಾಮರಾ ಹಿಡಿದ ಒಬ್ಬಿಬ್ಬರು ಪತ್ರಿಕೋದ್ಯಮಿಗಳನ್ನು ಗುರುತಿಸುವುದು ಕಷ್ಟವಾಗಲಿಲ್ಲ.

''ಹೀಗೆ ಬನ್ನಿ'' ಔಪಚಾರಿಕವೆನಿಸುವ ಪರಿಚಯದ ಕೆಲಸ ಮುಗಿಸಿ, ರಾಜೀವನನ್ನು ಕಟ್ಟಡದ ಬಾಗಿಲ ಬಳಿ ಕರೆದೊಯ್ದ ಸತೀಶ. ಹತ್ತಾರು ಜನರ ಹಿಂಡು ಬಾಗಿಲ ಬಳಿ ಹೋದಾಗ ಬಾಗಿಲಿಗೆ ಬಿಗಿದ ಬಣ್ಣದ

ಗೇಲ್... ಯಾಮಿನಿಯೇನಲ್ಲ. ಆಕೆಯ ಕೈಯಲ್ಲಿ ಬೆಳ್ಳಿಯ ತಟ್ಟೆಯಲ್ಲಿ ಬೆಳ್ಳಿಯ ಕತ್ತರಿ. ಆಕೆ ಕೈ ಮುಂದೆ ಮಾಡಿದಾಗ, ರಾಜೀವನಿಗೆ ತಾನು ಮಾಡಬೇಕಾದ ಕೆಲಸಗಳ ನೆನಪು ಬಂದು, ಕತ್ತರಿಯನ್ನೆತ್ತಿ ಬಣ್ಣದ ಪಟ್ಟಿಯನ್ನು ತುಂಡು ಮಾಡಿದಾಗ, ಸುತ್ತಲಿದ್ದವರೆಲ್ಲ ಕೈ ಚಪ್ಪಾಳೆ ತಟ್ಟಿದಾಗ ಮಾತ್ರ.... ''ಬುಲ್ಸ್ ಐ'' ಎಂದು ಜೆ.ಪಿ.ಯೇ ಹೇಳಿದಂತಾಗಿ ಭಯ. ಆಗ ಯಾಮಿನಿ ಬಳಿಯಲ್ಲೇ ನಿಂತದ್ದು ಕಂಡು ಬಂತು.

ವೇದಿಕೆಯಲ್ಲಿ ಎಲ್ಲರೂ ಕುಳಿತ ಮೇಲೆ ಮೊದಲು ಮಾತಾಡಿದ ಸತೀಶ ತಂದೆಯ ಆದರ್ಶ, ದೀನ ದಲಿತರನ್ನು ಉದ್ಧರಿಸುವ ಉದ್ಯಮಿಗಳ ಹೊಣೆಗಾರಿಕೆ, ಈ ಉದ್ಘಾಟನೆಗೆ, ಕಾರ್ಮಿಕರ ಉದ್ಧಾರದಲ್ಲಿ ತೊಡಗಿರುವ ಜನಪ್ರಿಯ ಟ್ರೇಡ್ ಯೂನಿಯನ್ ಮುಂದಾಳು ರಾಜೀವನನ್ನು ಕರೆಸಿದ ಔಚಿತ್ಯವನ್ನು ವಿವರಿಸಿ, ರಾಜೀವನನ್ನು ಉದ್ಘಾಟನೆಯ ಭಾಷಣ ಮಾಡುವಂತೆ ಕೇಳಿಕೊಂಡ. ರಾಜೀವ ಮಾತನಾಡಿದ,

''ನಾನು ನನ್ನ ಜೀವಮಾನದಲ್ಲಿ ಮಾಡದ ಕೆಲಸವನ್ನು ಇದೀಗ ಮಾಡಿ ಮುಗಿಸಿದ್ದೇನೆ. ಶರ್ಮಾಜಿ ಈ ಕೆಲಸ ನನ್ನಿಂದಾಗಬೇಕು ಎಂದು ಕೇಳಿಕೊಂಡಾಗ, ನನಗೆ ಸರ್ವಥಾ ಒಪ್ಪಿಕೊಳ್ಳುವ ಇಚ್ಛೆ ಇರಲಿಲ್ಲ. ಏಕೆಂದರೆ ನಮ್ಮ ದೀನ ದಲಿತರ, ದರಿದ್ರರ, ವಿಕಲಾಂಗರ ಉದ್ಧಾರ, ನಮ್ಮ ಶ್ರೀಮಂತ ವರ್ಗ ತಿಂದುಳಿದ ಎಂಜಲಿನಿಂದ, ತುಣುಕು ರೊಟ್ಟಿಯಿಂದ ಸಾಧ್ಯವಾಗುವುದಿಲ್ಲ. ಅದು ಸಾಧ್ಯವಾಗಬೇಕಾದ್ದು, ವರ್ಗವೈಷಮ್ಯವೆಲ್ಲ ಅಳಿದು, ಇಡೀ ಸಮಾಜವೇ ಬದಲಾದಾಗ. ಹಾಗೆಂದು ಶ್ರೀ ಶರ್ಮಾ ಮಾಡುತ್ತಿರುವ ಕೆಲಸಕ್ಕೆ ಬೆಲೆಯೇ ಇಲ್ಲವೆಂದು ಅರ್ಥವಲ್ಲ. ವಿಕಲಾಂಗ ಮಕ್ಕಳು ಬದುಕಿನ ಎಲ್ಲ ಸತ್ಯಗಳಿಂದ ವಂಚಿತರು, ಈ ಕಲ್ಯಾಣ ಕೇಂದ್ರ ಯಲ್ಲ ಎಂಬ ಸತ್ಯದ ಇನ್ನೊಂದು ಮುಖವನ್ನು ಕಾಣುವಂತಾಗಲಿ...'' ಆತನ ಭಾಷಣ ಮುಗಿದಾಕ್ಷಣ ಕರತಾಡನ. ನಂತರ ಹಾರ. ಸಭೆ ಮುಗಿದ ಮೇಲೆ ಉಪಾಹಾರ.

**

ಈ ಅಪಾಂಗ ಕಲ್ಯಾಣ ಕೇಂದ್ರದ ಪ್ರಸ್ತಾಪ ಮಾವ ಮನೆಯಲ್ಲಿ ಮಾಡಿದಾಗ, ಮೊದಲು ಲಕ್ಷ್ಮಿಗೆ ಅಂಥ ಆಸಕ್ತಿಯೇನೂ ಇರಲಿಲ್ಲ. ಇಷ್ಟು ದೂರದ ಕೊಂಪೆಯಲ್ಲಿ ಏನೋ ನಡೆಸಿದ್ದಾರೆ ಎಂದೇ ಅನಿಸಿತ್ತು. ಗಂಡನ ಪ್ರೀತಿ, ಮಾವನ ಆದರ, ಇವುಗಳ ಬೆಳಕಿನಲ್ಲೇ ಜೀವನಕ್ಕೆ ಅರ್ಥ ಕೊಡುವ ಅವಕಾಶ, ಅನಿವಾರ್ಯತೆ ಎರಡೂ ದೊರಕಿರುವಾಗ, ಆಕೆ ನಡೆಯುತ್ತಿದ್ದುದೆಲ್ಲ ಹೂವಿನ ಮೇಲೆ, ಕಾಣುತ್ತಿದ್ದುದೆಲ್ಲ ಅರಳು ಗುಲಾಬಿ. ಮನೆಯಲ್ಲಿ ನಯನಾ ಉದ್ವಿಗ್ನಳಾಗುತ್ತಿದ್ದ ಸಂದರ್ಭಗಳಲ್ಲೂ, ಆಕೆ ತೋರುತ್ತಿದ್ದ ಪ್ರತಿಭಟನೆ ಪ್ರತಿರೋಧಗಳಲ್ಲೂ ಲಕ್ಷ್ಮಿ ಸಂಘರ್ಷದ ಕ್ರಾಂತಿಯ ನೋವು ಕಾಣುತ್ತಿರಲಿಲ್ಲ. ಆಕೆ ಕಾಣುತ್ತಿದ್ದುದು ಮುಗ್ಧ ತಿಳಿಗೇಡಿತನವನ್ನೇ. ುನಾ ಕೂಡ ತನಗೇ ಅರ್ಥವಾಗದಂತಹ ಂಯವನ್ನು ಅತ್ತಿಗೆಯೊಡನೆ ವ್ಯವಹರಿಸುವಾಗ ಬೆಳೆಸಿಕೊಂಡಿದ್ದಳು. ಎಂತಹ ಸಿಟ್ಟಿನ ಸನ್ನಿವೇಶದಲ್ಲಿ ಕೂಡ, ಅತ್ತಿಗೆ ಕರೆದು ''ನಯನಾ, ಏನಮ್ಮಾ ಇದು?'' ಎನ್ನುತ್ತಿ ್ಬಗ ಪ್ರೀತಿಯ ಬ್ರಹ್ಮಾಂಡವೇ ದೊರಕಿದಂತೆ ಆಕೆಗೆ ಭಾಸವಾಗುತ್ತಿತ್ತು.

ಏನೋ ಸಮಾರಂಭದ ರಗಳೆ ಎಂದುಕೊಂಡೇ ಪನವೇಲಿಗೆ ಹೋಗಿದ್ದ ಲಕ್ಷ್ಮಿಗೆ ಅಲ್ಲಿಯ ವಿಕಲಾಂಗ ಮಕ್ಕಳನ್ನು ಕಂಡಾಗ ತಾವೇ ಕಟ್ಟಿಸಿದ ಕಲ್ಯಾಣ ಕೇಂದ್ರದಲ್ಲಿ ಹೊಸದೊಂದು ಜೀವನಕ್ರಮವೇ ಸೃಷ್ಟಿಗೊಳ್ಳುತ್ತಿದೆ ಎಂಬಂಥ ಆನಂದ. ಅಲ್ಲಿ ಮಾಡಬಹುದಾದಷ್ಟು ಕೆಲಸ ಕಾದಿದೆ, ಅದರ ಜವಾಬ್ದಾರಿ

ತನ್ನದು ಎಂಬ ಅನಿಸಿಕೆ.

ಇಡೀ ದಿನದ ಸಮಾರಂಭದ ಸಂಭ್ರಮದ ನಡುವೆಯೂ ಸತೀಶನಿಗೆ ಆಗಾಗ ಮೂಡುತ್ತಿದ್ದುದು 'ಅಮ್ಮ ಸತ್ತದ್ದು ಆಕಸ್ಮಿಕವೇ? ಆತ್ಮಹತ್ಯೆಯೇ?'' ಎಂಬ ಪ್ರಶ್ನೆಯೆ.

ರಾತ್ರಿ ಹನ್ನೆರಡು ಗಂಟೆಗೆ ಟೆಲಿಫೋನ್ ಬಾರಿಸತೊಡಗಿ ಸತೀಶನಿಗೆ ಎಚ್ಚರವಾಗಿ ರಿಸೀವರ್ ಕೈಗೆತ್ತಿಕೊಂಡ. ರಘು ಪಾಟಣಕರ್‌ನ ದನಿ: ''ಸರ್, ರಾತ್ರಿ ತೊಂದರೆ ಕೊಡುತ್ತಿದ್ದೇನೆ, ಕ್ಷಮಿಸಿ. ಇವತ್ತು ಕೊತ್ವಾಲ್ ಬಾರದಿದ್ದುದನ್ನು ಕಂಡು ನನಗೆ ಕಳವಳವಾಗಿತ್ತು. ಆ ಕಾರಣ ನಾನು ಠಾಣೆಯ ತನಕ ಹೋಗಿ, ನಮಗೆ ತೀರಾ ಹತ್ತಿರವಿರುವ ಒಬ್ಬಿಬ್ಬರು ಕೆಲಸದವರನ್ನು ಕಂಡು ಬಂದಿದ್ದೇನೆ. ಅವರೂ ಮಾತಾಡಲು ಹೆದರುತ್ತಾರೆ. ಆದರೂ ತುಸು ತುಸು ಹೇಳಿದರು. ಇವತ್ತು ಮಧು ಜಾಧವನ ಮನೆಯ ಸಮೀಪದ ತೋಟದಲ್ಲಿ ಸುಮಾರು ನೂರೈವತ್ತು ಜನ ಸೇರಿದ್ದಾರೆ. ಕಾರಣ ತಿಳಿದಿಲ್ಲವಾದರೂ ಏನೋ ಒಳಸಂಚು ನಡೀತಾ ಇದೆ ಅನ್ನೋದು ಸ್ಪಷ್ಟ ಸರ್. ನಾಳೆ ಫ್ಯಾಕ್ಟರಿಗೆ ಮತ್ತು ಲಕ್ಷ್ಮಿ ಮೆಶಿನ್ ಟೂಲ್ಸ್‌ಗೂ ಭೆಟ್ಟಿ ಕೊಟ್ಟು ಆಮೇಲೆ ವಿವರ ತಿಳಿಸುತ್ತೇನೆ.''

**

ಯಾಮಿನಿ ಮನೆ ಸೇರಿದಾಗ ಆಕೆ ನಿರೀಕ್ಷಿಸಿದಂತೆಯೆ 'ರಿಪೇರಿ ಬೋರ್ಡ'ನ ಕೆಲಸಗಾರರು ಅರೆ ಮನಸ್ಸಿನಿಂದ ಕೆಲಸ ಮುಗಿಸಿ ತೆರಳಿದ್ದರು... ಮಾಳಿಗೆಯ ಮೆಟ್ಟಿಲು ಹತ್ತುತ್ತಿದ್ದಂತೆಯೇ ಆಕೆ ಸಂಧಿಸಿದ್ದು ಕಸ, ಧೂಳು, ಗಾರೆಯ ತುಂಡು, ಮುರಿದ ಕಬ್ಬಿಣದ ಚೂರು... ಕೀಲಿ ತೆಗೆದು ಒಳಸೇರಿದಾಗ 'ಕ್ರಚ್' ಹಿಡಿದು ನಿಂತಿದ್ದ ರೌದ್ರಾವತಾರದ ಶ್ರೀಕಾಂತ: ''ಬಂದೆಯಾ ಬೋಸುಡೀ.. ಗಂಡನನ್ನು ಸಾಯಬಿಟ್ಟು ಮಿಂಡಂದಿರ ಜತೆ ಚಕ್ಕಂದವಾಡಿ ಬಂದೆಯಾ? ಉಳಿದ ದಿನಗಳಲ್ಲಿ ಆಫೀಸಿನ ನೆಪ. ಅದರೂ [illegible] ದಿಲ್ಲ ಅಲ್ಲವೇನೆ ಯಾಮೀ.... ಯಾಕೆ ಬೊಗಳೇ...'' ಎಲ್ಲ ನಿರೀಕ್ಷಿಸಿದಂತೆ, ಅದು ಸೃಷ್ಟಿಸುವ ನೋವಿನ ವೃತ್ತಗಳಲ್ಲಿ ಹಿಂಸೆ ರೂಢಿಯಾಗುತ್ತದೆ... ಗಂಡನನ್ನು ನೋಡುವಾಗ ಕರುಳು ಕಿವುಚಿ ಬರುತ್ತದೆ... ಹ್ಯಾಂಡ್ ಬ್ಯಾಗ್ ದೂರ ಒಗೆದು ಯಾಮಿನಿ ಗಂಡನ ಬಳಿ ಹೋಗಿ ಆತನ ಕೈಗೆ ತನ್ನ ಭುಜ ಕೊಡುತ್ತಾಳೆ, ''ಬನ್ನಿ''.

ಶ್ರೀಕಾಂತ ಹೆಂಡತಿಯ ಭುಜ ಹಿಡಿದೇ ಮೆಲ್ಲಮೆಲ್ಲನೆ ಕೋಣೆಯಲ್ಲಿ ಹೆಜ್ಜೆ ಹಾಕುತ್ತಿದ್ದ, ತನ್ನ ಜೀವನಾಸಕ್ತಿಯೆಲ್ಲ ಆ ಭುಜದಲ್ಲೆ ಕೇಂದ್ರೀಕೃತವಾಗಿದೆಯೋ ಎಂಬಂತೆ.

ಪನವೇಲ್‌ನ ದಾರಿಯಲ್ಲಿ ಕಾರಿನಲ್ಲಿ ಕುಳಿತಾಗ, ರಾಜೀವನ ಕೈ ಬೆರಳುಗಳು ಮೂಕ ಸಂಭಾಷಣೆ ನಡೆಸಿದ್ದವು. ಆ ಸಂಭಾಷಣೆಯ ಜೀವಂತಿಕೆಯೇ ಬದುಕಿಗೆ ಹೊಸ ಅರ್ಥ ಕೊಡುತ್ತಿತ್ತೆ? ತಿಳಿದಿಲ್ಲ. ಶ್ರೀಕಾಂತ ಭುಜ ಹಿಡಿದುಕೊಂಡೆ ಮಾತಾಡುವಾಗ, ಮಾತು ಅರ್ಥ ಕಳೆದುಕೊಳ್ಳುತ್ತದೆ. ಯಾಕಾಯಿತು ಹೀಗೆ? ತಿಳಿದಿಲ್ಲ.

ಸಂಜೆ ಯಾಮಿನಿ ಭೋಯೀವಾಡದ ರಾಜೀವನ ಮನೆ ತಲುಪಿದಾಗ ಅಲ್ಲಿ ದೊಡ್ಡ ಜಾತ್ರೆಯೇ ನೆರೆದಂತಿತ್ತು. ಕೋಣೆಯ ತುಂಬ ಜನ. ಎಲ್ಲ ರಾಜೀವನ ಪ್ರಮುಖ ಸಂಗಾತಿಗಳು. ರಘು, ಬಾಪಟ್, ಮಾನೆ, ಮಾಧವ ಸುರ್ವೆ, ಹೊರಗಡೆ ಬಾಲ್ಕನಿಯಲ್ಲಿ ಜನ. ಹಲವಾರು ಹೆಂಗಸರು. ಅವರಲ್ಲಿ ಪಾಂಡು ಸುತಾರನ ತಾಯಿಯನ್ನು ಗುರುತಿಸುವುದು ಯಾಮಿನಿಗೆ ಕಷ್ಟವಾಗಲಿಲ್ಲ.

ಕೋಣೆಯಲ್ಲಿ ಎಲ್ಲರ ನಡುವೆ ರಾಜೀವನೂ ಕುಳಿತಿದ್ದ. ಯಾಮಿನಿ ತನ್ನ ನಿತ್ಯದ ಜಾಗದಲ್ಲಿ ಹೋಗಿ ಕುಳಿತು ಮೇಜಿನ ಮೇಲಿದ್ದ ಕಾಗದ ಪತ್ರವನ್ನು ನೋಡತೊಡಗಿದಾಗ ರಾಜೀವ ಸಹಚರರನ್ನುದ್ದೇಶಿಸಿ ಮಾತನಾಡಿದ,

'ಸಿಂಟೆಕ್ಸ್' ಮುಷ್ಕರದಿಂದಷ್ಟೆ ನಮ್ಮೆಲ್ಲರ ಉದ್ಧಾರವಾಗುವುದಿಲ್ಲ. ಒಬ್ಬ ರಾಜೀವನಿಂದಲೂ ನಮ್ಮ ವರ್ಗಪೂರ್ಣ ವ್ಯವಸ್ಥೆಯ ವಿರುದ್ಧದ ಬಂಡಾಯ ಸಾಧ್ಯವಾಗುವುದಿಲ್ಲ. ಆದರೆ ಮುಷ್ಕರ ನಡೆಯುತ್ತಿದ್ದ ಕಾಲದಲ್ಲಿ, ಮುಷ್ಕರ ಮುರಿದು ಹೊಸ ಯೂನಿಯನ್ ಕಟ್ಟಿಕೊಳ್ಳುವ ಪ್ರಯತ್ನ ನಮ್ಮವರಿಂದಲೇ ನಡೆಯಿತಲ್ಲ, ಹತ್ತು ರಾಜೀವನಂಥವರು ಸೇರಿ ಮಾಡಬೇಕಾದ ಪ್ರಯತ್ನಗಳಿಗೆ ಪ್ರೋತ್ಸಾಹ ಕೊಡುವುದನ್ನೂ ಬಿಟ್ಟು, ಒಬ್ಬ ರಾಜೀವನ ಶಕ್ತಿಯನ್ನು ಕುಂದಿಸುವ ಕೆಟ್ಟ ಕೆಲಸದಿಂದ ಆಗುವ ಪ್ರಯೋಜನವಾದರೂ ಏನು ಎಂದು ನಾವು ಗಂಭೀರವಾಗಿ ಯೋಚಿಸಬೇಕು.''

''ಒಬ್ಬ ರಾಜೀವ ಹೋದರೆ ಹತ್ತು ದೇಶಪಾಂಡೆ ತಲೆಯೆತ್ತಬಹುದು'' ಮಾನೆ ಹೇಳಿದ.

ವಾಸ್ತವವಾಗಿ ಅಂದಿನ ಸಭೆ ನಡೆದದ್ದು 'ಸಿಂಟೆಕ್ಸ್' ಮುಷ್ಕರ ಮುಗಿದಿದೆಯೆಂಬ ಸಂತೋಷ ಸೂಚಿಸುವ ಸಲುವಾಗಿ. ಮಾನು ಶಿಂಗ್ರೆ ಹೇಳದೆಯೇ 'ಸಿಂಟೆಕ್ಸ್'ನಿಂದ ಪಲಾಯನ ಮಾಡಿದ ಮೇಲೆ ರಾಜೀವನ ಯಶಸ್ಸಿಗೆಂದು ಕೆಲಸ ಮಾಡಿದ ಶೌಕತ್ ಮತ್ತು ಯಾದವ ಅಲ್ಲಿಯೆ ಕುಳಿತಿದ್ದರು. ಒಪ್ಪಂದ ಮುಗಿದು ಮೂರು ವರ್ಷದ ಒಪ್ಪಂದಕ್ಕೆ ಮತ್ತೆ ಹಸ್ತಾಕ್ಷರ ಬಿದ್ದಿತ್ತು. ಆದರೆ ಸುತಾರ್‌ನ ಮರಣದ ಸೂತಕ ಕಳೆದಿರಲಿಲ್ಲ.

ಆಗ ರಾಜೀವ ಮಾತನಾಡಿದ. ''ಮಾನೆ, ಶೌಕತ್, ಯಾದವ, 'ಸಿಂಟೆಕ್ಸ್'ನ ಮುಷ್ಕರ ಮುರಿಯುವ ಪ್ರಯತ್ನದಲ್ಲಿ ಯಾರದೇ ಕೈವಾಡವಿರಲಿ ನಾವದಕ್ಕೆ ಹೆದರುವ ಕಾರಣ ವಿಲ್ಲ. ನೀವು ಮಾತು ಮಾತಿಗೆ ದೇಶಪಾಂಡೆಯ ಹೆಸರೆತ್ತುವುದು ಅನಗತ್ಯವೆಂದು ನನಗನಿಸುತ್ತದೆ. ದೇಶಪಾಂಡೆ ಮಾಡುತ್ತಿರುವುದು ನಾವು ಮಾಡುವ ಕೆಲಸವನ್ನೆ. ಇಂಥ ಹತ್ತು ಪ್ರಯತ್ನಗಳು ಒಂದಾಗಬೇಕು. ಪಾಂಡು ಸುತಾರನ ತಾಯಿಗೆ ಸದ್ಯ ಯೂನಿಯನ್ ಫಂಡಿನಿಂದ ಒಂದು ಸಾವಿರ ಕೊಡುತ್ತೇನೆ.''

ಕೋಣೆಯಲ್ಲಿ ಕುಳಿತಿದ್ದವರೆಲ್ಲ ಚೆದುರಿದಾಗ ಎಂಟು ಗಂಟೆ.

**

ರಘು ಪಾಟಣಕರನಿಗೆ ರಾತ್ರಿಯಿಡೀ ನಿದ್ರೆಯಿರಲಿಲ್ಲ, ಸತೀಶನಿಗೆ ಫೋನ್ ಮೂಲಕ ಸುದ್ದಿ ತಿಳಿಸಿದಾಗ ಮನಸ್ಸಿನ ಭಾರ ಸ್ವಲ್ಪ ಕಡಿಮೆಯಾಗುವುದೆಂಬ ಯೋಚನೆಯಿದ್ದರೂ ಹಾಗೇನೂ ಆಗಲಿಲ್ಲ. ಅಷ್ಟರಲ್ಲಿ ರಘು ನಿರೀಕ್ಷಿಸಿದಂತೆಯೇ ನಾಗೇಶ ಶರ್ಮಾರ ಟೆಲಿಫೋನ್ ಕರೆ, ''ಏನಾಯಿತು ರಘೂ, ರಾತ್ರಿ ಸತೀಶನಿಗೆ ಫೋನ್ ಮಾಡಿದ್ದೆಯಂತಲ್ಲ? ಅಂತೂ ಮಧುಜಾಧವ ತೊಂದರೆ ಕೊಡದೆ ಉಳಿಯುವುದಿಲ್ಲ. ಕರಣೀಕ ಫೋನ್ ಮಾಡಿದ್ದ...''

''ಏನಂತೆ? ನನಗೇನೂ ಅವನಿಂದ ಫೋನ್ ಬಂದಿಲ್ಲ.''

''ರಘೂ, 'ಲಕ್ಷ್ಮಿ'ಯ ಕೆಲಸಗಾರರೆಲ್ಲ ಬೆಳಗಿನ ಪಾಳಿಗೆ ಬಂದಿಲ್ಲ. 'ಮೆಶಿನ್ ಟೂಲ್ಸ್'ನಲ್ಲೂ ರಾತ್ರಿ ಪಾಳಿಯ ಕೆಲಸಗಾರರು ಮನೆಗೆ ಹೋದಂತಿಲ್ಲ. ನೀನೀಗ ಆದಷ್ಟು ಬೇಗ 'ಕಲ್ಯಾಣಿ'ಯಲ್ಲಿರಬೇಕಾದದ್ದು ಮುಖ್ಯ. ಅಲ್ಲಿನ ಪರಿಸ್ಥಿತಿ ನೋಡಿ ಫೋನ್ ಮಾಡಿದ ಮೇಲೆಯೇ ನಾನಲ್ಲಿಗೆ ಬರುತ್ತೇನೆ.''

''ಯಸ್ ಸರ್.''

''ನಿನ್ನೆ ರಾಜೀವನನ್ನು ಅಪಾಂಗ ಕೇಂದ್ರಕ್ಕೆ ಕರೆದದ್ದು ಎಷ್ಟು ಒಳ್ಳೆಯದಾಯಿತು ನೋಡು. ಈ ಸಂದರ್ಭದಲ್ಲಿ ಅವನ ಸ್ನೇಹ ಸಹಾಯ ನಮಗೆ ಬೇಕಾಗಲೂಬಹುದು.''

''ಸರ್, ನಮ್ಮಲ್ಲಿ ಏನೂ ತೊಂದರೆಯಾದರೂ ಅದು ರಾಜೀವನ ಯೂನಿಯನ್ನಿನಿಂದಲ್ಲ ಸರ್, ಅದು ದೇಶಪಾಂಡೆಯಿಂದ. ಮತ್ತು ರಾಜೀವ ನಮ್ಮಲ್ಲಿಗೆ ಬಂದ ಮಾತ್ರಕ್ಕೆ ನಮಗೆ ಸಹಾಯ ಮಾಡಿಯಾನು ಎಂಬ ಭರ

ವಸೆಯೇನಿಲ್ಲ.'' ಶರ್ಮಾ ರಿಸೀವರ್ ಕೆಳಗಿಟ್ಟ ಸದ್ದು ಕೇಳಿಸಿದ ಮೇಲೆ ರಘು ತನ್ನ ರಿಸೀವರ್ ಕೆಳಗಿರಿಸಿದ.

ಟೆಲಿಫೋನ್ ಗಂಟೆ ಮತ್ತೆ ಬಾರಿಸಿದುದರಿಂದ ರಿಸೀವರ್ ಎತ್ತಿಕೊಂಡಾಗ ಮೆನನ್ ಮಾತಾಡುತ್ತಿದ್ದ, ''ರಘೂ ಆದಷ್ಟು ಬೇಗ ಬಾ... ಬೆಳಗಿನ ಸರದಿಗೆ ಯಾವ ಕೆಲಸಗಾರರೂ ಬಂದಿಲ್ಲ. ಕೊತ್ವಾಲ ಕೂಡ... ಎಲ್ಲ ಗೇಟಿನ ಬಳಿ ಇದ್ದಾರೆ. ಹೊರಗೆ ಏನು ಕಾಣಿಸುತ್ತೆ ಗೊತ್ತೆ.... ದೇಶಪಾಂಡೆಯ ಝುಂಡಾ...''

''ಸರಿ ಮೆನನ್, ಇನ್ನರ್ಧ ಗಂಟೆಯೊಳಗೆ ನಾನಲ್ಲಿಗೆ ಬರ್ತೇನೆ'' ಎಂದ ರಘು.

ಮಧ್ಯರಾತ್ರಿಗೆ ರಘು ಪಾಟಣಕರ್ ತಿಳಿಸಿದ ಸುದ್ದಿಯಿಂದಾಗಿಯೊ ಎಂಬಂತೆ, ಸತೀಶ ಬೆಳಗ್ಗೆ ತಲೆ ನೋವು ಹಿಡಿದುಕೊಂಡೇ ಎದ್ದಿದ್ದ. ತಂದೆ ವಾಕಿಂಗ್ ಮುಗಿಸಿ 'ಹರಿ ಓಂ' ಎಂದು ಒಳಗೆ ಬರುವಾಗ, ಸತೀಶ ರಘುವಿಗೆ ಫೋನ್ ಮಾಡಲೆಂದು ನಂಬರ್ ಹೊಂದಿಸಿಕೊಳ್ಳುವವನು ತಂದೆಯನ್ನು ನೋಡಿ ರಿಸೀವರ್ ಕೆಳಗಿರಿಸಿದ.

ಅನಪೇಕ್ಷಿತವಾಗಿ ಎಂಬಂತೆ ನಯನಾ ಟೆರೇಸಿನ ಬಾಗಿಲಲ್ಲಿ ನಿಂತಿದ್ದಳು. ಸತೀಶ ತಂಗಿಯೆಡೆಗೆ ನೋಡಿದ.. ತಾಯಿಯದೇ ನೆನಪು ತರುವ ಅಂಗಸೌಷ್ಠವ. ಏಕೋ ಅಮ್ಮನ ನೆನಪಿನ ಹಿಂದೆಯೇ ಬೆಂಕಿಯ ನೆನಪೇ ಓಡಿಯೋಡಿ ಬರುತ್ತಿದೆ.

'ಅಮ್ಮ ಸತ್ತದ್ದು ಆಕಸ್ಮಿಕವೇ? ಆತ್ಮಹತ್ಯೆಯೇ?'

ನಾಗೇಶಶರ್ಮಾ ಮಗಳನ್ನೇ ನೋಡುತ್ತಿದ್ದರು, ತನ್ನ ದೃಷ್ಟಿಯಲ್ಲಿ ಪ್ರೀತಿಯ ಮಹಾಪೂರವೇ ಹರಿಯುತ್ತಿದೆಯೆಂಬಂತೆ. ಅರ್ಥವಾಗದ ಕಳವಳದ ಹಿನ್ನೆಲೆಯಲ್ಲಿ ಈ ಪ್ರೀತಿ ಅರಳಬೇಕು... ತಾನು ನಿರೀಕ್ಷಿಸಿದಂತೆ ನಯನಾಳ ಬದುಕು ಅರಳಲಿಲ್ಲವೆಂಬ ಕೊರಗು, ಅವರಿಗೆ ಇಂದು ನಿನ್ನೆಯದಲ್ಲ.

ನಯನಾ ಉದ್ದೇಶಪೂರ್ವಕವಾಗಿಯೇ ಸತೀಶನಿದ್ದಾಗಲೇ ತಂದೆಯೊಡನೆ ಮಾತಾಡಬೇಕೆಂದು ಅಲ್ಲಿಗೆ ಬಂದಂತಿತ್ತು. ತಂದೆ, ಅಣ್ಣ ಕುಳಿತಲ್ಲಿಗೆ ಬಂದು, ಒಂದು ಕುರ್ಚಿಯನ್ನೆಳೆದು ಕುಳಿತಾಗ, ಲಕ್ಷ್ಮಿ ಸಹಜವಾಗಿ ನಗುತ್ತ ಕೇಳಿದಳು, ''ಏನೇ ನಯನಾ, ಇದು ತೀರಾ exclusive ಪಪ್ಪ - ಮಕ್ಕಳ ಕಾನ್ಫರೆನ್ಸೊ ಅಥವಾ ನನಗೂ ಜಾಗ ಇದೆಯೊ?''

''ಅತ್ತಿಗೆ, ನೀನು ಕೇಳಬಾರದಂತಹ ಗುಟ್ಟಿನ ವಿಚಾರ ಏನೂ ಇಲ್ಲ. ಮೈ ಲೈಫ್ ಇಸ್ ಆ್ಯನ್ ಓಪನ್ ಬುಕ್. ಪಪ್ಪಾ, ನಾನು ಏನು ಹೇಳಿದರೂ ನೀವು ರೇಗುವುದಿಲ್ಲಾಂತ ನನಗೆ ಗೊತ್ತು. ಆದರೆ ಅದರಂತೆ ನನಗೆ ನಡೆದುಕೊಳ್ಳೋದಿಕ್ಕಾಗಲ್ಲ. ಅದು ನಿಮಗೂ ಗೊತ್ತು. ಅದಕ್ಕೆ ಅಣ್ಣನ ಇದಿರೇ ಮಾತನಾಡಬೇಕೆಂದು ಇಲ್ಲಿಗೆ ಬಂದಿದ್ದೇನೆ,'' ಎಂದಳು.

''ಏನಮ್ಮಾ ಅದು?'' ಎಂದರು ನಾಗೇಶ ಶರ್ಮಾ ತಮ್ಮ ಮನಸ್ಸಿನ ಚಡಪಡಿಕೆಯನ್ನು ಹತ್ತಿಕ್ಕಲು ಪ್ರಯತ್ನಿಸುತ್ತಾ.

''ನಾನು ಮೂರು ತಿಂಗಳ ಹಿಂದೇನೆ ಹೇಳಿದೆ ಪಪ್ಪಾ... ನನಗೆ ಯಾವ ಡಿರೆಕ್ಟರ್ ಷಿಪ್ ಕೂಡ ಬೇಡಾಂತ.... ಆದರೆ ಪುನಃ ನನ್ನ ಖಾತೆಗೆ ಹಣ ಬರ್‍ತಾ ಇದೆ.''

''ಅದು ನಿನ್ನ ಹಕ್ಕಿನ ಹಣ ನಯನಾ.... ಅದನ್ನು ನೀನು ಬಿಟ್ಟು ಕೊಡುವ ಮಾತೇ ಇಲ್ಲ. ಆ ದಿನವೇ ಹೇಳಿದ್ದೆ, ಇಂಥ ಮಾತೆಲ್ಲ ಇನ್ನು ಮುಂದೆ ಆಡಬಾರದೂಂತ.''

ನಯನಾ ವಿಕಾರವಾಗಿ ನಕ್ಕುಬಿಟ್ಟಳು.

''...ನಿಮಗೆ ಮಗಳ ಮೇಲಿನ ಪ್ರೀತಿಯಿಂದ ಎಷ್ಟೆಲ್ಲ ಕೊಡಬೇಕು ಅನಿಸುತ್ತೆ. ಆದರೆ ನನಗೆ ಯಾಕೊ ಯಾವುದೂ ಬೇಡಾಂತ ಕಾಣುತ್ತೆ. ಆದಕ್ಕೇ ಪಪ್ಪಾ, ನಾನಿವತ್ತು ಮನೆ ಬಿಟ್ಟು ಪಾಂಡಿಚೇರಿಗೆ ಹೋಗ್ತಾ ಇದೀನಿ... ಎಂದರೆ ಎಲ್ಲ ಸಂಬಂಧ ಕಳೆದುಕೊಂಡು ಹೋಗ್ತಾ ಇದೀನಿಂತ ಇದರ ಅರ್ಥವಲ್ಲ. ಎಷ್ಟು ಸಮಯಾಂತಾನೂ ಹೇಳೋಕಾ

ಗಲ್ಲ. ಬಂದರೂ ನಾನು ಯಾವ ಹಕ್ಕನ್ನೂ ಕೇಳೋಲ್ಲ.''

ಶರ್ಮಾರ ಮುಖ ಕೆಂಪಾಗಿತ್ತು. ಕಣ್ಣಂಚಿನಲ್ಲಿ ನೀರು ತುಳುಕುತ್ತಿತ್ತು.

''ಪಪ್ಪಾ, ನನ್ನ ನಿರ್ಧಾರ ಯಾವೊಂದು ಉದ್ವೇಗದ ಕ್ಷಣದಲ್ಲೂ ಮಾಡಿದ್ದಲ್ಲ. ನಿಮಗೆ ಬೇಸರವಾಗುತ್ತೇಂತಲೂ ನಾನು ಈ ನಿರ್ಧಾರವನ್ನು ಬದಲಿಸೋ ಹಾಗಿಲ್ಲ. ನಾನು ಹೋಗೋದು ಖಂಡಿತ ಪಪ್ಪಾ, ಇವೊತ್ತು ಮದ್ರಾಸ್ ಎಕ್ಸ್‌ಪ್ರೆಸ್‌ಗೆ ಹೋಗ್ತಾ ಇದೀನಿ.''

ತಂದೆಯ ಕೈ ಗಡಗಡ ನಡುಗುತ್ತಿದ್ದುದನ್ನು ಗಮನಿಸಿದ ಸತೀಶನಿಗೆ ತಡೆಯಲಾಗಲಿಲ್ಲ, ''ಹೋಗಲಿ ಬಿಡಿ ಪಪ್ಪಾ... ಇವೊತ್ತಲ್ಲ ನಾಳೆ ಬಂದೇ ಬರ್ತಾಳೆ. ಹೇಳಿದ ಯಾವ ಮಾತು ಅವಳು ಕೇಳಿದಾಳೇಂತ ನೀವು ಉಪದೇಶ ಮಾಡ್ತಾ ಇದೀರಿ... Let her go'' ಎಂದ.

## ಭಾಗ ಎರಡು

# ಸಂಘರ್ಷ

ಕಲ್ಯಾಣಿಯ ಗೇಟಿನ ಬಳಿ ಬರುತ್ತಿದ್ದಂತೆಯೇ ಅಲ್ಲಿ ನೆರೆದಿದ್ದ ಕಾರ್ಮಿಕ ಸಮುದಾಯವನ್ನು ಗಮನಿಸಿ ರಘು ಬಾಗಿಲಿಗೆ ತುಸು ದೂರದಲ್ಲಿಯೇ ಟ್ಯಾಕ್ಸಿಯಿಂದ ಇಳಿದು ಫ್ಯಾಕ್ಟರಿಯ ಹೆಬ್ಬಾಗಿಲ ಬಳಿ ನಡೆದು ಹೋಗುತ್ತಿರುವಾಗ ಗೋಡೆಯ ತುಂಬ ಅಂಟಿಸಿದ್ದ ಭಿತ್ತಿ ಪತ್ರಗಳು ''ಮೋಘೆಯ ಸಸ್ಪೆನ್‌ಶನ್ ಆಜ್ಞೆ ಹಿಂದೆಗೆಯಿರಿ. ಶೆಟ್ಟಿಗೆ ಹತ್ತು ಸಾವಿರ ಪರಿಹಾರ ಕೊಡಿ... ಎಲ್ಲರಿಗೆ ಇಪ್ಪತ್ತು ತಿಂಗಳ ಬೋನಸ್ ಕೊಡಿ,'' ಎಂದೆಲ್ಲ ತಪ್ಪು ತಪ್ಪು ಅಕ್ಷರದಲ್ಲಿ ಸಾರುತ್ತಿದ್ದ ಹಲವಾರು ಭಿತ್ತಿ ಪತ್ರಗಳು. ರಘು ಒಳಗೆ ಹೋಗುತ್ತಿದ್ದಾಗ ಒಮ್ಮಿಂದೊಮ್ಮೆಗೆ ನೆರೆದಿದ್ದ ಗುಂಪಿನಲ್ಲಿ ಸದ್ದೆದ್ದಿತು, ''ಶರ್ಮಾ ಚಮಚಾ ಹ್ವಾ ಹೈ... ರಘು ಪಾಟಣಕರ್ ಹ್ವಾ ಹೈ.... ಬಂದ್ ಕರೋ.... ಶರ್ಮಾಶಾಹಿ ಬಂದ್ ಕರೋ... ಸತೀಶ ಶರ್ಮಾ ಮುರ್ದಾಬಾದ್...''

ಒಳಗೆ ಮೆನನ್‌ನ ಕೋಣೆಯಲ್ಲಿ 'ಲಕ್ಷ್ಮಿ'ಯ ಕರಣೀಕ, 'ಮೆಶಿನ್ ಟೂಲ್ಸ್'ನ ಗಾಯಕವಾಡ್ ರಘುವಿನ ದಾರಿಯನ್ನೇ ಕಾಯುತ್ತಿದ್ದರು, ''ಯಾವ ರೀತಿಯ ಮಾತುಕತೆಗೂ ರಘು ಮುಂದಿರಲಿ'' ಎಂದು ನಾಗೇಶ ಶರ್ಮಾ ಹೇಳಿದ್ದರಿಂದ.

ಒಳಗಡೆ ಯಾರೂ ಕೆಲಸ ಮಾಡಲಾಗದ ಪರಿಸ್ಥಿತಿ. ಬೈಲರ್ ಆದಿಯಾಗಿ ಯಂತ್ರಗಳೆಲ್ಲ ಸ್ತಬ್ಧ. ಉಳಿದೆರಡು ಕಾರ್ಖಾನೆಗಳಲ್ಲೂ ಕೆಲಸ ನಿಂತಿದೆಯೆಂಬ ತಿಳುವಳಿಕೆಯೇ ಭಯ ಕುದುರಿಸುತ್ತಿತ್ತು. ''ಏನಿದು ಒಮ್ಮಿಂದೊಮ್ಮೆಗೆ ಗಲಾಟೆ?'' ಎಂದ ರಘು.

''ದೇಶಪಾಂಡೆ'' ಎಂದರು ಮೆನನ್ ಮತ್ತು ಕರಣೀಕ ಒಟ್ಟಾಗಿಯೆ. ಶರ್ಮಾ ಸಂಸ್ಥೆಗಳಲ್ಲಿ ಈತನಕ ಕಾಲಿಡದ ದೇಶಪಾಂಡೆ, ಯಾರನ್ನೂ ಈ ತನಕ ಕಂಡಿರದ ದೇಶಪಾಂಡೆ, ಇಲ್ಲಿ ಸತ್ಯವಾಗಿದ್ದ.

ಮೆನನ್ ತನ್ನ ಕ್ಯಾಬಿನ್ನಿನಿಂದ ಹೊರ ಬಂದು ರಘುವನ್ನು ಕರೆದು ಹೆಬ್ಬಾಗಿಲ ಮರೆಯಲ್ಲೇ ನಿಂತು, ನಡೆಯುತ್ತಿದ್ದ ಸಭೆಯನ್ನು ನೋಡುವಂತೆ ಒತ್ತಾಯಿಸಿದ.

ಗೇಟಿನ ಒಂದು ಕಂಬದ ಮೇಲೆ ಮಧು ಜಾಧವ ನಿಂತಿದ್ದ. ಅವನ ಪಕ್ಕದಲ್ಲೇ ಎಲ್ಲಿ ಬಿದ್ದೇನೋ ಎಂದು ದಂಟೆಗೆ ಅಂಟಿಕೊಂಡಂತೆ ಕೊತ್ವಾಲ್ ನಿಂತಿದ್ದ. ಜಾಧವ ಮಾತಿಗಾರಂಭಿಸಿದ್ದ, ''ಈ ಶರ್ಮಾ ಎಷ್ಟು ನೀಚ ಎಂಬುದಕ್ಕೆ ನಿನ್ನೆ 'ಪೆನ್‌ವೇಲ್'ನಲ್ಲಿ ತೆರೆದ ಒಂದು ಅಪಾಂಗ ಕೇಂದ್ರವೇ ಸಾಕ್ಷಿ. ಯಂತ್ರದಲ್ಲಿ ಕೈ ಮುರಿದುಕೊಂಡ ಶೆಟ್ಟಿಗೆ ಹತ್ತು ಸಾವಿರ ಪರಿಹಾರ ಕೊಡಲು ಒಪ್ಪದ ಈ ಶರ್ಮಾ, ಅಪಾಂಗರ ಉದ್ಧಾರಕ್ಕೆ ಕೇಂದ್ರ

ಕಟ್ಟಿದ್ದಾನೆ. ಧಿಕ್ಕಾರ ಹೇಳಿ'' ಸಭೆ ಹುಚ್ಚೆದ್ದು ಕೂಗುವಂತೆ 'ಧಿಕ್ಕಾರ' ಎಂದಿತು. ''ಈ ಕೇಂದ್ರದ ಉದ್ಘಾಟನೆಗೆ ಯಾರು ಹೋಗಿದ್ದಾರೆ ಗೊತ್ತೆ? ಇಂಜನಿಯರಿಂಗ್, ಶ್ರಮಿಕ ಯೂನಿಯನ್ನಿನ ಅಧ್ಯಕ್ಷರು. ಮುಂಬಯಿ 'ಕಾಮಗಾರ್' ವರ್ಗಗಳಲ್ಲಿ ಹೆಸರು ಪಡೆದವರು. ಹೆಸರು ಹೇಳಲೇ?''

''ಸಾಂಗಾ, ಸಾಂಗಾ,'' ಎಂದು ಬಂತು ಒಕ್ಕೊರಲಿನ ದನಿ.

''ರಾಜೀವ ಭಾಯಿ'' ಎಂದ ಮಧು. ''ಇವರೇ ಕಾರ್ಮಿಕ ಶತ್ರುಗಳು. ಕಾರ್ಮಿಕರ ಸ್ನೇಹಿತರೆಂದುಕೊಂಡು ಕಾರ್ಮಿಕರ ಕುತ್ತಿಗೆ ಕೊಯ್ಯುವವರು. ಇವರಿಗೇನೆನ್ನಬೇಕು ಹೇಳಿ...'' ಪುನಃ ಧಿಕ್ಕಾರ, ಧಿಕ್ಕಾರ. ''ಮುಂಬಯಿ ಶ್ರಮಿಕರ ಏಕಮಾತ್ರ ಪುಢಾರಿ ಯಾರು?''

''ದೇಶಪಾಂಡೆ. ಆಮ್‌ಚೆ ದೇಶಪಾಂಡೆ'' ಎಂದಿತು ಸಭೆಯ ಕಂಠಶ್ರೀ. ರಘು ನಿಂತೇ ಇದ್ದ.

ದೂರದಲ್ಲಿ ಸತೀಶನ ಕಾರು ಬರುತ್ತಿತ್ತು. ಸತೀಶ ಮತ್ತು ನಾಗೇಶ ಶರ್ಮಾ ಕಾರಿಂದಿಳಿದು ಒಳಗೆ ಬರುತ್ತಿದ್ದಾಗ ರಘು ''ಆಫೀಸಿನ ಕೆಲಸಗಾರರನ್ನು ಬಿಟ್ಟು ಎಲ್ಲರೂ ಮುಷ್ಕರ ಹೂಡಿದಂತಿದೆ'' ಎಂದ. ''ಅದು ಅರ್ಥವಾಗತ್ತೆ'' ಎಂದ ಸತೀಶ. ಅವನ ಮುಖ ಗಂಭೀರವಾಗಿತ್ತು. ಸತೀಶ ಕಾರಿನಿಂದಿಳಿದಾಗಲೇ ಗೇಟಿನ ಬಳಿ ನೇತು ಹಾಕಿದ್ದ ಎರಡು ಪ್ರತಿಕೃತಿಗಳನ್ನೂ ನೋಡಿ ಸಿಡಿಮಿಡಿಗೊಂಡಿದ್ದ. ಅದರ ಕೆಳಗೆ ಸತೀಶ ಹಾಗೂ ನಾಗೇಶ ಶರ್ಮಾರ ಹೆಸರು ಬರೆಯಲಾಗಿತ್ತು.

''............ತಮಾಷೆ ಏನಿದೆಯೆಂದು ನೀವೆಲ್ಲ ಹೊರಗೆ ನೋಡುತ್ತಾ ಇದ್ದೀರಿ?

ಕೊತ್ವಾಲ ಎಲ್ಲಿದ್ದಾನೆ?''

''ಕೊತ್ವಾಲ ಅವರ ಜತೆ ಸೇರಿಕೊಂಡಿದ್ದಾನೆ... ಅವನ ಮುಖದಲ್ಲಿ ಭಯದ ಛಾಯೆಯಿದೆ... ತಿವಾರಿ ಸತ್ತ ಮೇಲೆ ಆತ ಮೊದಲಿನ ಕೊತ್ವಾಲ ಅಲ್ಲ ಸರ್.... ಯಾಕೋ ಹೆದರಿಕೊಂಡಿದ್ದಾನೆ.''

''ಎಲ್ಲೂ ಕೆಲಸ ನಡಯುತ್ತಿಲ್ಲ.''

''ಎಲ್ಲ ಕೆಲಸಗಾರರೂ ಜತೆ ಸೇರಿದ್ದು ಇದೇ ಮೊದಲ ಸಲ. ನಿನ್ನೆ ಮಧು ಜಾಧವ ಕರೆದಿದ್ದ ಸಭೆಗೆ ಸುಮಾರು ಐನೂರು ಕೆಲಸಗಾರರು ಹೋಗಿದ್ದರೆಂದು ಸುದ್ದಿ''

ಎರಡು ಕ್ಷಣ ಮಾತಿರದೆ ಕೂತಿದ್ದ ಸತೀಶ ಕೇಳಿದ, ''ಪೋಲೀಸ್ ಸಹಾಯ ಕೇಳಿದ್ದೀರೇನು?''

''ಇನ್ನೂ ಕೇಳಿಲ್ಲ. ಕೆಲಸದವರೆಲ್ಲ ಗೇಟಿನ ಹೊರಗಡೆಯೇ ಇದ್ದಾರೆ. ಇವರ ಮೂಡ್ ಏನೂಂತ ತಿಳೀದೆ ಜಗಳಕ್ಕೆ ಅವಕಾಶ ಕೊಡೋದು ಬೇಡಾಂತ...''

''ಸರಿ'', ಎಂದ ಸತೀಶ ಎಲ್ಲಾ ಕಾರ್ಖಾನೆಗಳ ಪ್ರಮುಖರನ್ನುದ್ದೇಶಿಸಿ, ''ನಮ್ಮ ಆಫೀಸಿನೊಡನೆ ಸಂಪರ್ಕ ಸಾಧಿಸಿ, ಎಲ್ಲ ಸರಕುಗಳ ಸಂಗ್ರಹ ಪೂರೈಕೆಯ ಸ್ಪಷ್ಟ ಚಿತ್ರ ಕೊಡಿ. ಗಂಟೆ ಗಂಟೆಗೂ ಆಫೀಸಿಗೆ ವರದಿ ಬೇಕು... ಯಾವ ಫ್ಯಾಕ್ಟರಿಯಲ್ಲಿಯೂ ಹಿಂಸೆಯಾಗದಂತೆ ಎಚ್ಚರ. ಬೆಂಕಿಯಿಡಬಹುದಾದ ಪ್ರಯತ್ನದ ಬಗ್ಗೆ ಜಾಗ್ರತೆ ವಹಿಸಿ. ಯಾವ ರೀತಿ ಮುಂದುವರಿಯುವುದಿದ್ದರೂ, ರಘು, ಮೆನನ್ನರ ಮೂಲಕವೇ ಕೆಲಸ ನಡೆಯಲಿ. ರಘು, ಅಗತ್ಯ ಬಿದ್ದರೆ ನೀನು ಪೋಲೀಸು ಸ್ಟೇಶನ್ನುಗಳ ಸಂಪರ್ಕ ಸಾಧಿಸಿ, ಅವರ ಸಹಾಯ ಕೇಳು. ಈಗ ಯಾರೊಡನೆ ಕೂಡಾ ಏನೂ ಮಾತುಕತೆ ಬೇಡ. ನಾವೇನೂ ಬಗ್ಗುವವರಲ್ಲವೆಂಬ ತಿಳುವಳಿಕೆ ಅವರಿಗಿರಲಿ. I don't care for that Deshpande.''

ಎಲ್ಲ ಅಧಿಕಾರಿಗಳೊಡನೆ ಮಾತನಾಡಿ, ತಂದೆಯನ್ನು ಮನೆಯಲ್ಲಿ ಬಿಟ್ಟು ಹಾಗೆಯೆ ನರಿಮನ್ ಪಾಯಿಂಟಿಗೆ ತೆರಳಬೇಕೆಂದು ಸತೀಶ ನಿರ್ಧರಿಸಿದ್ದರೂ ಲಕ್ಷ್ಮಿಯನ್ನು ನೋಡಿ ಹೋಗೋಣವೆಂದು ತಂದೆಯ ಜತೆಗೇ ಲಿಫ್ಟ್ ಹತ್ತಿ ಮೇಲೆ ಬಂದ. ಕರೆ ಗಂಟೆಯ ಸದ್ದಿಗೆ ಬಾಗಿಲು ತೆರೆದದ್ದು ಲಕ್ಷ್ಮಿ. ಆಕೆಯ ಕಣ್ಣಂಚಿನಲ್ಲಿ ನೀರು ತುಳುಕುತ್ತಿತ್ತು. ಯಾವಾಗಲೂ ಮಲ್ಲಿಗೆಯಂಥ ನಗು ಅರಳುತ್ತಿದ್ದ ಮುಖದಲ್ಲಿ ನೋವು - ಕಣ್ಣಲ್ಲಿ ನೀರು.... ''ಏನಾಯಿತೆ? ಅಳುತ್ತಿರುವುದೇಕೆ?'' ಕಂಗೆಟ್ಟ ಸತೀಶ ಕೇಳಿದ.

''ಎಷ್ಟು ಹೇಳಿದರೂ ನಯನಾ ಕೇಳಲೇ ಇಲ್ಲ. ಒಂದು ಗಂಟೆಯ ಮುಂಚೆ ಹೊರಟು ಹೋಗಿದ್ದಾಳೆ...'' ನಾಗೇಶ ಶರ್ಮಾರ ಮುಖ ಕೆಂಪಾಯಿತು... ನಿಧಾನವಾಗಿ ಹೆಜ್ಜೆಯಿಡುತ್ತಾ ಒಳಗೆ ನಡೆದರು.

ಸೋಫಾದಲ್ಲಿ ಕುಳಿತು ಮಡದಿಯನ್ನು ತಬ್ಬಿ ಹಿಡಿದಿದ್ದ ಸತೀಶನಿಗೆ ಕೂಡ, ನಯನಾ ಇದಿರು ನಿಂತಾಗಲೆಲ್ಲ ಸದಾ ಹೊತ್ತು ತರುತ್ತಿದ್ದ ತಾಯಿಯ ನೆನಪು.

'ಅಮ್ಮ ಸತ್ತದ್ದು ಆಕಸ್ಮಿಕವೆ? ಆತ್ಮಹತ್ಯೆಯೆ?'

**

ಭೋಯಿವಾಡದ ರಂಗೇರಿ ಚಾಳಿನ ರಾಜೀವನ ಕೋಣೆಯಲ್ಲಿ ಒಂದು ಶೂನ್ಯ ಶಕ್ತಿಯ ದೀಪ ನಂದುವುದೆಂಬುದೇ ಇಲ್ಲ. ಎಂಥ ಬೆಳಕಿದ್ದರೂ ರಾಜೀವನಿಗೆ ಅದು ಬೇಕು. ವಾಸ್ತವವಾಗಿ ರಾಜೀವ ನಿದ್ರಿಸಲು ಅವಕಾಶ ಸಿಗುತ್ತಿದ್ದ ಮೂರು ನಾಲ್ಕು ತಾಸುಗಳ ಅವಧಿಯಲ್ಲಿ ಯೋಚನೆಯಲ್ಲಿಯೇ ಒಂದೆರಡು ತಾಸು ಕಳೆಯುವುದು ರೂಢಿ.

ಮಧ್ಯ ರಾತ್ರಿ ಕಳೆದು ಭೋಯಿವಾಡದ ರಸ್ತೆಗಳಲ್ಲಿ ಸದ್ದಡಗುತ್ತಿರುವಂತೆಯೆ, ಕೋಣೆಯಲ್ಲಿಯ ಶೂನ್ಯ ಶಕ್ತಿಯ ಬೆಳಕಿನಲ್ಲೂ ಓದಲೆಂದು ಕೈಯಲ್ಲಿ 'ಮಿರ್ಡಾಲ್'ನ ಗ್ರಂಥ ಹಿಡಿದಿದ್ದಾಗ ಯಾಮಿನಿಯ ನೆನಪು....

ನಾಲ್ಕು ದಿನದಿಂದ ಯಾಮಿನಿ ಭೋಯಿವಾಡದ ಕಡೆ ಸುಳಿದಿರಲಿಲ್ಲ. ಸೋಮವಾರ ಸಂಜೆ ಆಕೆ ಬಂದಾಗಲೂ 'ಸಿಂಟೆಕ್ಸ್'ನ ಸಭೆ ಮುಗಿದಿತ್ತು.

ಹಲವಾರು ಏರು ತಗ್ಗುಗಳನ್ನು ಹಾದು ಬಂದಿದ್ದ 'ಶಕ್ತಿ' ಮುಷ್ಕರದ ದಾರಿಯಲ್ಲಿ ಕೂಡ, ತನ್ನವರೆನ್ನಿಸಿಕೊಳ್ಳುವವರೇ ಮುಳ್ಳು ಕಂಟಿಗಳನ್ನು ತೂರುತ್ತಿದ್ದ ವಿಚ್ಛಿದ್ರ ನೀತಿಯನ್ನು ಸಹಿಸಿಯೂ ರಾಜೀವ ಗೆದ್ದಿದ್ದ. ಅದಕ್ಕಾಗಿ ರಾಜೀವನಿಗೆ ಅಭಿನಂದನೆ ಸಲ್ಲಿಸಲು, ಯೂನಿಯನ್ ಕಾರ್ಯದರ್ಶಿ ಸೆಬಿನೊ ಡಿಸೋಜಾ ಸಭೆ ಕರೆದಿದ್ದ.

ರಾತ್ರಿ ರಂಗೇರಿ ಚಾಳಿಗೆ ಮರಳಿದಾಗ ಮಾತ್ರ ಆಕೆ ಬಂದು ಹೋಗಿರಬಹುದೇ ಎಂಬ ಆಶೆ ಬೆರೆತ ಕುತೂಹಲವಿತ್ತು. ಆಕೆ ಬಂದಿರಲಿಲ್ಲ. ಮೇಜಿನ ಮೇಲಿನ ಕಾಗದ ಪತ್ರಗಳೆಲ್ಲ ಎಂದಿನಂತೆಯೆ. ಯಾರೂ ಯಾವುದನ್ನೂ ಮುಟ್ಟಿರಲಿಲ್ಲ.

ಶುಕ್ರವಾರ ಸಂಜೆ ಆರುಗಂಟೆಗೇ ಕೋಣೆಗೆ ಮರಳಿದ್ದ ರಾಜೀವನಿಗೆ ಅಂದು ಯಾಮಿನಿ ಬಂದೇ ಬರುವಳೆಂದು ಆಶೆಯಿತ್ತು. ಮೇಜಿನ ಮೇಲೆ ಕಾಗದಗಳ ಹೊರೆಯೇ ಇತ್ತು, ಕೆಲವಕ್ಕೆ ಉತ್ತರ ಬರೆದಿದ್ದ, ಕೆಲವಕ್ಕೆ ಬರೆಯಬೇಕಿತ್ತು. ಗೋದು ಮಾವಶಿ ತರುವ ರೊಟ್ಟಿ ತಿಂದು ಪೋರ್ತುಗೀಸ್ ಚರ್ಚಿನ ತನಕ ಹೋಗುವುದೆಂದು ಯೋಚಿಸುತ್ತಿದ್ದಾಗ, ಮೆಲ್ಲಗೆ ಬಾಗಿಲು ತಟ್ಟುವ ಸದ್ದು, ಅರ್ಧ ತೆರೆದಿದ್ದ ಬಾಗಿಲನ್ನು ದೂಡಿ ಒಳಬಂದದ್ದು ಶರ್ಮಾ ಸಂಸ್ಥೆಗಳ ಲೇಬರ್ ಆಫೀಸರ್ ರಘು ಪಾಟಣಕರ್.

ಒಮ್ಮೆಗೇ ಬಂದ ರಘುವನ್ನು ನೋಡಿ ರಾಜೀವನಿಗೆ ತುಸು ವಿಸ್ಮಯವಾದರೂ ತೋರಗೊಡದೆ, ''ಬನ್ನಿ ಪಾಟಣಕರ್ ಸಾಬ್,.....ನನ್ನನ್ನೇ ಹುಡುಕಿಕೊಂಡು ಬರುವ ಅಗತ್ಯವೇನಿತ್ತು?'' ಎಂದು ಕೇಳುತ್ತಲೇ ರಘುವನ್ನು ಕುಳಿತುಕೊಳ್ಳಲು ಸೂಚಿಸಿದ. ನಾಗೇಶ ಶರ್ಮಾರ ಒತ್ತಾಯವಲ್ಲದಿದ್ದರೆ ರಘು ಅಲ್ಲಿಗೆ ಬರುವವನೇ ಅಲ್ಲ...

''ಹೀಗೆಯೇ ಬಂದೆ ರಾಜೀವ ಭಾಯಿ, ಸಮಾರಂಭದ ಫೋಟೋಗಳೆಲ್ಲ ಬಂದಿವೆ. ಒಂದು ಸೆಟ್ ಮುಖ್ಯ ಅತಿಥಿಗೆ ಕೊಡುವುದೂ ರೂಢಿ... ಹಾಗೆಂದು ಅದನ್ನು ತಂದಿದ್ದೇನೆ'' ಎಂದ ರಘು. ತನ್ನ ಬ್ರೀಫ್‌ಕೇಸ್ ಬಿಡಿಸಿ ಫೋಟೋಗಳಿದ್ದ ಒಂದು ಕಟ್ಟನ್ನು ನೀಡಿದ. ''ಅಪಾಂಗ ಕಲ್ಯಾಣ ಕೇಂದ್ರದ ಉದ್ಘಾಟನೆಯಾದ ಮರುದಿನವೇ ನಮ್ಮ ಎಲ್ಲಾ ಕಾರ್ಖಾನೆಗಳಲ್ಲೂ ಮುಷ್ಕರ ಆರಂಭವಾಗಿದೆ. ಆದರೆ ನೀವು ಮನಸ್ಸು ಮಾಡಿದರೆ ಈ ಸಮಸ್ಯೆ ಬಗೆ ಹರಿಯುವುದು ಎಂದು ಶರ್ಮಾ ತಿಳಿದಿದ್ದಾರೆ.''

''ನಾನು?''

''ಹೌದು, ನಮಗೆ ಯಾರ ಮೇಲೂ ದ್ವೇಷವಿಲ್ಲ. ಆದರೆ ದೇಶಪಾಂಡೆಯ ನಾಯಕತ್ವವನ್ನು ಸಹಿಸದ ಕೆಲಸಗಾರರ ಮೇಲೆ, ಹಿಂಸೆಯ ಒತ್ತಾಯ ತರಲಾಗುತ್ತದೆ. ನೀವು ಮನಸ್ಸು ಮಾಡಿ, ದೇಶಪಾಂಡೆಯ ಕುರಿತು ಅತೃಪ್ತಿಯಿರುವ ಎಲ್ಲರನ್ನೂ ಕೂಡಿಸಿ ಈಗಿರುವ ಮನ್ನಣೆ ಪಡೆದ ಯೂನಿಯನ್ ಜಾಗದಲ್ಲಿ ಹೊಸ ಯೂನಿಯನ್ ಕಟ್ಟಲು ಸಾಧ್ಯವಿದೆಯಾದರೆ, ಸೌಹಾರ್ದಯುತ, ಮೆನೇಜ್‌ಮೆಂಟ್, ಕೆಲಸಗಾರರ ಬಾಂಧವ್ಯವನ್ನು ಸ್ಥಾಪಿಸಲು, ಸಾಧ್ಯವಾಗಲೂ ಬಹುದು.''

ರಾಜೀವನಿಗೆ ಸಿಟ್ಟೇರುತ್ತಿತ್ತು. ಸಾಧ್ಯವಾದಷ್ಟು ಸಂಯಮ ತಂದುಕೊಂಡು, ''ಎಂದರೆ ದೇಶಪಾಂಡೆ ನಡೆಸುತ್ತಿರುವ ಮುಷ್ಕರ ಮುರಿಯಲು ನಾನು ನೆರವಾಗಬೇಕು ಎಂದು ಇದರರ್ಥ ಅಲ್ಲವೆ? ಗೆಟ್‌ಔಟ್'' ಎಂದ ರಾಜೀವ ಎದ್ದು ನಿಂತು, ''ಈಗಿಂದೀಗಲೇ ಇಲ್ಲಿಂದ ಹೊರಡಿ. ನಿಮ್ಮ ಶರ್ಮಾಗೂ ಹೇಳಿ, ದೇಶಪಾಂಡೆ ನಡೆಸುತ್ತಿರುವ ಮುಷ್ಕರಕ್ಕೆ ನನ್ನ ಸಂಪೂರ್ಣ ಸಹಾನುಭೂತಿಯಿದೆ. ಆ ಕರಿಗಾಲಿನ ಕೆಲಸಗಾರರಿಗೆ ಎಷ್ಟು ಹಣದ

ಆಶ್ವಾಸನೆ ಕೊಟ್ಟಿದ್ದೀರಿ? Will you please get out..."

ರಘು ತನ್ನ ಜೀವಮಾನದಲ್ಲೇ ಅನುಭವಿಸದ ಅವಮಾನದ ನೋವನ್ನು ಅನುಭವಿಸುತ್ತ, ಬ್ರೀಫ್‌ಕೇಸ್ ಮುಚ್ಚಿಕೊಂಡು ಅಲ್ಲಿಂದ ಹೊರಟವ. "ಕ್ಷಮಿಸಿ ನಿಮಗೆ ನೋವು ಕೊಡುವ ಉದ್ದೇಶ ನನಗಿರಲಿಲ್ಲ" ಎಂದು ತಡವರಿಸುತ್ತಲೇ ಬಾಗಿಲ ಕಡೆ ನಡೆದ. ಆತನ ಕೈ ನಡುಗುತ್ತಿತ್ತು. ತನ್ನ ಬ್ರೀಫ್ ಕೇಸಿನಲ್ಲಿ ತಂದಿದ್ದ ಹತ್ತು ಸಾವಿರ ರೂಪಾಯಿಗಳ ನೋಟುಗಳ ಕಟ್ಟು ಆತನನ್ನು ಅಣಕಿಸುವಂತೆ ಭಾಸವಾಯಿತು. ಆದಷ್ಟು ಬೇಗ ಅಲ್ಲಿಂದ ದೂರ ಹೋಗಬೇಕು ಎನ್ನುವವರಂತೆ ನಡೆಯತೊಡಗಿದ.

ರಘು ಹೊರಟು ಹೋದರೂ ರಾಜೀವನ ಸಿಟ್ಟು ಇಳಿಯಲಿಲ್ಲ. ರಘು ಬಿಟ್ಟು ಹೋಗಿದ್ದ ಫೋಟೋಗಳ ಕಂತೆಯನ್ನು ಹರಿದು ಚೂರು ಮಾಡಿ ಕಸದ ಬುಟ್ಟಿಗೆಸೆಯುತ್ತಿದ್ದಂತೆಯೇ ಬಾಗಿಲ ಸದ್ದಾಯಿತು. ಒಳಗೆ ಬರಲೇ ಎಂದು ಕೇಳದೆ ನೇರವಾಗಿ ಒಳಗೆ ಬಂದದ್ದು ಯಾಮಿನಿ... "ಯಾಮೀ...." ಎಂದ ರಾಜೀವ ಸಂತೋಷದಿಂದ, ಒಮ್ಮೆಗೇ ಸಿಟ್ಟಿನ ಆವೇಶವೆಲ್ಲ ಇಳಿದವನಂತೆ, "ಎಲ್ಲಿದ್ದೆ ಯಾಮೀ... ಇಷ್ಟು ದಿನ? ಯಾಕೆ ಬರಲಿಲ್ಲ ಯಾಮೀ ನಾಲ್ಕು ದಿನ" ಒಂದೇ ಸಮನೆ ಪ್ರಶ್ನೆಗಳು...

ಯಾಮಿನಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಭುಜ ಹಿಡಿದಿದ್ದ ರಾಜೀವನ ಕೈ ಸಡಲಾಗಿ, "ಏನಾಯಿತು ಯಾಮೀ, ಏಕೆ ಮಾತನಾಡುವುದಿಲ್ಲ" ಎಂದು ಯಾವ ಸಂಕೋಚವೂ ಕಾಡದಂತಹ ತನ್ನ ಅಪ್ಪುಗೆಯಲ್ಲಿ ಆಕೆಯನ್ನು ಬಿಗಿ ಹಿಡಿದಾಗ ಅವನ ಎದೆಯ ಮೇಲೆ ತಲೆಯಿರಿಸಿ ಬಿಕ್ಕುತ್ತಲೇ ಯಾಮಿನಿ ಹೇಳಿದಳು. "ಪಂಚಾಪಕೇಶ ಅಯ್ಯರ್ ಸತ್ತು ಹೋದ ರಾಜೂ" ಎಂದು. ರಾಜೀವನಿಗೆ ಯಾರಿದು ಪಂಚಾಪಕೇಶ ಅಯ್ಯರ್ ಎಂದು ಅರ್ಥವಾಗಲಿಲ್ಲ. ಆದರೆ ಯಾಮಿನಿಯ ಬಂಧನ ಬಿಗಿಯಾಗುತ್ತಿರುವಂತೆ, ಸಂಜೆಯ ಉದ್ವೇಗದ ಕಾವೆಲ್ಲ ಇಳಿದಂತೆ ಹಿತಕರವೆನಿಸಿ ಆಕೆಯ ಮುಖವನ್ನು, ತುಟಿಯನ್ನು ಚುಂಬಿಸಿದ.

**

ತನ್ನ ಮೂರು ಕಾರ್ಖಾನೆಗಳಲ್ಲೂ ಮುಷ್ಕರ ಆರಂಭವಾಗಿ ಕೆಲಸ ನಿಂತ ದಿನ ಸತೀಶ ಅನುಭವಿಸಿದಂಥ ಅಸಮಾಧಾನವನ್ನು ಆತ ಈ ಜೀವಮಾನದಲ್ಲೇ ಅನುಭವಿಸಿರಲಿಲ್ಲ. ಏರುತ್ತಲೇ ಹೋಗುತ್ತಿದ್ದ ಕ್ಷಿಪಣಿಯೊಂದಕ್ಕೆ ತಡೆ ಹಾಕಿದಂತೆ,.... ಯೋಜನೆಗಳ ಚಿತ್ರ ಬರೆಯುತ್ತಿರುವಾಗಲೇ ಮಸಿ ಕುಡಿಕೆ ಅದರ ಮೇಲೆ ಬಿದ್ದಂತೆ, ತನ್ನ ಸಾಹಸ ಪ್ರವೃತ್ತಿಗೇ ಇದು ಒಂದು ಪಂಥಾಹ್ವಾನವೆಂದು ಸತೀಶ ತಿಳಿದಿದ್ದ.

ಬೆಳಗಿನ ವಾಕಿಂಗ್ ಮುಗಿಸಿ, 'ಹರಿ ಓಂ' ಎನ್ನುತ್ತ 'ಇಕನಾಮಿಕ್ ಟೈಮ್ಸ್' ಓದುತ್ತಿದ್ದ ಮಗನ ಬಳಿ ಬರುವ ನಾಗೇಶ ಶರ್ಮಾ ಈಗ ನೇರವಾಗಿ ತನ್ನ ಕೋಣೆಗೆ ಹೋಗಿ, ಎರಡು ಕ್ಷಣ ತಡೆದು ಬರುತ್ತಿದ್ದರು. ಎರಡು ದಿನ ಸತೀಶ ಗಮನಿಸಲಿಲ್ಲವಾದರೂ ಮೂರನೆಯ ದಿನವೂ ಅವರು ಅದೇ ರೀತಿ ಕೋಣೆಗೆ ತೆರಳಿ, ಬರುವಾಗ, 'ಕಲ್ಯಾಣಿ, ಕಲ್ಯಾಣಿ', ಎಂದು ಎರಡು ಬಾರಿ ತಾಯಿಯ ಹೆಸರನ್ನು ಉಚ್ಚರಿಸಿದಾಗ ಆಶ್ಚರ್ಯವಾಗಿತ್ತು...

ರಘುವಿನಿಂದ ಫೋನ್ ಬಂದಿತ್ತು, ರಾಜೀವನ ಹತ್ತಿರ ಹೋದಾಗ ನಡೆದ ಘಟನೆಯ ಪೂರ್ಣ ವಿವರ ಹೇಳದಿದ್ದರೂ, ತನ್ನ ಯತ್ನ ವಿಫಲವಾದ ಬಗ್ಗೆ, ರಾಜೀವ ಯಾವ ಆಮಿಷಕ್ಕೂ ಒಳಗಾಗುವವನಲ್ಲವೆಂಬ ಕುರಿತು ತಿಳಿಸಿದ್ದ.

ಆಫೀಸಿಗೆ ಹೋದಾಗ ಕಂಪನಿಯ ಎಲ್ಲ ಅಧಿಕಾರಿಗಳೂ ಅಲ್ಲಿದ್ದರು. ಇವರು ಹಾಕಿದ ನೋಟೀಸಿಗೆ ಯಾರೂ ಹೆದರಿದಂತೆ ಕಾಣ

ಲಿಲ್ಲ. 'ಮಶಿನ್ ಟೂಲ್ಸ್'ನ ಅರ್ಧ ಟನ್ ಕ್ರೇನಿನಲ್ಲಿ, ಐವತ್ತು ಟನ್ ತುಂಬಿಸಿ, ಇನ್ನೇನು ಲಾರಿ ಹೊರಡಬೇಕು ಎನ್ನುವಾಗ ಒಮ್ಮಿಂದೊಮ್ಮೆಗೆ ಕಲ್ಲು ಬೀಳಲಾರಂಭಿಸಿತು. ಇಬ್ಬರು ಹೆಲ್ಪರ್ ಮತ್ತು ಒಬ್ಬ ಡ್ರೈವರನ ಹಣೆಗೂ ಕಲ್ಲೇಟು. ಒಂದು ಲಾರಿಯ 'ವಿಂಡ್ ಶೀಲ್ಡ್' ಪುಡಿ ಪುಡಿ!

ಮೂರು ಕಾರ್ಖಾನೆಗಳಲ್ಲೂ ಉತ್ಪಾದನೆ ನಿಂತಿದೆ. ಸರಕು ಪೂರೈಕೆಯೂ ನಿಂತಿದೆ. ಕೋರೆಗಾಂವ್‌ಕರ್‌ನಿಂದಲೂ, "ದೇಶಪಾಂಡೆಯೊಡನೆ ರಾಜೀ ಮಾಡಿಕೊಳ್ಳಬಾರದೇಕೆ?" ಎಂಬ ಸಲಹೆ.

**

ಗಿರಿಗಾಂವ ಲಕ್ಷ್ಮೀಬಾಗ್ ಸಭಾಗೃಹದಲ್ಲಿ ಮದುವಣಗಿತ್ತಿಯಾಗಿ, ತಂದೆಯ ಕಾಲು ಮುಟ್ಟಿ ನಮಸ್ಕರಿಸಿ, ಯಾಮಿನಿ ಶ್ರೀಕಾಂತನ ಜತೆ ಭವಿಷ್ಯವನ್ನೆದುರಿಸಲು ತನ್ನ ಹೊಸ ಮನೆಗೆ ಹೊರಟು ನಿಂತಾಗ ಅಪ್ಪಾಜಿ ಬಿಕ್ಕಿ ಬಿಕ್ಕಿ ಅತ್ತಿದ್ದರು.

ಪೋಲಿಯೋ ರೋಗಿಯಾಗಿ, ಜೀವನೋತ್ಸಾಹವನ್ನೆಲ್ಲ ಹಗಲುಗನಸುಗಳಿಗೆ ಮೀಸಲಿರಿಸಿ ತನಗೇ ಇನ್ನಷ್ಟು ಬಲವಾಗಿ ಅಂಟಿಕೊಂಡ ಶ್ರೀಕಾಂತ, ತನ್ನ ಪರಿಚಯವನ್ನು ಒತ್ತಿ ಒತ್ತಿ ಹೇಳುತ್ತ ನಿಂತಾಗ, ಆತನಂತೆಯೇ ಆತನ ಕ್ಷೀಣವಾದ ಕಾಲು, ನಡೆಯಲು ಆಧಾರ ಕೊಡುವ 'ಕ್ರಚ್' ಸತ್ಯವೆನಿಸಿದಾಗ, ಪೋರ್ಚುಗೀಸ್ ಚರ್ಚ್ ಬಳಿ ಇರುವ ಮನೆಯೂ 'ರಿಪೇರ್ ಬೋರ್ಡ್'ನವರು ತಂದಿರಿಸಿದ ಬಲವಾದ ಊದುಗಂಬಗಳ ಆಧಾರದಲ್ಲಿ ನಿಂತಿದೆಯೆಂಬ ಧೈರ್ಯವಿರುವಾಗ, ಬಿಡುಗಡೆಯ ಯೋಚನೆಯೇ ಅಪ್ರಸ್ತುತ.

ನಿವೃತ್ತನಾಗಿ ಮಕ್ಕಳೊಂದಿಗೆ ಬದುಕು ಸಾಗಿಸುತ್ತಿರುವ ಪಂಚಾಪಕೇಶ ಅಯ್ಯರ್, ರೋಗಿಯಾಗಿ ಮನೆಯಲ್ಲೇ ಉಳಿದಿದ್ದ ಶ್ರೀಕಾಂತನ ಸ್ನೇಹದಲ್ಲಿ ತನ್ನ ಏಕಾಂತವನ್ನು ಕಳೆಯಲು ಯತ್ನಿಸುತ್ತಿದ್ದ ನೆರೆಯ ಪಂಚಾಪಕೇಶ ಅಯ್ಯರ್ ಸತ್ತು ಹೋದ...

ತನ್ನನ್ನು ತಬ್ಬಿ ಹಿಡಿದಿದ್ದ ರಾಜೀವನ ಅಪ್ಪುಗೆ ಬಿಗಿಯಾಗುತ್ತಿದ್ದಂತೆ, ಆ ಬಾಹುಬಂಧನದಲ್ಲಿ ತನ್ನೆಲ್ಲ ಬಂಧನಗಳನ್ನು ಕಡಿದುಕೊಳ್ಳುತ್ತಿದ್ದೇನೆ ಎಂಬ ಉನ್ಮಾದದಲ್ಲಿ, ಸಂತೋಷದಲ್ಲಿ, ಯಾವ ಸಂದೇಹ, ಸಂಕೋಚಗಳೂ ಯಾಮಿನಿಯನ್ನು ಕಾಡಲಿಲ್ಲ.

ಮರುದಿನ ರಾಜೀವನ ಕೋಣೆಗೆ ಹೋದಾಗ ಆತ ಇರಲಿಲ್ಲ. ಆದರೆ ಆತನ ಮೇಜಿನ ಮೇಲೆ ತನಗೆಂದೇ ಒಂದು ಕೆಂಪು ಗುಲಾಬಿಯನ್ನು ಇರಿಸಿಹೋಗಿದ್ದ ರಾಜೀವ.

ರಾಜೀವ ಎಂದಿನಂತೆಯೇ ಬಂದ. ಒಂದು ರಾತ್ರಿ ಬೆಳಗಾಗುವುದರೊಳಗೆ ತಮ್ಮಿಬ್ಬರಲ್ಲಿ ಸಂಬಂಧ ಪಡೆದುಕೊಂಡ ಹೊಸ ಅರ್ಥದ ಅರಿವೇ ಇಲ್ಲದವರಂತೆ ಬಂದ. ಬಂದವನು ತಾನು ಮಾಡಿರಿಸಿದ್ದ ಕೆಲಸವೇನೆಂದು ನೋಡುವ ಪರೀಕ್ಷಕನಂತೆ, ಎಲ್ಲವನ್ನೂ ನೋಡಿಯಾದ ಮೇಲೆ "ನೋಡು ಯಾಮಿನೀ, ಇವರು ಶಿರೋಡೆ ಅಂತ, ವಿಕ್ರೋಲಿಯಲ್ಲಿರುವ ವರ್ತಾಕ್ ಸ್ಟೀಲ್ ಕೆಲಸಗಾರರ ಸಂಘಟನೆಯ ಯೂನಿಯನ್‌ಗೆ ಅಧ್ಯಕ್ಷ ಪದವಿಯ ಕೊಡ್ತೀವಂತೆ ನಿನ್ನನ್ನು ಕರೆಯಲು ಬಂದಿದ್ದಾರೆ. ನಾಳೆ ಅವರು ಸಭೆ ಕರೆದಿದ್ದಾರೆ. ನೀನು ಹೋಗಬೇಕು."

"ನನ್ನನ್ನ?"

"ಹೌದು, ನಿನ್ನನ್ನೇ. ನಾನು ಶುಕ್ರವಾರ ದಿಲ್ಲಿಗೆ ಹೋಗುತ್ತೇನೆ... ಇಂಡಸ್ಟ್ರಿಯಲ್ ರಿಲೇಶನ್ ಬಿಲ್ ಬಗ್ಗೆ ಕೇಂದ್ರ ಸರಕಾರದ ಸಭೆಯಿದೆಯಲ್ಲ, ಅದಕ್ಕೆ. ಮತ್ತೆ ಎರಡು ವಾರ ಜಮ್‌ಶೇಡ್‌ಪುರ, ಧನಬಾದ್‌ಗಳ ತನಕ ಹೋಗಿ ಈ ತಿಂಗಳ ಅಂತ್ಯಕ್ಕೆ ಮರಳುತ್ತೇನೆ... ನಾನಿರದಿದ್ದರೂ ಮಾನೆ ಇದ್ದಾನೆ, ರಘು ಬಾಪಟ್ ಬರುತ್ತಾನೆ... ಜತೆಗೆ ನೀನೂ..."

"ನಾನೇನು ಮಾಡುವ ಹಾಗಿದ್ದೇನೆ ಅಲ್ಲಿ?"

"ನಾನು ಮಾಡುವ ಕೆಲಸ ನೀನು ಮಾಡ ಬೇಕು."

ಶುಕ್ರವಾರದ ತನಕವೂ ಯಾಮಿನಿಗೆ ಭೋಯಿವಾಡದ ಕಡೆ ಹೋಗಲು ಸಾಧ್ಯವಾಗ ಲಿಲ್ಲ. ಬಂದ್ ಆಚರಣೆಯ ದಿನ ಮನೆ ಯಲ್ಲೇ ಇದ್ದುದರಿಂದ, ಒಮ್ಮೆ ನಡೆದೇ ಭೋಯಿವಾಡಕ್ಕೆ ಹೋಗುವುದೇ ಎಂದು ಯೋಚಿಸಿದರೂ ಶ್ರೀಕಾಂತನ ಮುಖ ನೋಡಿ ಆ ಯೋಚನೆ ಕೈಬಿಟ್ಟಳು. ಒಮ್ಮಿಂ ದೊಮ್ಮೆಗೇ ಶ್ರೀಕಾಂತ ಮೌನಿಯಾಗಿದ್ದ, ಅನಗತ್ಯವೆನಿಸುವ ಯಾವ ಮಾತೂ ಆತನ ಬಾಯಿಯಿಂದ ಹೊರಡುವುದೇ ಇಲ್ಲ ವೇನೋ ಎನಿಸುವಷ್ಟು ಮೌನಿಯಾಗಿದ್ದ. ರಾಜೀವ ತನ್ನ ಜೀವದ ಜೀವವೆನಿಸಿದ ರಾತ್ರಿ ಯಿಂದ ಶ್ರೀಕಾಂತನ ಕುರಿತ ಎಲ್ಲ ಸಂಬಂಧ ಗಳೂ ಕಡಿದಂತೆ, ಈಗ ತನ್ನ ಅನುಕಂಪದ ಬೆಳಕಿನಲ್ಲಿ ಮಾತ್ರ ಆತನನ್ನು ನೋಡಿಯೇನು ಎಂದು ಯಾಮಿನಿ ಭಾವಿಸಿದ್ದಳು. ಈಗ ಆ ಅನುಕಂಪವೇ ಹೆಮ್ಮರದಂತೆ ಬೆಳೆಯುತ್ತಿದೆ ಯೇನೋ ಎಂದು ಯೋಚಿಸುವಷ್ಟು ಶ್ರೀಕಾಂತ ಮೌನಿಯಾಗಿದ್ದ.

ಭೋಯಿವಾಡದ ನಂಟು ಬೆಳೆದಂದಿನಿಂದ 'ಬೇಗ ಬಂದು ಬಿಡುತ್ತೇನೆ' ಎಂದು ಹೇಳದ ಯಾಮಿನಿ ಈಗ 'ಬೇಗ ಬಂದು ಬಿಡುತ್ತೇನೆ' ಎನ್ನತೊಡಗಿದಳು... ತನ್ನ ಮನಸ್ಸಿನ ಭಯ ವನ್ನೂ ಆಂತರಿಕ ತೊಳಲಾಟವನ್ನೂ ಹತ್ತಿಕ್ಕ ಲೆಂದೇ, ತಾನಾಗಿಯೇ ಮಾತನಾಡುತ್ತಿದ್ದಳು. ಅನಗತ್ಯವಾದ ಪ್ರಶ್ನೆಗಳನ್ನು ಕೇಳುತ್ತಿದ್ದಳು. ಭೋಯಿವಾಡಾದ ಕೆಲಸದ ವಿವರ ಹೇಳುತ್ತಿ ದ್ದಳು. ಆಕೆ ಮಾತಾಡದಿದ್ದುದು ರಾಜೀವನ ಕುರಿತು ಮಾತ್ರ. ಆದರೆ ಶ್ರೀಕಾಂತನಿಂದ ಯಾವ ಮಾತಿಗೂ ಪ್ರತಿಕ್ರಿಯೆಯಿಲ್ಲ. ಅಸಹ ನೆಯನ್ನೂ ತೋರಿಸದೆ ಆತ ಯಾಮಿನಿಯ ಮಾತು ಕೇಳುತ್ತಿದ್ದ, ಒಮ್ಮೊಮ್ಮೆ ಒಂದು ಬಾರಿಯಾದರೂ ಶ್ರೀಕಾಂತ 'ಎಲ್ಲಿಗೆ ಹಾದ ರಕ್ಕೆ ಹೋಗಿದ್ದೆ?' ಎಂಬ ಪ್ರಶ್ನೆ ಕೇಳಬಾರ ದಿತ್ತೆ? ಎಂದು ಯಾಮಿನಿಗೆ ತೋರಿದುದಿದೆ, ಆದರೆ ಶ್ರೀಕಾಂತನ ಬಾಯಿಂದ ತಪ್ಪಿ ಕೂಡ ಒಂದು ಅವಾಚ್ಯ ಶಬ್ದ ಹೊರಡಲಿಲ್ಲ.

ರಾಜೀವ ಹೋಗಿ ವಾರವೇ ಕಳೆಯಿತು.



ಫೆಡರೇಶನ್ ಸಭೆಯ ಭಾನುವಾರ ಮೋಡ ಕವಿದ ದಿನ, ಯಾಮಿನಿ ಮಧ್ಯಾಹ್ನ ಒಂದು ಘಂಟೆಗೆ ಹೊರಟು ನಿಂತಾಗ ಮಾತ್ರ, ಕೆಲವು ದಿನಗಳಿಂದ ಆತ ಕೇಳದೆ ಇದ್ದ ಪ್ರಶ್ನೆಯನ್ನು ಕೇಳಿದ: ''ಇವತ್ತು ಕೂಡ ಹೋಗಬೇಕೇ ಯಾಮೀ...'' ಎಂದು, ತುಂಬ ದಿನ ಕಳೆದು ಮೊದಲ ಬಾರಿಗೆ ಈ ಪ್ರಶ್ನೆ ಕೇಳಿದನಲ್ಲಾ ಎಂಬ ಸಮಾಧಾನದ ಜೊತೆಗೇ ಯಾಮಿನಿಗೆ ತೀವ್ರ ಕಳವಳ, ''ಒಂದು 'ಫೆಡರೇಶನ್' ಸಭೆಯಲ್ಲಿ ಭಾಗವಹಿಸದೆ ನಿರ್ವಾಹವಿಲ್ಲ, ನಾಲ್ಕು ಐದರ ಹೊತ್ತಿಗೆ ಮರಳಿ ಬಂದು ಬಿಡುತ್ತೇನೆ...''

ಶ್ರೀಕಾಂತ ಪ್ರತ್ಯುತ್ತರ ಹೇಳಲಿಲ್ಲ.....

ಫೆಡರೇಶನ್ ಸಭೆಯಲ್ಲಿ ಮಾನೆ ನಿರೀಕ್ಷಿಸಿದಂತೆ ಗಲಭೆಯೇ ಕಾದಿತ್ತು. ಹದಿನೆಂಟು ಗಿರಣಿಗಳ ಕಾರ್ಮಿಕರ ಪ್ರತಿನಿಧಿಗಳ ನೆರವು ತಮಗಿದೆಯೆಂದು ಮಾನೆ ಮತ್ತು ಸಂಗಡಿಗರು ತಿಳಿದಿದ್ದರೂ ಮುಂದಿನ ವರ್ಷದ ಅಧ್ಯಕ್ಷ ಪದಕ್ಕೆ ದೇಶಪಾಂಡೆಯ ಹೆಸರನ್ನೂ ಸೂಚಿಸಲಾಗಿತ್ತು. ಅದನ್ನು ಅನುಮೋದಿಸಲು ಶಿಂಗ್ರೆ ಎದ್ದು ನಿಂತಾಗ, ಮಾನೆ, ಆತ ಕೆಲಸ ಕಳೆದು ಕೊಂಡಿರುವುದರಿಂದ ಮಾತನಾಡುವ ಅಧಿಕಾರವಿಲ್ಲವೆಂದ... ಇದೆ, ಇಲ್ಲವೆಂಬ ಜಗಳ ಆರಂಭವಾಗತೊಡಗಿದಾಗ, ವೇದಿಕೆಯ ಮೇಲೆ ತಾನು ಕುಳಿತಿದ್ದ ಕುರ್ಚಿಯಲ್ಲೆನಡಗುತ್ತಿದ್ದ ಯಾಮಿನಿ ಎದ್ದು ನಿಂತು, ''ಎರಡು ನಿಮಿಷ ನನಗೆ ಮಾತನಾಡಲು ಅವಕಾಶ ಕೊಡಿ'' ಎಂದಳು.

ಸಭೆ ಸ್ವಲ್ಪ ಶಾಂತವಾದ ಬಳಿಕ, ಯಾಮಿನಿ ಮೈಕ್ ಮುಂದೆ ನಿಂತಳು... ಹರಿದ ಜುಬ್ಬಾ, ರಕ್ತ ಸೋರುವ ಹಣೆಯಿದ್ದೂ ಮಾನೆ ಮುಂದೆ ಬಂದು ''ರಾಜೀವ ಭಾಯಿ ತಾನಿರುವುದಿಲ್ಲೆಂದು ಭೋಯಿವಾಡಾಚಿ ಬಾಯಿಯೊಡನೆ ಮಾತಾಡಲು ಹೇಳಿದ್ದಾರೆ. ದಯಮಾಡಿ ಕೇಳಿ...''

ಯಾಮಿನಿ ಮಾತನಾಡತೊಡಗಿದಳು.

''ಎಂಟು ವರ್ಷದಿಂದ ರಾಜೀವ ಭಾಯಿ ಕಟ್ಟಿದ ಫೆಡರೇಶನ್ನನ್ನು ಅವರಿಲ್ಲದಾಗ ಈ ರೀತಿ ಒಡೆಯುವ ಪ್ರಯತ್ನವನ್ನು ಹೇಗೆ ಖಂಡಿಸಬೇಕೋ ನನಗೆ ತಿಳಿದಿಲ್ಲ. ಅವರು ಮಾಡಿದ ಕೆಲಸ, ಕಟ್ಟಿದ ಸಂಘಟನೆ, ಹೇಗೆ ನಿಮಗೆ ಮರೆತು ಹೋಯಿತು? ಅವರ, ನನ್ನ, ಹೆಸರಿಗೆ ಮಸಿ ಬಳಿಯುವ ಪ್ರಯತ್ನ ಏಕೆ? ದಯಮಾಡಿ ಸಭೆಯ ಕೆಲಸಗಳೆಲ್ಲ ಶಾಂತ ರೀತಿಯಿಂದ ನಡೆಯಲು ಸಹಕರಿಸಿ.''

ಮುಂದೆ ಸಭೆ ಶಾಂತವಾಗಿಯೆ ನಡೆಯಿತು. ರಾಜೀವ್ ಭಾಯಿಯ ಜತೆ, ಮಾನೆ, ಬಾಪಟ್, ಮತ್ತೆ ಪದಾಧಿಕಾರಿಗಳಾದರು. ಕಾರ್ಯಕಾರಿ ಸಮಿತಿಯ ಸದಸ್ಯೆ ಯಾಮಿನಿ.

ಸಭೆ ಮುಗಿದು ಹೊರಬಂದಾಗಲೆ ಅರಿವಿಗೆ ಬಂದದ್ದು, ಒಂದು ಗಂಟೆಯಿಂದ ಜಡಿ ಮಳೆ ಸುರಿಯುತ್ತಲೇ ಇದೆ ಎಂದು, ಮಾನೆ ಎದ್ದು, ''ಬನ್ನಿ, ನಿಮ್ಮನ್ನು ಹೇಗಾದರೂ ಮನೆ ತಲುಪಿಸಿ ಬರುತ್ತೇನೆ'' ಎಂದ.

ರಂಗೇರಿ ಚಾಳಿನ ಮೆಟ್ಟಿಲಿಳಿಯುವುದೇ ಕಷ್ಟವೆನಿಸಿದ ಯಾಮಿನಿಗೆ, ಯಾವ ವಾಹನ ಸೌಕರ್ಯವೂ ದೊರಕುವಂತಿರಲಿಲ್ಲ. ಪೂರ್ತಿ ಒದ್ದೆಯಾಗಿದ್ದ ಯಾಮಿನಿ ತನ್ನ ಮನೆಯ ಬಳಿಯೇ ಇದ್ದ 'ಇಂಡಿಯನ್ ಹೈಸ್ಕೂಲ್' ಕಟ್ಟಡ ಸಮೀಪಿಸಿದಂತೆ, ''ಯಾಮಿನೀ... ಇಲ್ಲಿ ಬಾ'' ಎಂಬ ಕೂಗು ಕೇಳಿಸಿತು. ಅದು ಸುಧಾ ರೇಗೆಯ ದನಿ, ಆಕೆ ಇಲ್ಲಿ ನಿಂತು ಏಕೆ ಕರೆಯುತ್ತಿದ್ದಾಳೆ ಎಂದು ಎರಡು ಹೆಜ್ಜೆ ಮುಂದಿಡುವಷ್ಟರಲ್ಲೇ ತನ್ನ ಮನೆಯ ಮುಂದೆಯೇ ನಾಲ್ಕಾರು 'ಫೈರ್ ಬ್ರಿಗೇಡ್' ವಾಹನಗಳು, ಪೋಲೀಸರ ಜೀಪುಗಳು, ಆ ಜಡಿ ಮಳೆಯಲ್ಲೂ ನಿಂತಿರುವುದು ಗಮನಕ್ಕೆ ಬಂತು. ಯಾಮಿನಿಯನ್ನು ಗುರುತಿಸಿದ ಸುಧಾ ರೇಗೆ ಓಡಿ ಬಂದು ಯಾಮಿನಿಯನ್ನು ತಬ್ಬಿಕೊಂಡು ಅಳತೊಡಗಿದಳು. ''ಏನು? ಏನಾಯಿತು?'' ಎಂದು ಯಾಮಿನಿ ಕೇಳುವುದರೊಳಗೆ ಸುಧಾ... ''ಮೂರು ಗಂಟೆಗೆ ಚೌಗುಳೆಯ ಬಾಲ್ಕನಿ ಕುಸಿದು ಬಿತ್ತು ಯಾಮೀ... ಪುಣ್ಯಕ್ಕೆ ಹಗಲಾದುದರಿಂದ, ಎಲ್ಲ ಕೆಳಗೆ

ಒಡಿದ್ದೇ ಒಡಿದ್ದು... ನಿನ್ನ ಮನೆಯ ಬಾಗಿಲು ಎಷ್ಟು ಬಡಿದರೂ ಉತ್ತರವಿಲ್ಲ. ನಮ್ಮವರೂ ಐದು ನಿಮಿಷ ಬಾಗಿಲು ಬಡಿದರು. ಒಡೆಯಲು ನೋಡಿದರು. ಆಮೇಲೆ ಕೆಳಗೋಡಿ ಬಂದರು. ಕಟ್ಟಡದ ಹಿಂದಿನ ಭಾಗವೆಲ್ಲ ಕುಸಿದಿದೆಯಂತೆ. ಏನಾಗಿ ಹೋಯಿತು ಯಾಮೀ.... ಏನಾಗಿ ಹೋಯಿತು!''

ಊದುಗಂಬಗಳ ಮೇಲೆ ನಿಂತಿದ್ದ ಸೌಧ ಕುಸಿದು ಬಿದ್ದಿತ್ತು. ಸುಧಾ ರೇಗೆಯ ಎಲ್ಲ ಮಾತುಗಳನ್ನು ಯಾಮಿನಿಗೆ ಕೇಳಲಾಗಲಿಲ್ಲ.... ''ಶ್ರೀಕಾಂತ, ಶ್ರೀಕಾಂತ,'' ಎನ್ನುತ್ತಿರುವಂತೆಯೇ ಆಕೆ ಗೆಳತಿಯನ್ನು ತಬ್ಬಿ ಹಿಡಿದಿದ್ದವಳು ಪ್ರಜ್ಞಾಶೂನ್ಯೆಯಾಗಿ ಕೆಳಕ್ಕುರುಳಿದಳು.

**

ಮುಷ್ಕರದ ಗಂಭೀರ ಪರಿಸ್ಥಿತಿಗಿಂತಲೂ ಮನೆ ಬಿಟ್ಟು ಹೊರಟುಹೋದ ನಯನಾಳಿಂದ ಒಂದು ಪತ್ರ ಕೂಡ ಇಲ್ಲ ಎಂಬ ಕೊರಗು ನಿತ್ಯ ಹಿಂಸೆಯೆಂಬಂತೆ ಶರ್ಮಾರನ್ನು ಕಾಡತೊಡಗಿತ್ತು. ಎರಡು ವಾರ ಕಳೆದರೂ ಪಾಂಡಿಚೇರಿಯಿಂದ ಯಾವ ಸುದ್ದಿಯೂ ಇಲ್ಲ.

ಮೂರು ವಾರವಾದರೂ ಮುಷ್ಕರದ ಪರಿಸ್ಥಿತಿ ಸುಧಾರಿಸದಾದಾಗ ಸತೀಶ, ಎಲ್ಲ ಹಿರಿಯ ಅಧಿಕಾರಿಗಳನ್ನು ಕರೆದು, ಮೂರು ಕಾರ್ಖಾನೆಗಳನ್ನು ಅನಿರ್ದಿಷ್ಟ ಕಾಲ ಮುಚ್ಚಿಬಿಡೋಣವೇ ಎಂದು ಆಲೋಚಿಸಿದ. ಆದರೆ ಕಾರ್ಖಾನೆಗಳನ್ನೂ ಮುಚ್ಚುವ ಮೊದಲು, ಸೂಚನೆ ಕೊಟ್ಟು, ಅದರ ಪ್ರತಿಕ್ರಿಯೆ ನೋಡೋಣವೆಂದ ರಘುವಿನ ಸೂಚನೆಯಂತೆ, ಮೂರು ಕಾರ್ಖಾನೆಗಳ ನೋಟೀಸ್ ಬೋರ್ಡಿನ ಮೇಲೆ ಮತ್ತೆ 48 ಗಂಟೆಗಳೊಳಗೆ ಕೆಲಸಗಾರರು ಮರಳಿ ಬಾರದಿದ್ದರೆ, ಎಲ್ಲ ಕಾರ್ಖಾನೆಗಳನ್ನು ಮುಚ್ಚಿಬಿಡುವುದಾಗಿ ಪ್ರಕಟಣೆ ಹೊರಬಿತ್ತು.

ಅಂದು ಸಂಜೆ ರಘು ಎಂದಿಗಿಂತ ತುಸು ಬೇಗನೆ ಮನೆಗೆ ಬಂದಿದ್ದ... ಕೆಲಸ ನಡೆಯದ ಕಾರ್ಖಾನೆಯ ಸಂದಿಗ್ಧ ವಾತಾವರಣದಲ್ಲಿ ಕುಳಿತು ಬೇಸರಗೊಂಡಿದ್ದ ಜೀವಕ್ಕೆ ಮಗಳ ಸಂಗೀತಾಭ್ಯಾಸ ಆಪ್ಯಾಯಮಾನವಾಗಿತ್ತು. ಬಾಗಿಲು ಸದ್ದಾದಾಗ ಹೋಗಿ ಬಾಗಿಲು ತೆರೆದ. ಕಲ್ಯಾಣಿಯ ಇಬ್ಬರು ಕೆಲಸಗಾರರು ನಿಂತಿದ್ದರು. ಸಿಂಧೆ ಮತ್ತು ಫರ್ನಾಂಡಿಸ್. ಇದು ಬೆಳಗಿನ ಪ್ರಕಟಣೆಯ ಪರಿಣಾಮವೆಂದು ತಿಳಿಯಲು ರಘುವಿಗೂ ಹೆಚ್ಚು ಸಮಯ ಬೇಕಾಗಲಿಲ್ಲ. ಸಮಾಧಾನದಿಂದಲೇ 'ಬನ್ನಿ' ಎಂದ.

''ಪಾಟಣಕರ್ ಸಾಬ್, ಈಗ ನಡೆಯುತ್ತಿರುವ ಮುಷ್ಕರ ಎಲ್ಲರಿಗೂ ಬೇಕಾಗಿಲ್ಲ. ನಮ್ಮ ಮೂರು ಕಾರ್ಖಾನೆಗಳಲ್ಲೂ ಹೆಚ್ಚಿನವರು ಹೆದರಿಕೊಂಡು ಸುಮ್ಮನಿದ್ದಾರೆ. ನಮಗೆ ಆ ಪಾಂಡು ಗಾಯಕವಾಡ ಮತ್ತು ದೇಶಪಾಂಡೆಯ ಗೂಂಡಾಗಿರಿ ಬೇಕಿಲ್ಲ. ನೀವು ಮನಸ್ಸು ಮಾಡಿದರೆ 'ಲಾಕ್ ಔಟ್' ಪರಿಸ್ಥಿತಿ ಬರಲಾರದು'' ಎಂದ ಸಿಂಧೆ.

''ನಾನೇನು ಮನಸ್ಸು ಮಾಡಬೇಕು?''

''ಅದೇ ಸಾಬ್ ನಾವು ಹೇಳುತ್ತಿರುವುದು. ನಾವೆಲ್ಲ ಕೆಲಸಕ್ಕೆ ಮರಳುವಂತಿದ್ದರೆ, ಕೂಡಲೆ ಕಿಟ್ಟಿಯ ಪರಿಹಾರ ಧನ, ಮೋಘೆಯ ಸಸ್ಪೆನ್ಶನ್ ವಿಚಾರ, ನಮ್ಮ ಯೂನಿಯನ್ ಜತೆ ಮಾತುಕತೆಯಾಡುವ ಆಶ್ವಾಸನೆ ಕೊಟ್ಟರೆ, ಅಷ್ಟೇ ಅಲ್ಲದೆ ನಮಗೆ ಕೆಲಸಕ್ಕೆ ಹೋಗಿ ಬರಲು, ಪೋಲೀಸರು ಸಹಾಯ ಕೊಡುವಂತಿದ್ದರೆ, ನಾವು ಬರಲು ಸಿದ್ಧರಿದ್ದೇವೆ.''

''ಎಷ್ಟು ಜನ ಬರಲು ಸಿದ್ಧರಿದ್ದೀರಿ?''

''ಈಗ ಒಂದು ಐವತ್ತು ಜನ ಬರಬಹುದು. ಪಾಟಣಕರ್ ಸಾಬ್, ಕೆಲವು ದಿನ ಪೋಲೀಸು ಸಹಾಯವಿದ್ದರೆ ಇನ್ನೂ ಹೆಚ್ಚು ಹೆಚ್ಚು ಜನ ಮರಳಬಹುದು.''

''ಸರಿ...ವಿಚಾರಿಸುತ್ತೇನೆ'' ಎಂದ ರಘು.

ರಘು ಆ ರಾತ್ರಿ, ನಾಗೇಶ ಶರ್ಮಾರಿಗೆ ಫೋನ್ ಮಾಡಿ ಈ ವಿಚಾರ ತಿಳಿಸಿದಾಗ, ಸತೀಶನೂ ತಂದೆಯ ಬಳಿ ಇದ್ದುದರಿಂದ,

ವಿಚಾರ ವಿನಿಮಯ ಕಷ್ಟವಾಗಲಿಲ್ಲ. ಮೂರು ವಾರ ಸ್ಥಗಿತವಾಗಿದ್ದ ಎಲ್ಲ ಕೆಲಸಗಳೂ ಪುನಃ ಪ್ರಾರಂಭವಾಗಬಹುದೇನೊ, ದೇಶಪಾಂಡೆಯ ಅನಧಿಕೃತ ಪ್ರವೇಶವನ್ನು ತಡೆಗಟ್ಟಲು ಇದರಿಂದ ಸಹಾಯವಾದೀತೇನೋ, ಎಂಬ ಆಶಯದಿಂದ ಮೂಡಿದಂಥ ಸಂದರ್ಭ.

ರಘು, ಸಿಂಧೆಯೊಡನೆ ಮಾತಾಡಿ ಎರಡು ದಿನ ಕಳೆದ ಮೇಲೆ, ಒಂದು ದಿನ ಬೆಳಗಿನ ಸರದಿಯ ಹೊತ್ತಿಗೆ, ಎರಡು ಬಸ್ಸುಗಳು ಕಲ್ಯಾಣಿಯ ಒಳಹೊಕ್ಕಾಗ, ಮಧು ಜಾಧವನಿಗೆ ಆಶ್ಚರ್ಯ. ಬಸ್ಸಿನಿಂದ ಕೆಳಗಿಳಿಯುತ್ತಿದ್ದ ಕೆಲಸಗಾರರನ್ನು ಕಂಡಾಗ ವಿಸ್ಮಯ ಭಯಕ್ಕೆ ತಿರುಗುವಂತಿತ್ತು. ಕಾರ್ಖಾನೆಯ ಬಾಗಿಲಲ್ಲಿ ನಿಂತಿದ್ದ ರಘು, ಎಲ್ಲ ಕೆಲಸಗಾರರ ಹೆಸರು ಬರೆದುಕೊಂಡು ಅವರನ್ನು ಒಳಗೆ ಬಿಡುತ್ತಿದ್ದ.

ಒಮ್ಮಿಂದೊಮ್ಮೆಗೆ ಮಧು ಜಾಧವ ಗೇಟಿನ ಬಳಿ ದೂರದಲ್ಲಿ ನಿಂತು ಕೂಗಲಾರಂಭಿಸಿದ. ''ಬಂದ್ ಕರೋ ಬಂದ್ ಕರೋ,..... ಸಂಪ್ ತೋಡಣಾಚಿ ಪ್ರಯತ್ನ ಬಂದ್ ಕರೋ...'' ಅವನ ಬಳಿ ನೆರೆದಿದ್ದ ಕೆಲಸಗಾರರೂ ದನಿಗೂಡಿಸಿದರು, ''ಹೋ, ಹೋ... ಕಾಮಗಾರ್ ದ್ರೋಹಿ ಮುರ್ದಾಬಾದ್'' ಎಂದೆಲ್ಲ. ಗೇಟಿನ ಬಳಿಯೆ ಸಶಸ್ತ್ರ ಪೋಲೀಸರು ನಿಂತಿದ್ದುದರಿಂದ ಜಾಧವ ತಂಡಕ್ಕೆ ಬೊಬ್ಬೆ ಹಾಕುವುದರ ಹೊರತು ಬೇರೇನೂ ಮಾಡಲಾಗಲಿಲ್ಲ... ಸಿಂಧೆ ಆಶ್ವಾಸನೆ ಕೊಟ್ಟಂತೆ ಪ್ರತಿಯೊಂದು ಕಾರ್ಖಾನೆಯಲ್ಲೂ ಐವತ್ತು ಅರವತ್ತು ಕೆಲಸಗಾರರು ಕೆಲಸವಾರಂಭಿಸಲೆಂದು ಒಳಬಂದಿದ್ದರು. ಎರಡನೆಯ ದಿನ ಬಸ್ಸುಗಳು ಗೇಟಿನ ಬಳಿ ಬರುವುದರೊಳಗಾಗಿ ಭಾರೀ ಪ್ರಮಾಣದ ಕಲ್ಲುಗಳು ಬೀಳಲಾರಂಭಿಸಿದಾಗ, ಕಾಯುತ್ತಿದ್ದ ಪೋಲೀಸರು ಓಡಿ ನಾಲ್ಕು ಜನ ಮುಷ್ಕರ ಹೂಡಿದ್ದ ಕೆಲಸಗಾರರನ್ನು ಹಿಡಿದು ತಂದು ತಮ್ಮ ಜೀಪಿಗೆ ತಳ್ಳಿದಾಗ ಗಲಭೆ ಶಾಂತವಾಯಿತು.

ರಘುವಿಗೋ ಎಲ್ಲಿಲ್ಲದ ಉತ್ಸಾಹ... ಕಲ್ಯಾಣಿಯಿಂದ ಕರಣಿಕ ಮತ್ತು ಗಾಯಕವಾಡರಿಗೆ ಫೋನ್ ಮಾಡಿದಾಗ 'ಲಕ್ಷ್ಮಿ', 'ಮೆಶಿನ್ ಟೂಲ್ಸ್'ಗಳಲ್ಲೂ ಪರಿಸ್ಥಿತಿ ಸುಧಾರಿಸುತ್ತಿದೆಯೆಂದು ತಿಳಿದು ಬಂತು. ಸಂಜೆ ರಘುವಿನಿಂದ ಫೋನ್ ಮೂಲಕ ವಿವರ ತಿಳಿದಾಗ ಸತೀಶ ದೇಶಪಾಂಡೆಯ ಸೊಕ್ಕು ಮುರಿಯುತ್ತಿದೆಯೆಂದೇ ಭಾವಿಸಿದ, ''ಗುಡ್ ಶೋ, ರಘು... ಇನ್ನೊಂದು ವಾರದಲ್ಲಿ ನಮ್ಮ ನಿರೀಕ್ಷೆಯ ಉತ್ಪಾದನೆ ಸಾಧ್ಯವಾಗಬೇಕು. ಸಿಂಧೆಯೊಡನೆ ಮಾತನಾಡಲು ನನ್ನ ಒಪ್ಪಿಗೆಯಿದೆ. ಈಗಿರುವ ವೇತನ ಶ್ರೇಣಿಯ ಶೇಕಡಾ ಎಂಟರಷ್ಟು ಹೆಚ್ಚು ಕೊಡಲು ನೀನು ಅನುಮಾನಿಸಬೇಕಾಗಿಲ್ಲ'' ಎಂದ.

ಸಂಜೆ ಎಂದಿನಂತೆ ಮೆನನ್ ಜತೆಯಲ್ಲೆ ರಘು ಚೆಂಬೂರಿನ ತನಕ ಬಂದು, ಅಲ್ಲಿಂದ ಬಸ್ ಹಿಡಿದು ದಾದರ್ ತನಕ ಹೋಗಲು ಸಿದ್ಧನಾದಾಗ ಮೆನನ್ ''ಮನೆಯ ತನಕ ಬಿಡಬೇಕೆ?'' ಎಂದ. ''ಬೇಡ, ನಾನು ಸುಖವಾಗಿ ಬಸ್ಸಿನಲ್ಲಿ ಹೋಗುತ್ತೇನೆ'' ಎಂದು ಹೇಳಿದ ರಘು ಬಸ್ ಹತ್ತಿದ.

ರಘು ದಾದರಿನಲ್ಲಿ ಬಸ್ಸಿನಿಂದಿಳಿದಾಗ ರಾತ್ರಿ ಎಂಟು ಗಂಟೆಯ ಹೊತ್ತು. ನಿಧಾನವಾಗಿ ಖೊದಾದಾದ್ ಸರ್ಕಲ್ ದಾಟಿಕೊಂಡು ತಿಲಕ್ ಬ್ರಿಜ್‌ನ ಸಮೀಪ ಅಡ್ಡರಸ್ತೆ ಹಿಡಿದು ಮನೆಯ ಕಡೆ ಸಾಗುತ್ತಿದ್ದಾಗ, ದಿನದ ಘಟನೆಗಳನ್ನೆಲ್ಲ ನೆನೆಸಿಕೊಂಡು, ಮುಷ್ಕರ ಬೇಗ ಮುಗಿಯುವಂತಾದರೆ, ಮತ್ತೆ ಯೋಚನೆಗೆ ಕಾರಣವಿರದ ನಿತ್ಯದ ದಿನಚರಿಯಲ್ಲಿ ತನ್ನನ್ನು ತೊಡಗಿಸಿಕೊಳ್ಳಬಹುದು ಎಂಬ ಸಮಾಧಾನ ಮೂಡಿ, ಸುಖ... ದೇಹ ತುಂಬ ಸೋತಿತ್ತು. ಮನೆಗೆ ಮರಳಿದೊಡನೆ ಸ್ನಾನ ಮಾಡಬೇಕು... ಆಮೇಲೆ ಆರಾಮ ಕುರ್ಚಿಯಲ್ಲಿ ಕುಳಿತು, ಸುಧಾಳ 'ಭೂಪ' ರಾಗಾಲಾಪನೆ ಕೇಳಿ, ಆಮೇಲೆ ಊಟ, ನಿದ್ದೆ...

ಈ ರೀತಿ ಯೋಚಿಸುತ್ತಲೇ ಮುಂದುವರಿದಿದ್ದ ರಘುವಿನ ನಡಿಗೆ ಮತ್ತಷ್ಟು ನಿಧಾನವಾ

ದದ್ದು ತನ್ನ ಬಳಿಯಲ್ಲೇ ನಿಧಾನ ಗತಿಯಿಂದ ಒಂದು ಟ್ಯಾಕ್ಸಿ ಬರುತ್ತಿದೆಯೆಂಬ ತಿಳುವಳಿಕೆ ಮೂಡಿದಾಗ. ಯಾವುದೋ ಕಟ್ಟಡ ಎಲ್ಲಿದೆ ಯೆಂದು ಕೇಳುವವರಿರಬಹುದು ಎಂದು, ಟ್ಯಾಕ್ಸಿ ಸಮೀಪ ಬರಲು ಅನುಕೂಲವಾಗು ವಂತೆ ಒಂದು ಕ್ಷಣ ನಿಂತ. ಹತ್ತಿರ ಬಂದ ಟ್ಯಾಕ್ಸಿಯ ಬಾಗಿಲು ತೆರೆಯಿತು. ರಘು ಇದೇ ನೆಂದು ಯೋಚಿಸುವಷ್ಟರಲ್ಲಿ, ಅವಸರದಿಂದ ಕೆಳಗಿಳಿದ, ಮುಸುಕು ಹಾಕಿದ ವ್ಯಕ್ತಿ ಯೊಂದು, ದೊಡ್ಡ ಚೂರಿಯೊಂದನ್ನು ಹೊರತೆಗೆದು, ಒಮ್ಮೆಗೇ ರಘುವಿನ ಮೈಮೇ ಲೇರಿ ಬಂದು, ನಾಲ್ಕಾರು ಬಾರಿ ಆತನ ಎದೆ ಯನ್ನೂ, ಹೊಟ್ಟೆಯನ್ನೂ ತಿವಿದು, ರಘು ಕೂಗುತ್ತಿದ್ದಂತೆಯೇ, ಪುನಃ ಟ್ಯಾಕ್ಸಿಯೇರಿ, ಟ್ಯಾಕ್ಸಿಯ ವೇಗ ಹೆಚ್ಚಿಸಿಕೊಂಡು ದೂರ ಹೋಗಿ ಮರೆಯಾದಾಗ, ರಘು ಪಾಟಣಕರ್ ಕೆಳಗೆ ಕಾಲ್ದಾರಿಯ ಅಂಚಿನಲ್ಲೆ ಬಿದ್ದಿದ್ದ.

ಅದೇ ದಿನ ಮಧ್ಯರಾತ್ರಿಗೆ ಮಲಗಿದ್ದ ಸತೀ ಶನನ್ನು, ಟೆಲಿಫೋನ್ ಗಂಟೆ ಎಚ್ಚರಿಸಿದಾಗ ಆತ "ಹೂ ದಿ ಹೆಲ್?" ಎಂದೇ ರಿಸೀವರ್ ಎತ್ತಿಕೊಂಡ.

"ನಾನು ಇನ್ಸ್‌ಪೆಕ್ಟರ್ ಚಿಟಣೀಸ್... ದಾದರ್ ಪೋಲೀಸ್ ಸ್ಟೇಶನ್ನಿನಿಂದ ಮಾತಾ ಡುತ್ತಿದ್ದೇನೆ. ನಿಮ್ಮ ಲೇಬರ್ ಆಫೀಸರ್ ರಘು ಪಾಟಣಕರರ ಮೇಲೆ ಯಾರೋ ಅಜ್ಞಾತ ವ್ಯಕ್ತಿಗಳು ಹಲ್ಲೆ ನಡೆಸಿ ಚೂರಿ ಯಿಂದ ತಿವಿದುದರ ಪರಿಣಾಮವಾಗಿ... ಅವರು ತೀರಿಕೊಂಡಿದ್ದಾರೆ. ಶವವನ್ನು 'ಜೆ.ಜೆ.'ಯ 'ಮಾರ್ಗ'ಗೆ ಸಾಗಿಸಿದ್ದಾರೆ."

ತಂದೆ ಕೋಣೆಯಲ್ಲಿ ಮಲಗಿದ್ದರು. ಸತೀ ಶನ ಮೈ ಇಡೀ ನಡುಗುತ್ತಿತ್ತು. ಬಾಗಿಲು ತೆರೆದು ಸತೀಶ ಟೆರೇಸಿಗೆ ಬಂದ. ಅಲ್ಲೇ ಇದ್ದ ಬೀಳಲು ಕುರ್ಚಿಯಲ್ಲಿ ಕುಳಿತು ತನ್ನೆರಡೂ ಕೈಗಳಿಂದ ಮುಖವನ್ನು ಮುಚ್ಚಿಕೊಂಡು "Oh my God" ಎಂದ.

**

ಮೂರು ವಾರ ಮಾತ್ರವೆಂದು ಬಗೆದಿ ದ್ದರೂ ರಾಜೀವ ಆರು ವಾರಗಳ ಕಾಲ ಮುಂಬಯಿಯಿಂದ ದೂರವಿದ್ದ. ಮುಂಬಯಿ ಯಿಂದ ದೂರವಿದ್ದೇ ಭೋಯಿವಾಡ ಯಾವ ರೀತಿ ಇರುವುದೆಂದು ನೋಡುವ ಅವಕಾಶವಿ



ದೆಂದು ತಿಳಿದು ಹೋಗಬೇಕಾಗಿ ಬಂತು... ಧನಬಾದದ ಕಡೆ ಕಲ್ಲಿದ್ದಲ ಗಣಿ ಕೆಲಸಗಾರರಿಗೆ ಸಂಬಂಧಿಸಿದ ಅಧ್ಯಯನ ತಂಡದಲ್ಲಿ ಸೇರಿಕೊಂಡು ಮಾಡಿದ ಕೆಲಸವೂ ಅಷ್ಟೆ. ದಿಲ್ಲಿಯ ಸಭೆಯಲ್ಲಿ ನಡೆದಂತೆಯೆ, ಎಲ್ಲ ಅರ್ಥಹೀನ... ಅಲ್ಲೆಲ್ಲ ಸಂದೇಹಗಳೇ ಸಾಧ್ಯತೆಗಳು.... ಯಾವ ಹಿತವೂ ಮುಖಾಮುಖಿಯಾಗಿ ಸಂಘರ್ಷಿಸುವ ಮಾತೇ ಇಲ್ಲ... ಒಮ್ಮೆ ಸಭೆ ನಡೆದಾಗ, ಸಭೆ ನಡೆಯುತ್ತಿದ್ದಂತೆಯೇ, ಕೇಂದ್ರ ಸಚಿವಾಲಯಕ್ಕೆ, ಕೈ ಬಾಂಬ ಒಗೆದರೆ ಹೇಗೆ ಎಂಬ ಯೋಚನೆ ಮಿಂಚಿದಾಗ, ಹಿಂದೆ ದೂರದ ಕಲ್ಕತ್ತಾದಲ್ಲಿ ಮೈತ್ರೇಯಿ ಬೋಸ್, ಆಕೆಗೆ ತೀರ ಅಪರೂಪವೆನಿಸಬಹುದಾದ ನಗುನಕ್ಕಂತೆ ಭಾಸವಾಗಿತ್ತು.

''ಹೋಗು, ಹೋಗು ಬಿಸ್ವಾಸ್‌ನ ಕೈಯಲ್ಲಿ ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಂಡು ಗುರುತೇ ಸಿಗದಷ್ಟು ಚಂದವಾಗಿದ್ದೀಯಾ... ಹೋಗಿ ಯಾರನ್ನಾದರೂ ಮದುವೆಯಾಗು...''

ತನಗೆ ನಗಬೇಕು ಎಂದು ತೋರಿರಲಿಲ್ಲ..... ವಾರಂಗಲ್ ಪೋಲೀಸ್ ಸ್ಟೇಶನ್ನಿನ ದಾಖಲೆಗಳಲ್ಲಿ ಇಂಡಿಯನ್ ಪೀನಲ್‌ಕೋಡ್ ಸೆಕ್ಷನ್ನಿನ 302, 304 ಹಾಗೆಯೇ ಸರಕಾರದ ವಿರುದ್ಧ ದಂಗೆಯೇಳುವ, ಪೊಲೀಸ್ ಅಧಿಕಾರಿಗಳ ಕಾರ್ಯಾಚರಣೆಗೆ ತಡೆ ತರುವ ಇನ್ನಿತರ ಹಲವು ಆಪಾದನೆಗಳನ್ನು ಹೊರಬಹುದಾಗಿದ್ದ ರಾಜಶೇಖರ ಸೋಮಯಾಜುಲು, ಸಂಬಂಧಿಸಿದ ಎಲ್ಲಾ ಫೈಲುಗಳಲ್ಲೂ ಸತ್ತಿದ್ದನೆಂದೇ ತೀರ್ಮಾನವಾದ ಮೇಲೆ, ಪ್ರಾಯಶಃ ಮೈತ್ರೇಯಿಯ ಪಾಲಿಗೂ ತಾನು ಸತ್ತಿದ್ದ... ಜೆ.ಪಿ. ಸತ್ತಂತೆಯೆ ಪೊಲೀಸು ಚಕಮಕಿಗಳಲ್ಲಿ ಸತ್ತ ಎಷ್ಟೋ ಜನರ ಪ್ರೇತಗಳ ಅನಾಮಧೇಯತೆಯಲ್ಲಿ ಬೆರೆತುಕೊಂಡ ಪ್ರಾಯಶಃ ವಿಕಾರವಾಗಿದ್ದ ಒಂದು ಪ್ರೇತಕ್ಕೆ ನಾಮಕರಣವಾದಾಗಲೇ ರಾಜಶೇಖರ ಸತ್ತಿದ್ದ... ಅಥವಾ...

ಬೋರಿ ವಂಶದ ಭಾಸ್ಕರರೆಡ್ಡಿಯ ಮನೆಯಲ್ಲಿ ಗುಂಡಿನೇಟಿಗೆ ಬಲಿಯಾಗಿ ರಕ್ತದ ಮಡುವಿನಲ್ಲಿ ಬಿದ್ದ ಪ್ರೇತ ಕಂಡಾಗಲೇ ರಾಜಶೇಖರ ಸಾಯಲು ಪ್ರಾರಂಭಿಸಿದ್ದನ!

''ಸತ್ತು ಹುಟ್ಟಿದ ರಾಜಶೇಖರ ಮುಂಬಯಿಯಲ್ಲಿ ಏನು ಸಾಧಿಸುತ್ತಾನೆ ನೋಡು'' ಎಂದಾಗ, ''ದಯಮಾಡಿ ಹೋಗು'' ಎಂದಿದ್ದಳು ಮೈತ್ರೇಯಿ ಅಸಹನೆಯ ದನಿಯಲ್ಲಿ.

''ಮುಟ್ಠಾಳ, ಇಂಥ ವೈದಿಕ ಮನೆತನದಲ್ಲಿ ಹುಟ್ಟಿ, ವೈದಿಕ ಸಂಸ್ಕಾರಗಳನ್ನು ಅರಗಿಸಿಕೊಂಡು ಯಜ್ಞ ಮಾಡುವ ಅಧಿಕಾರವಿದ್ದ ನೀನು, ಹೊಲೆಯರಿಗಿಂತಲೂ ಕಡೆಯಾಗಿ ಸತ್ತೆಯಲ್ಲೋ, ತೊಲಗಿ ಹೋಗು, ನೀನು ಕುಲಪುತ್ರನಲ್ಲ! ಇನ್ನು ನನಗೆ ಮಗನಿಲ್ಲ... ನನ್ನ ಶ್ರಾದ್ಧ ಕರ್ಮ ನಾನೇ ಮಾಡಿಕೊಳ್ಳುತ್ತೇನೆ'' ಎಂದು ಹೇಳಿದಂತೆಯೇ, ಪ್ರಾಯಶಃ, ಬದುಕಿದ್ದಾಗಲೇ ತನ್ನ ಅಪರಕರ್ಮ ಮಾಡಿಕೊಂಡಿದ್ದ ತಂದೆಯ ಪಾಲಿಗೂ ತಾನು ಎಂದೋ ಸತ್ತಿದ್ದ. ತಾಯಿ ಬರೇ ನೆನಪು... ತಂದೆ ತನ್ನಿಂದಾಗಿ ಪಡಬಾರದ ಕಷ್ಟ, ಪೋಲೀಸರ ಕಿರುಕುಳ ಸಹಿಸಬೇಕಾಗಿ ಬಂದಾಗಲೂ ಇತಿಹಾಸದ ಗತಿಯನ್ನೇ ವಿಮರ್ಶಿಸುವ ಕೆಲಸದಲ್ಲಿ ತೊಡಗಿದ್ದ ಸಂದರ್ಭದಲ್ಲಿ ಸಂಬಂಧದ ಯಾವ ಎಳೆಗಳೂ ಗೋಚರಿಸುತ್ತಿರಲಿಲ್ಲ.

''ಹೋಗಿ ಯಾರನ್ನಾದರೂ ಮದುವೆಯಾಗು...'' ಮೂದಲಿಕೆ ಮಾತು... ರಾಜೀವ ಮದುವೆಯಾದದ್ದು ಮುಂಬಯಿಯ ಲಕ್ಷ ಲಕ್ಷ ಕಾರ್ಮಿಕರನ್ನು ಸಂಘಟನೆಯ ಯಜ್ಞದಲ್ಲಿ ತೊಡಗಿಸಿ ಕ್ರಾಂತಿಗೆ ಅವಸರದ ಗತಿ ತರುವ ಕಷ್ಟದ, ಪರಿಶ್ರಮದ ಕೆಲಸವನ್ನು... ಮೊದಲು ಅಜ್ಞಾತ ವ್ಯಕ್ತಿ, ಮತ್ತೆ ಗುಂಪು ಗುಂಪೇ ಬಿಡಿಯಾಗಿ, ಇಡಿಯಾಗಿ ಬೆಳೆಯುತ್ತ ಹೋದಂತೆ, ಅರ್ಥಹೀನವೆನಿಸುವ ವ್ಯವಹಾರದ ನಡುವೆಯೂ, ವ್ಯವಸ್ಥೆಯನ್ನು ಬುಡಮೇಲು ಮಾಡುವ ಅವ್ಯಕ್ತ ಉಲ್ಲಾಸ ಬೆಳೆಯುತ್ತಿರುವಂತೆಯೇ, ಇತಿಹಾಸದ ಗತಿಯನ್ನು ವಿರೋಧಿಸುವ ಎಲ್ಲ ಶಕ್ತಿ

ಗಳೂ ಇಂದಲ್ಲ ನಾಳೆ ಸಾಯಲೇಬೇಕು ಎಂಬ ಭರವಸೆ ಮೂಡುತ್ತಿರುವಂತೆಯೇ, ಸತ್ತ ರಾಜಶೇಖರ ಮತ್ತೆ ಹುಟ್ಟಿಕೊಂಡಿರುವುದು ನಿಜ, ನಿಜ, ಎಂದು ಕೂಗಬೇಕು ಎನಿಸುತ್ತಿರುವಂತೆಯೇ, ಬೋರಿವಂಶದ ಭಾಸ್ಕರರೆಡ್ಡಿಯ ಪ್ರೇತ, ಪ್ರೇತವಲ್ಲ, ಆತ ಸತ್ತೇ ಇಲ್ಲ ಎಂದು ತನ್ನಂತೆಯೇ ಶ್ರಮಿಕ ಸಂಘಟನೆಯ ಕ್ಷೇತ್ರದಲ್ಲಿ ಹೋರಾಡುವ ಇನ್ನೊಬ್ಬ ಸೈನಿಕ ಕೂಗಿಕೊಂಡಾಗ, ಆಶ್ಚರ್ಯ, ಕ್ಷೋಭೆ....

ದಿಲ್ಲಿ ಬಿಟ್ಟಾಗ ಸಂಜೆ... ಮುಂಬಯಿ ತಲುಪುವಾಗಲೂ ಸಂಜೆ... ಮುಂಬಯಿ ಸೆಂಟ್ರಲ್ ನಿಲ್ದಾಣೆಯಲ್ಲಿ ತನ್ನ ಹಲವು ವರ್ಷಗಳ ಜತೆಗಾರರಾಗಿ ದುಡಿಯುತ್ತಿದ್ದ ಮಾನೆ, ಸುರ್ವೆ, ರಘು ಬಾಪಟ್ ಕಾಯುತ್ತಿದ್ದರು. ಯಾಮಿನಿ ಬಂದಿರಲಿಲ್ಲ.

ಗಾಡಿಯಿಂದಿಳಿದ ರಾಜೀವನ ಮುಖದಲ್ಲಿ ಮತ್ತೆ ಮನೆಗೆ ಮರಳಿದ್ದೇನೆ ಎಂಬ ಆನಂದದ ತೆಳುವಾದ ನಗು ಹರಡಿತ್ತು.

''ನಮ್ಮ ಕಛೇರಿಗೆ ಯಾರಾದರೂ ಬಂದಿದ್ದರೆ?" ಕೇಳಿದ ರಾಜೀವ,

''ಒಬ್ಬಿಬ್ಬರು ಸಿ.ಐ.ಡಿ. ಜನ ಬಂದಿದ್ದ ಹಾಗೆ ಕಾಣುತ್ತದೆ... ನೀವು ಮುಂಬಯಿಯಲ್ಲಿ ಇಲ್ಲ ಎಂದು ತಿಳಿದ ಮೇಲೆ ಹೆಚ್ಚು ವಿಚಾರಿಸಲಿಲ್ಲ....''

''ಯಾರೊಡನೆ ವಿಚಾರಿಸಿದ್ದು, ಬಾಯಿಯೊಡನೆಯೆ?''

ಆಗ ಮೂವರು ಸಹಚರರೂ ಒಬ್ಬರನ್ನೊಬ್ಬರ ಮುಖ ನೋಡಿಕೊಂಡರು. ಎಲ್ಲ ಕಳೆಗುಂದಿದ ಮುಖಗಳು. ''ಯಾಮಿನೀಬಾಯಿ ಈಗ ಮೂರು ವಾರಗಳಿಂದ ಬರುತ್ತಿಲ್ಲ...''

''ಬರುತ್ತಿಲ್ಲ! ಯಾಕೆ? ಏನಾಯಿತು?''

''ಭಾರೀ ಮಳೆಯಲ್ಲಿ ಅವರ ಮನೆ ಕುಸಿದು ಬಿತ್ತು...'' ಆತಂಕ, ಕಾತರ, ಉದ್ವೇಗ ಎಲ್ಲ ಬೆರೆತು ಮೊದಲೇ ತೀಕ್ಷ್ಣ ಕ್ಷೋಭೆಗೊಳಗಾಗಿದ್ದ ರಾಜೀವನ ಮನಸ್ಸಿನಲ್ಲಿ ಉತ್ಪಾತವನ್ನೇ ಉಂಟು ಮಾಡಿ ಆತ ಕೇಳಿದ ಪ್ರಶ್ನೆ ''ಏನಾಯಿತು? ಬಾಯಿಗೇನಾಯಿತು?''

''ಬಾಯಿಗೇನೂ ಆಗಿಲ್ಲ... ಆದಿನ ಭಾರೀ ಮಳೆ. ಫೆಡರೇಶನ್ ಸಭೆ ಮುಗಿಸಿ ಅವರು ಮನೆಗೆ ಮರಳುವುದರೊಳಗೆ, ಕಟ್ಟಡ ಕುಸಿದು ಬಿತ್ತು ಶ್ರೀಕಾಂತ ಸತ್ತಿದ್ದ.''

ಮೈಯೆಲ್ಲ ನಡುಗಿದಂಥ ಅನುಭವ.

''ಬಾಯಿ ಹೇಗಿದ್ದಾರೆ? ಎಲ್ಲಿದ್ದಾರೆ?''

''ಈಗ ಗಿರಿಗಾಂನಲ್ಲಿ ಅವರ ಅಣ್ಣನ ಮನೆಯಲ್ಲಿ.''

''ನಡಿ ಅಲ್ಲಿಗೇ ಹೋಗೋಣ.''

ಪ್ರಾರ್ಥನಾ ಸಮಾಜದ ಇನ್ನೊಂದು ಹಳೆಯ ಕಟ್ಟಡದ ಮಹಡಿಯೇರಿ ಮಾನೆ ಬಾಗಿಲು ತಟ್ಟಿದಾಗ ಬಾಗಿಲು ತೆರೆದದ್ದು ಯಾಮಿನಿಯೆ. ಬಾಗಿಲು ತೆರೆದಾಗ ಮಾನೆ ಬದಿಗೆ ಸರಿದುದರಿಂದ ರಾಜೀವ ಮತ್ತು ಯಾಮಿನಿ ಮುಖಾಮುಖಿ ಎಂಬಂತೆ ನಿಂತಿದ್ದರು. ಸಮಯ ಮಾತು ಎಲ್ಲ ನಿಂತಂಥ ವಿಚಿತ್ರ ರೀತಿಯ ಸಮಾಧಿ ಸ್ಥಿತಿ... ಇಬ್ಬರಿಗೂ ಏನು ಹೇಳಬೇಕೆಂದು ತಿಳಿಯದ ಅವಸ್ಥೆ. ರಾಜೀವ ಎವೆಯಿಕ್ಕದೆ ನೋಡುತ್ತಿದ್ದುದು ಕೃಶಳಾಗಿದ್ದ ಯಾಮಿನಿಯನ್ನೇ... ಅವಳ ಹಣೆಯನ್ನೇ ಯಾವಾಗಲೂ ನೋಡುತ್ತಿರಬೇಕು ಎಂದು ತೋರುತ್ತಿದ್ದ ಇಪ್ಪತ್ತೈದು ಪೈಸೆಯ ಗಾತ್ರದ ಕುಂಕುಮ ಮಾತ್ರ ಅಲ್ಲಿರಲಿಲ್ಲ.... ಕಾಣುತ್ತಿದ್ದುದು ಹೌದೋ ಅಲ್ಲವೋ ಎನ್ನುವಂಥ ಒಂದು ಕರಿಯ ಸಾಧು ಬೊಟ್ಟು.

ರಾಜೀವನ ಉದ್ವಿಗ್ನ ಮನಃಸ್ಥಿತಿಯನ್ನು ಮೊದಲು ಗುರುತಿಸಿದುದು ಮಾನೆ. ರಾಜೀವ ಯಾಮಿನಿಯರ ಸಖ್ಯವನ್ನು, ಅನ್ಯೋನ್ಯತೆಯನ್ನು, ಆತ ನೋಡುತ್ತಿದ್ದುದು, ಟ್ರೇಡ್ ಯೂನಿಯನ್ ಕಾರ್ಯಕರ್ತನ ಕಣ್ಣುಗಳಿಂದ ಮಾತ್ರ. ಇಂದು ಮಾತ್ರ ಯಾಕೋ ರಾಜೀವ ಭಾಯಿ ಯಾಮಿನೀ ಬಾಯಿಯನ್ನು ಸಂತೈಸುವಾಗ ತಾನಿಲ್ಲಿರಬಾರದು ಎಂದು ತೋರಿ, ಯಾಮಿನಿಯ ಅಣ್ಣನನ್ನು ಬೇರೆ ವಿಷಯದ ಕುರಿತು ಮಾತಿಗೆಳೆಯುವ ಪ್ರಯತ್ನ ಮಾಡಿ ಹೊರಕೋಣೆಗೆ ನಡೆದ.

ಒಂದು ಸಾದಾ ಮಂಚದ ಮೇಲೆ ಯಾಮಿನಿ ಕುಳಿತಿದ್ದಳು. ಬಳಿಯಲ್ಲೇ ಒಂದು ಕುರ್ಚಿಯಲ್ಲಿ ರಾಜೀವ ಕುಳಿತು, ಎರಡು ಮೂರು ನಿಮಿಷಗಳಾದ ಮೇಲೆ ''ಏನಾಗಿ ಹೋಯಿತು ಯಾಮೀ'' ಎಂದ. ಯಾಮಿನಿ ಮಾತಾಡಲಿಲ್ಲ. ಆಕೆಯ ಕಣ್ಣು ತುಂಬಿಕೊಳ್ಳಲಾರಂಭಿಸಿದಾಗ ರಾಜೀವ ತನ್ನ ಕಿಸೆಯಿಂದ ಕರವಸ್ತ್ರ ತೆಗೆದು, ಮುಂದೆ ಸರಿದು ಆಕೆಯ ಕಣ್ಣೊರೆಸಿದ. ಆಕೆ ಬಿಕ್ಕಿ ಬಿಕ್ಕಿ ಅಳತೊಡಗಿದಾಗ, ಎರಡು ಕ್ಷಣ ಆಕೆಯನ್ನು ಬಿಗಿದಪ್ಪಿಕೊಂಡ. ಹಾಗೆಯೇ ಆಕೆಯ ಬಳಿ ತಾನೂ ಕುಳಿತು, ಆಕೆಯ ಬಲಗೈಯ ಬೆರಳುಗಳನ್ನೂ ತನ್ನೆರಡು ಕೈಗಳಲ್ಲಿ ಮುಚ್ಚಿಕೊಂಡ.

ಮತ್ತೈದು ನಿಮಿಷ ಕಳೆದು ಮಾನೆ ಮತ್ತು ಯಾಮಿನಿಯ ಅಣ್ಣ ಒಳಗೆ ಬಂದಾಗ ರಾಜೀವ ಅದೇ ರೀತಿ ಕುಳಿತಿದ್ದ.... ಯಾಮಿನಿಯ ಅಣ್ಣನಿಗೆ ಏನೆನಿಸಿತೋ... ಆದರೆ ಆ ಕೈಗಳ ಜೋಡಣೆಯಲ್ಲಿ ವ್ಯಕ್ತವಾಗುತ್ತಿದ್ದ ಆತ್ಮೀಯತೆಯನ್ನು ಯಾವ ಮಾತಿನಿಂದಲೂ ಕೆಣಕುವ ಧೈರ್ಯ ಆತನಿಗಾಗಲಿಲ್ಲ. ಮಾತನಾಡಿದ್ದು ಮಾನೆ. ''ಹೊರಡೋಣವೇ ರಾಜೀವ್ ಭಾಯಿ,... ಭೋಯಿವಾಡದಲ್ಲಿ ಎಲ್ಲ ದಾರಿಕಾಯುತ್ತಿರುತ್ತಾರೆ. ಯಾಮಿನಿ ಬಾಯಿಯೂ ಬರುತ್ತಾರೆ.'' ರಾಜೀವನಿಗೆ ಆಶ್ಚರ್ಯ! ಇಂಥ ದುರಂತ ಸಂಭವಿಸಿದ ಸಂದರ್ಭದಲ್ಲಿಯೂ ತನ್ನ ವೈಯಕ್ತಿಕ ನೋವನ್ನು ಹತ್ತಿಕ್ಕಿ ತನ್ನ ಕಾರ್ಯಕ್ಷೇತ್ರದ ಬಗ್ಗೆ ಗಮನ ಕೊಡುವಂಥ ಗಟ್ಟಿ ಹೃದಯ ಯಾಮಿನಿಯದು.

ಎಲ್ಲ ಕೆಳಗಿಳಿದು ಬಂದು ಭೋಯಿವಾಡಕ್ಕೆ ಟ್ಯಾಕ್ಸಿ ಹಿಡಿದಾಗ, ಮಾನೆ ಹರಟತೊಡಗಿದ. ರೇಶ್ಮೆ ಕೆಲಸಗಾರರ ಸಭೆ, ಅಲ್ಲಿ ನಡೆದ ಗೊಂದಲ, ಪೆಟ್ಟು, ಯಾಮಿನಿಯ ಬಗ್ಗೆ ದೇಶಪಾಂಡೆಯ ಅನುಚರರು 'ಹಲ್ಕಟ್' ಮಾತಾಡಿದ್ದು, ಪೋರ್ಚುಗೀಸ್ ಕಟ್ಟಡ ಕುಸಿದ ದುರಂತದ ನಂತರ ಯಾಮಿನಿಯ ಹೆಸರಿಗೆ ಎಲ್ಲಿಲ್ಲದ ಪ್ರಚಾರ ದೊರಕಿ, ತಮ್ಮ ಕೇಂದ್ರ ಸಂಘಟನೆಯ ಎಲ್ಲ ಕಾರ್ಯಕರ್ತರೂ ಸಂತಾಪ ಸೂಚಿಸಲು ಬಂದ ರೀತಿ, ತಾನು, ಭೋಯಿವಾಡದ ಕಛೇರಿಯ ಕೆಲಸ ನಡೆಸಲು, ಪ್ರತಿನಿತ್ಯ ಗಿರಿಗಾಂ ತನಕ ಬಂದು ಯಾಮಿನಿಯ ಸಲಹೆ ಪಡೆಯುತ್ತಿದ್ದ ವಿವರ, ರಘು ಪಾಟಣಕರ್‌ನ ಕೊಲೆ...

''ಏನು'' ಎಂದ ರಾಜೀವ ಬೆಚ್ಚಿಬಿದ್ದವನಂತೆ. ''ಕೊಲೆಯಾದದ್ದು ಯಾವಾಗ? ಹೇಗೆ?'' ರಘು ಪಾಟಣಕರ್, ತನ್ನೊಡನೆ ವಿನಯದ ಪ್ರತಿಮೂರ್ತಿಯಂತೆ ನಡೆದುಕೊಂಡಿದ್ದ ರಘು ಪಾಟಣಕರ್ ಈಗ ಕೊಲೆಯಾಗಿ...

ಶರ್ಮಾ ಕಾರ್ಖಾನೆಗಳ ಮುಷ್ಕರದ ಪ್ರಗತಿಯನ್ನು ಮಾನೆ ವಿವರಿಸಿ, ರಘು ಪಾಟಣಕರ್ ಹೇಗೆ ಇಂಥ ಹಿಂಸೆಗೆ ಬಲಿಯಾದ ಎಂದು ತಿಳಿಸಿದ.

**

ರಘು ಪಾಟಣಕರ್‌ನ ಕೊಲೆಯ ಸುದ್ದಿ ಕೇಳಿದಾಗ ತಾನು ಅನುಭವಿಸಿದ ಮೈ ನಡುಕವನ್ನು ಸತೀಶ ಈ ಜೀವಮಾನದಲ್ಲೇ ಈ ತನಕ ಅನುಭವಿಸಿರಲಿಲ್ಲ.

''ಪಪ್ಪನಿಗೆ ಹೇಗೆ ಸುದ್ದಿ ತಿಳಿಸಬೇಕು'' ಎರಡೂ ಕೈಗಳಿಂದ ತನ್ನ ಕೆನ್ನೆಗಳನ್ನು ಒತ್ತಿಕೊಂಡು, ಇದಿರು ಮೇಜಿನ ಮೇಲಿದ್ದ 'ರಮ್' ತುಂಬಿದ ಗ್ಲಾಸನ್ನೇ ನೋಡುತ್ತಾ ಕುಳಿತ ಗಂಡನನ್ನು ನೋಡಿದ ಲಕ್ಷ್ಮಿಯ ಮುಖದಲ್ಲಿ ಭಯದ ಛಾಯೆ! ಓಡಿ ಬಂದು ಕೆನ್ನೆಗೆ ಆಧಾರವಾಗಿದ್ದ ಗಂಡನ ಕೈ ತೆಗೆದು ಲಕ್ಷ್ಮಿ ಕೇಳಿದಳು. ''ಏನಾಯಿತು ಹೇಳಿ... ಟೆಲಿಫೋನ್ ಕರೆ ಯಾರದ್ದು?''

''ರಘುವನ್ನು ಯಾರೋ ತಿವಿದು ಕೊಂದಿದ್ದಾರೆ ಲಕ್ಷ್ಮೀ.... ನನಗೆ ಏನು ಮಾಡಬೇಕೆಂದೇ ತಿಳಿಯುತ್ತಿಲ್ಲ.''

''ಓ ಮೈ ಗಾಡ್!'' ಲಕ್ಷ್ಮಿ ಹೇಳಿದ್ದೂ ಅದನ್ನೇ... ''ರಘು ಪಾಟಣಕರ್ ತೀರಿಕೊಂಡನೆ? ಮಾವಯ್ಯ ಹೇಗೆ ತಡೆದುಕೊಳ್ಳು

ವರೋ ದೇವರಿಗೆ ಗೊತ್ತು.'' ಹೇಳುತ್ತಿದ್ದಂತೆಯೇ ಲಕ್ಷ್ಮಿಯ ಕಣ್ಣುಗಳು ತುಂಬಿಕೊಳ್ಳುತ್ತಿದ್ದವು. ಹಿಂದಿನ ದಿನ ರಘು ಕೊಟ್ಟಿದ್ದ ಸಂತೋಷದ ಸುದ್ದಿಯಲ್ಲಿ ತನ್ನೆಲ್ಲ ಭರವಸೆಗಳು ನಿಂತಿವೆಯೆಂದು ಬಗೆದಿದ್ದ ನಾಗೇಶ ಶರ್ಮಾ ತನ್ನ ಬೆಳಗಿನ ವಾಕಿಂಗ್ ಮುಗಿಸಿ 'ಹರಿ ಓಂ' ಎನ್ನುತ್ತಲೇ ಟೆರೇಸಿಗೆ ಬಂದಾಗ ಸತೀಶ 'ಇಕನಾಮಿಕ್ಸ್ ಟೈಮ್ಸ್' ಎತ್ತಿಕೊಂಡು ಅದನ್ನೇ ನೋಡುತ್ತಿದ್ದ. ''ಏನು ಸತೀಶ, ಇವತ್ತೂ ಬಸ್ ಮೂರು ನಾಲ್ಕು ಟ್ರಿಪ್ ಮಾಡಬಹುದೇ ಫ್ಯಾಕ್ಟರಿಗೆ....?'' ಸತೀಶ ಮಾತಾಡಲಿಲ್ಲ. ತಂದೆ ಕುರ್ಚಿಯಲ್ಲಿ ಕುಳಿತ ಮೇಲೆ ಅವರ ಬಳಿ ಹೋಗಿ ಅವರ ಎರಡೂ ಭುಜಗಳ ಮೇಲೆ ಕೈಯಿರಿಸಿ, ಮಗ ಇದೇನು ಹೀಗೆ ಮಾಡುತ್ತಿದ್ದಾನೆ ಎಂದು ಅವರು ಯೋಚಿಸುತ್ತಿದ್ದಂತೆಯೇ ಸತೀಶ ಹೇಳಿದ; ''ಪಪ್ಪಾ... ನಿಮಗೊಂದು ಕೆಟ್ಟ ಸುದ್ದಿ ತಿಳಿಸಬೇಕಾಗಿದೆ.... ನೀವು ಧೈರ್ಯಗೆಡಬಾರದು...''

''ನಯನಾ....!''

''ಪಪ್ಪಾ, ರಘುವನ್ನು ಯಾರೋ ನಿನ್ನೆ ತಿವಿದು ಕೊಂದಿದ್ದಾರೆ! ಪೊಲೀಸು ಸ್ಟೇಶನ್ನಿನಿಂದ, ಟೆಲಿಫೋನ್ ಬಂದಿತ್ತು.. ನಡುರಾತ್ರಿಗೆ'' ಎನ್ನುತ್ತಿದ್ದಂತೆಯೇ ನಾಗೇಶ ಶರ್ಮಾ ಕುರ್ಚಿಯಲ್ಲೆ ಉರುಳಿದರು... ಒಳಗಿಂದ ಲಕ್ಷ್ಮಿ ಡಾ. ಗದ್ರೆಗೆ ಕೂಡಲೆ ಬರುವಂತೆ ಫೋನ್ ಮಾಡುತ್ತಿದ್ದಳು.

ಡಾ. ಗದ್ರೆ ಬಂದು ಪರೀಕ್ಷಿಸಿ ಹೇಳಿದುದಿಷ್ಟೆ, ''ತೀಕ್ಷ್ಣ ಮಾನಸಿಕ ಆಘಾತವಾಗಿದೆ. ನಿನಗೆ ತಿಳಿದಿದೆಯಲ್ಲ... ಎನ್‌ಲಾರ್ಜ್ಡ್ ಹಾರ್ಟ್... ಡಯಬೆಟಿಕ್ ಬೇರೆ... 'ಜಸ್ ಲೋಕ'ಕ್ಕೆ ಸಾಗಿಸುವುದು ಆರೈಕೆಯ ದೃಷ್ಟಿಯಿಂದ ಒಳ್ಳೆಯದು'' ಎಂದಾಗ ಸತೀಶನಿಗೂ ಅದು ಸರಿಯೆನಿಸಿತು. ಮತ್ತರ್ಧ ಘಂಟೆಯಲ್ಲಿ ಬಂದ 'ಅಂಬುಲೆನ್ಸ್'ನಲ್ಲಿ ನಾಗೇಶ ಶರ್ಮಾರನ್ನು 'ಜಸ್ ಲೋಕ' ಆಸ್ಪತ್ರೆಗೆ ಸಾಗಿಸಲಾಯಿತು.

ಸತೀಶನಂತೆಯೇ, ಎಲ್ಲ ನಿರೀಕ್ಷಿಸಿಕೊಂಡಿದ್ದಂತೆ, ರಘುವಿನ ಕೊಲೆಯ ಸುದ್ದಿ ಹರಡಿ, ಕಲ್ಯಾಣಿಯಲ್ಲಾಗಲೀ 'ಲಕ್ಷ್ಮಿ ರಬ್ಬರ್' 'ಮೆಶಿನ್ ಟೂಲ್ಸ್'ನಲ್ಲಾಗಲೀ ಒಬ್ಬ ಕೆಲಸಗಾರನೂ ಅಂದು ಒಳ ಪ್ರವೇಶಿಸುವ ಸಾಹಸ ಮಾಡಲಿಲ್ಲ... ಮುಷ್ಕರ ಮತ್ತೆ ಮುಂದುವರಿದಿತ್ತು.

ನಾಗೇಶ ಶರ್ಮಾ ಮೆಲ್ಲ ಮೆಲ್ಲನೆ ಚೇತರಿಸಿಕೊಳ್ಳತೊಡಗಿದ್ದರು... ಚೈತನ್ಯ ಮರಳುತ್ತಿದ್ದಂತೆ ನೆನಪು ಕೂಡ ಚೇತರಿಸಿಕೊಳ್ಳತೊಡಗಿದಾಗ ಕಣ್ಣು ತುಂಬಿಕೊಳ್ಳುತ್ತಿದ್ದವು. ಸದಾ ತನ್ನ ಆರೈಕೆಯಲ್ಲಿರುತ್ತಿದ್ದ ಲಕ್ಷ್ಮಿಯನ್ನು ಕಂಡಾಗಲಂತೂ ಅವರಿಗೆ ದುಃಖ ತಡೆಯಲಾಗುತ್ತಿರಲಿಲ್ಲ.

''ಇವತ್ತು ಹೇಗಿದ್ದೀರಿ ಮಾವಯ್ಯ? ಮನೆಗೆ ಹೋಗೋಣವೆ?'' ಎಂದು ಲಕ್ಷ್ಮಿ ಒಂದು ದಿನ ಕೇಳಿದಾಗ,

''ಯಾವ ಪಾಪಕ್ಕೆ ನನಗೀ ಶಿಕ್ಷೆ?'' ಎಂದರು.

''ಶಿಕ್ಷೆಯ ಮಾತೇಕೆ ಮಾವಯ್ಯ? ಕಾಯಿಲೆ ಮನುಷ್ಯನಿಗೆ ಬರದೆ ಮರಕ್ಕೆ ಬರುತ್ತದೆಯೆ?''

''ನಯನಾ... ನಯನಾಳಿಂದ ಕಾಗದವಿದೆಯೆ?''

''ಇನ್ನೂ ಬಂದಿಲ್ಲ ಮಾವಯ್ಯ.... ಇವರು ಕಂಪೆನಿಯ ಮದರಾಸು ಬ್ರಾಂಚ್ ಮೆನೇಜರ್‌ರಿಗೆ ಮುಂದಿನ ವಾರವಾದರೂ ಪಾಂಡಿಚೇರಿಗೆ ಹೋಗಿ ವಿಚಾರಿಸಿಕೊಂಡು ಬಾ ಅಂತ 'ಟೆಲೆಕ್ಸ್' ಕಳುಹಿಸಿದ್ದಾರೆ. ಇನ್ನೂ ಉತ್ತರ ಬಂದಿಲ್ಲ...'' ಮತ್ತೆ ಮೌನ.

ಕನವರಿಸಿದಾಗಲೆಲ್ಲ ''ಕಲ್ಯಾಣೀ... ಕಲ್ಯಾಣೀ... ಯಾವ ಪಾಪಕ್ಕೆ ನನಗೀ ಶಿಕ್ಷೆ, ಯಾವ ಪಾಪಕ್ಕೆ...!'' ಎಂದು ಮಡದಿಯ ನಾಮಸ್ಮರಣೆ. ಅಂದು ಸಂಜೆ ಸತೀಶ ಬಂದಾಗ ಲಕ್ಷ್ಮಿ, ''ನೋಡಿ, ನಯನಾ ನಯನಾಂತ ಕೇಳ್ತಿದಾರೆ... ಮದರಾಸಿನಿಂದ ಏನಾದರೂ ಉತ್ತರ ಬಂದಿದೆಯೆ?''

''ಇಲ್ಲ ಲಕ್ಷ್ಮಿ... ಅವನು ಪಾಂಡಿಚೇರಿಗೆ ಹೋಗಿ ಬಂದ ಮೇಲೆ ತಾನೆ ಸುದ್ದಿ ಸಿಗೋದು...''

ಮಂಗಳವಾರ 'ಬಂದ್' ಆಚರಣೆಯ ದಿನ ಸತೀಶ ಎಂದಿನಂತೆಯೇ ನರಿಮನ್ ಪ್ಲೈಂಟ್‌ನ ಆಫೀಸಿಗೆ ಬಂದಾಗ, ಆತನನ್ನು ಮೊದಲು ಸ್ವಾಗತಿಸಿದ್ದು ಸಲ್ದಾನಾ... ''ಇವೊತ್ತು ದೇಶ ಪಾಂಡೆಯ 'ಬಂದ್' ದಿನಾಚರಣೆ. ಅವನ ಅಪಯಶಸ್ಸಿನ ಕುರಿತು ಪ್ರಾರ್ಥಿಸೋಣ'' ಎಂದು ನಕ್ಕಾಗ ರಾಜೀವನೂ 'ಆಮೆನ್' ಎಂದು ನಕ್ಕ.

ಮಧ್ಯಾಹ್ನ ಮೂರು ಘಂಟೆಯ ಹೊತ್ತಿಗೆ ಮೆನನ್ ಟೆಲಿಫೋನ್ ಮಾಡಿದ, ''ಸರ್, ದೇಶಪಾಂಡೆಗೆ ಸಂಬಂಧಿಸಿದ ಎಲ್ಲ 'ಬಂದ್' ಎಲ್ಲಾ ಕಡೆ ಯಶಸ್ವಿಯಾದಂತೆ ಕಾಣುತ್ತದೆ. ಒಂದೇ ಒಂದು ಕಾರ್ಖಾನೆ ಕೂಡ ಕೆಲಸ ಮಾಡುತ್ತಿಲ್ಲ...''

''ಐ ಸೀ....'' ಎಂದ ಸತೀಶ.

''ಎಲ್ಲರ ಲೆಕ್ಕಾಚಾರದಂತೆ ದೇಶಪಾಂಡೆಯ ಹಿಡಿತವಿರುವುದು ಬರೇ ಇಪ್ಪತ್ತು ಸಾವಿರ ಕೆಲಸಗಾರರಿಗೆ ಸಂಬಂಧಿಸಿದ ಕಾರ್ಖಾನೆಗಳಲ್ಲಿ ಮಾತ್ರ. ಈ ಪಟ್ಟಿಯಲ್ಲಿ ಹೆಚ್ಚಿನ ಕಾರ್ಖಾನೆಗಳೆಲ್ಲ ರಾಜೀವನಿಗೆ ಸಂಬಂಧಿಸಿದ ಯೂನಿಯನ್‌ಗಳ ಹಿಡಿತದಲ್ಲಿವೆ. ಅವರು ಈ 'ಬಂದ್' ಆಚರಣೆಯನ್ನು ವಿರೋಧಿಸಬೇಕೆಂದು ಕರೆಕೊಟ್ಟಿದ್ದರು. ಆದರೆ ಆ ಕರೆಗೆ ಯಾರೂ ಮನ್ನಣೆ ಕೊಟ್ಟಂತಿಲ್ಲ ಸರ್, ಮತ್ತೂ ಒಂದು ಸುದ್ದಿ ಬಂದಿದೆ. ದೇಶಪಾಂಡೆಯನ್ನು ಪೋಲೀಸರು ಬಂಧ ಮುಕ್ತ ಮಾಡಿದ್ದಾರೆ. ಪಾಂಡು ಗಾಯಕವಾಡ್ ಮಾತ್ರ ಒಳಗಿದ್ದಾನೆ...'' ಸತೀಶ ಮೆನನ್‌ನೊಡನೆ ಮಾತನಾಡುತ್ತಿದ್ದಾಗ ಗ್ರೇಸ್ ಒಳಗೆ ಬಂದವಳು ಬಾಗಿಲಲ್ಲಿ ನಿಂತಿದ್ದಳು. ಮುಖದಲ್ಲಿ ಭಯ, ಆತಂಕ. ''ಎಕ್ಸ್ಕ್ಯೂಸ್ ಮಿ ಸರ್'' ಎಂದು ಒಂದು ಟೆಲೆಕ್ಸ್ ಸಂದೇಶವನ್ನು ಸತೀಶನ ಮೇಜಿನ ಮೇಲಿರಿಸಿ ಮರೆಯಾದಳು.

ಮದರಾಸಿನಿಂದ ವರದರಾಜನ್ ಸಂದೇಶ ಕಳಿಸಿದ್ದ.

"ಶುಕ್ರವಾರದ ತನಕ ನಯನಾ ಪಾಂಡಿಚೇರಿಯ ಆಶ್ರಮದಲ್ಲಿ ಇದ್ದಂತಿದೆ... ಅವರ ಕೋಣೆಯಲ್ಲಿ ಸಾಮಾನುಗಳೆಲ್ಲ ಹಾಗೆಯೆ ಇದೆ... ಶನಿವಾರದಿಂದ ಅವರು ಕಾಣುತ್ತಿಲ್ಲ. ನಾನು ಸಾಕಷ್ಟು ವಿಚಾರಿಸಿದೆ. ಯಾರಿಗೂ ಏನೂ ತಿಳಿದಿಲ್ಲ. ಯಾವ ರೀತಿಯ ಸುಳುವು ಕೂಡ ಕೊಡದೆ ಅವರು ಎಲ್ಲಿಗೆ ಹೋಗಿರಬಹುದೆಂದು ಊಹಿಸುವುದೂ ಕಷ್ಟವಾಗಿದೆ. ಸಮುದ್ರ ಸ್ನಾನಕ್ಕೆ ಹೋದಾಗ ಏನಾದರೂ ಅಪಘಾತವಾಗಿರಬಹುದೇ ಎಂದು ಊಹಿಸಲು ಸಾಧ್ಯವಿದೆಯಾದರೂ, ಸಮುದ್ರ ತೀರದಲ್ಲಿ ಯಾವುದೇ ಮೃತ ದೇಹ ಸಿಕ್ಕಿದ ವರದಿಯಲ್ಲ. ಪೋಲೀಸರಿಗೆ ತಿಳಿಸಿದ್ದೇನೆ... ಸಾಮಾನುಗಳನ್ನೆಲ್ಲ ವಶಪಡಿಸಿಕೊಂಡಿದ್ದೇನೆ."

ಸತೀಶನ ಮುಖ ನಿಸ್ತೇಜವಾಗಿತ್ತು. ಆ ಟೆಲೆಕ್ಸ್ ಸಂದೇಶವನ್ನು ಹಾಗೆಯೇ ಕಿಸೆಯಲ್ಲಿ ತುರುಕಿಕೊಂಡಾಗ, ಒಮ್ಮೆಲೆ ದುಃಖ ಉಮ್ಮಳಿಸಿದಂತಾಗಿ, ತನ್ನ ಕುರ್ಚಿಯಿಂದೆದ್ದು ಗಾಜಿನ ಗೋಡೆಯ ಬದಿಗೆ ಹೋಗಿ ಶೂನ್ಯ ದೃಷ್ಟಿಯಿಂದ ಸಮುದ್ರವನ್ನೇ ನೋಡತೊಡಗಿದ.

ಮೆನನ್ ಮತ್ತೆ ಟೆಲಿಫೋನ್ ಸಂಪರ್ಕದಲ್ಲಿ ಬಂದಾಗ ಸತೀಶ ಹೇಳಿದುದಿಷ್ಟೆ: ''ಮೆನನ್, ನಾಳೆ ಆ ಮಧು ಜಾಧವನಿಗೆ ಕರೆ ಕಳುಹಿಸಿ, ಅವರಿಗೇನು ಬೇಕು ಎಂದು ಕೇಳು, ನಮ್ಮ ಸಂಬಳದ ಲೆಕ್ಕದ ಶೇಕಡಾ ಇಪ್ಪತ್ತರಷ್ಟು ಹೆಚ್ಚಿಗೆ ಕೊಡುವ ಮಾತುಕತೆ ನಡೆಸಲು ನಿನಗೆ ಅಧಿಕಾರವಿದೆ. ದೇಶಪಾಂಡೆಯೇ ಮಾತುಕತೆಗೆ ಬರುವಂತಿದ್ದರೆ, ಮೂರು ವರ್ಷದ ಎಗ್ರೀಮೆಂಟ್‌ಗೆ ಅವನ ಬೆಲೆ ಎಷ್ಟೆಂದೂ ಸೂಕ್ಷ್ಮವಾಗಿ ವಿಚಾರಿಸು.....''

**

ಎಷ್ಟೋ ವರ್ಷಗಳ ಅನಂತರ ಮೊದಲ ಬಾರಿಗೆ ಎಂಬಂತೆ, ರಾಜೀವ ಇಡೀ ದಿನ ಕೋಣೆ ಬಿಟ್ಟು ಕದಲಲಿಲ್ಲ... ಮಲಗಿ ತೆರೆದ ಕಣ್ಣುಗಳಿಂದ ಗೋಡೆ ನೋಡುತ್ತಿದ್ದ ಆತನ ದೃಷ್ಟಿ ಗೋಡೆ ಕೆಡವಿ ದಿಗಂತದೆಡೆಗೆ ಧಾವಿಸುವಂತಿತ್ತು... ಎಷ್ಟೋ ದಿನಗಳಿಂದ ಅಲ್ಲ ತಿಂಗಳುಗಳೇ... ಆರಂಭವಾಗಿದ್ದ ಆಂತರಿಕ ಕ್ಷೋಭೆ ನಿರ್ಧಾರದ ರೂಪು ತಳೆಯುತ್ತಿತ್ತು.

ಗುರಿಯೇ ಸಾಧ್ಯತೆ..

ಐದನೆಯ ವರ್ಷದಲ್ಲೇ ತಂದೆ, ಅಮರ, ಭಗವದ್ಗೀತೆ ಕಂಠಪಾಠ ಮಾಡಿಸಿದ್ದರು. ಕೊನೆಗೆ ಅವರು ಹೇಳಿದ್ದೇನು? "ನೀನು ಧರ್ಮ ಚಾಂಡಾಲ, ಕರ್ಮ ಚಾಂಡಾಲ, ಯಾಕೆ ಈ ಬ್ರಾಹ್ಮಣ ಜನ್ಮದಲ್ಲಿ ಹುಟ್ಟಿ ಸತ್ತೆ ಹೇಳು.." "ಹೌದು ಹುಟ್ಟಿ ಸತ್ತಿದ್ದೇನೆ" ಎಂದು ನಕ್ಕಿದ್ದ ರಾಜಶೇಖರ. ಗೋಡೆಯ ಮೇಲಿದ್ದ ಜೆ.ಪಿ.ಯ ಭಾವಚಿತ್ರ ನೋಡಿದಾಗ, ಅದು ಕೂಡ ತನ್ನನ್ನು ನೋಡಿ ನಕ್ಕಂತೆ ಭಾಸವಾಯಿತು. ರಾಜೀವ ಎದ್ದು, ತನ್ನ ಕೈಯಿಂದಲೇ ಚಿತ್ರಿಸಿದ ಜೆ.ಪಿ.ಯ ರೇಖಾ ಚಿತ್ರವನ್ನು ಚೌಕಟ್ಟಿನಿಂದ ಬಿಡಿಸಿದ, ಮೃದುವಾಗಿ ಮಡಚಿ ತನ್ನ ಕೈ ಚೀಲದಲ್ಲಿ ಹಾಕಿದ, ಗೋದೂ ಮಾವಶಿ ಎರಡು ಬಾರಿ ಬಾಗಿಲ ಮರೆಯಿಂದಲೇ ನೋಡಿ, "ಚಹಾ ಬೇಕೆ?" ಎಂದಳು. "ಹೌದು ಮಾವಶಿ, ಮಧ್ಯಾಹ್ನ ರೊಟ್ಟಿ ಕೊಡಬೇಕು." ಗೋದೂ ಮಾವಶಿ ಚಹಾ ತಂದಾಗ ರಾಜೀವ ಹೇಳಿದ, "ಮಾವಶಿ, ನಾನು ಸ್ವಲ್ಪ ದಿನ ಮುಂಬಯಿ ಬಿಟ್ಟು ಹೋಗುತ್ತೇನೆ"

"ಎಂದರೆ? ಇಲ್ಲಿನ 'ಕಾಮಗಾರ್' ಕೆಲಸ ಯಾರು ನೋಡಿಕೊಳ್ಳುತ್ತಾರೆ....?"

"ಬಾಯಿ ಇದ್ದಾರೆ... ಮಾನೆ, ಸುರ್ವೆ, ಬಾಪಟ್ ಮತ್ತೆಲ್ಲ 'ಮಂಡಳಿ' ಬರುತ್ತಾರಲ್ಲ... ನಾನು ಮಾತ್ರ ಇರುವುದಿಲ್ಲ ಅಷ್ಟೆ."

ದಿನವಿಡೀ ರಾಜೀವ ಎಂಟು ವರ್ಷಗಳ ಕಾಲ ತನ್ನ ಕಾರ್ಯಕ್ಷೇತ್ರವಾಗಿದ್ದ ಕೋಣೆಯನ್ನು ಸಿ.ಐ.ಡಿಗಳು ಪರೀಕ್ಷಿಸುವಂತೆ ಪರೀಕ್ಷಿಸುತ್ತಿದ್ದ, ತನಗೆ ಸಂದೇಹ ಕಂಡ ವಸ್ತುಗಳನ್ನು ಗ್ರಂಥಗಳನ್ನು ಒಂದು ಕೈ ಚೀಲದೊಳಗೆ ತುರುಕುತ್ತಿದ್ದ. ಮಜದೂರ್ ಸಂಘಟನೆಗಳಿಗೆ ಸಂಬಂಧಿಸಿದ್ದ ಕಾಗದ ಪತ್ರಗಳಲ್ಲಿ,

ಫೈಲುಗಳಲ್ಲಿ ಯಾವ ಅಸ್ತವ್ಯಸ್ತತೆಯೂ ಇರಲಿಲ್ಲ... ಅದು ಯಾಮಿನಿ ಆ ಕೋಣೆ ಪ್ರವೇಶಿಸಿದ ಗಳಿಗೆಯಿಂದಲೇ ಮಾಯವಾಗಿತ್ತು. ತಮ್ಮ ಯೂನಿಯನ್ ಕಾರ್ಯಕ್ಷೇತ್ರದ ಕೊಂಡಿಕೊಂಡಿಗಳನ್ನೂ ಅರಿತವಳಂತೆ, ವ್ಯವಸ್ಥಿತವಾದ ವ್ಯವಸ್ಥೆಯನ್ನೇ ರೂಪಿಸಿದಳು. ವ್ಯವಸ್ಥೆ ಕೆಡಹುವ ಉದ್ದೇಶದ ವ್ಯವಸ್ಥೆ.

ಎಷ್ಟೋ ಸಲ ಆಕೆ ''ಅದು ಹಾಗಲ್ಲ ರಾಜೂ... ಹೀಗೆ'' ಎಂದ ಸಂದರ್ಭಗಳನ್ನು ನೆನಪಿಸಿಕೊಳ್ಳುವಾಗ ರಾಜೀವನ ಮುಖದಲ್ಲಿ ತೆಳುವಾದ ನಗುಹರಡಿತು. ಕಟ್ಟುವ ಕೆಲಸ ಮಾಡುವವರು 'ಬುಲ್ ಡೋಜರ್' ಕಡೆ ನೋಡುವುದಿಲ್ಲ.

ತನ್ನ ಪರಿವ್ರಾಜಕ ಸ್ಥಿತಿಗೆ ಅಗತ್ಯವಿರಬಹುದಾದುದೆಲ್ಲವನ್ನೂ ಸೂಟ್‌ಕೇಸ್‌ನಲ್ಲಿ ತುಂಬಿಸಿದ ರಾಜೀವ ಪೂರ್ತಿ ಓದದೆಯೆ ಉಳಿದಿದ್ದ 'ಮಿರ್ಡಾಲ್' ಗ್ರಂಥವನ್ನೆತ್ತಿಕೊಂಡು ಸಂಜೆಯಾಗುವುದನ್ನೇ ಕಾಯತೊಡಗಿದ. ಏಳು ಗಂಟೆಯ ಹೊತ್ತಿಗೆ ರಾಜೀವನ ಕೋಣೆ ತುಂಬಿಕೊಳ್ಳಲಾರಂಭಿಸಿತು. ಮಾನೆ, ಸುರ್ವೆ ಮತ್ತು ಸಂಗಡಿಗರು ಒಬ್ಬೊಬ್ಬರಾಗಿ ಒಳಗೆ ಬಂದರು. ರಾಜೀವ ನಿರೀಕ್ಷಿಸಿದಂತೆ ಎಲ್ಲ ಕಳೆಗುಂದಿದ ಮುಖಗಳೇ! ''ಎಲ್ಲ 'ಡರ್ ಪೋಕ್' ಜನ.... ಮೊನ್ನೆ ಇಲ್ಲಿ ಬಂದ್ ಬೇಡವೆಂದ ಜನರೇ ಆ ದೇಶಪಾಂಡೆಯ ಗುಂಡಾಗಳಿಗೆ ಹೆದರಿ ಮನೆಯಲ್ಲೇ ಕುಳಿತರಲ್ಲಾ... ಎಲ್ಲಾ ಹರಾಮಖೋರ್ ಜನ...'' ಮಾನೆ ಕೂಗಿಕೊಳ್ಳುತ್ತಿದ್ದ.

''ದೇಶಪಾಂಡೆಯನ್ನು ಬಿಡುಗಡೆ ಮಾಡಿದ್ದಾರೆಯೆ?'' ರಾಜೀವ ಕೇಳಿದ.

''ಹೌದು... ಅವನನ್ನು ಕರೆದೊಯ್ದದ್ದು ವಿಚಾರಣೆಗೆ ಮಾತ್ರ ಅಂತಾರೆ. ಈಗ ಪಾಂಡು ಗಾಯಕವಾಡ ಇನ್ನೂ ಒಳಗೇ ಇದ್ದಾನೆ ಅದೇ ಪುಣ್ಯ.''

''ನಾನು ಹೇಳಿರಲಿಲ್ಲವೆ? ಈ 'ಬಂದ್' ವಿರೋಧ ಬೇಡ ಅಂತ.''

''ಅದ್ಹೇಗೆ ಸಾಧ್ಯ ರಾಜೀವ್ ಭಾಯಿ! ದೇಶಪಾಂಡೆ ಹೇಳಿದ ಹಾಗೆ ನಾವು ನಡೆಯುವುದಾದರೆ, ನಾವು ಯೂನಿಯನ್ ಕಟ್ಟುವುದಾದರೂ ಏಕೆ? ಇನ್ನು ಅವನ ಉಪಾಯಗಳನ್ನೇ ಅವನ ಮೇಲೆ ತಿರುಗಿಸಬೇಕು. ಆದರೆ ನಮ್ಮ ಯೂನಿಯನ್‌ಗಳೆಲ್ಲ ಕೈಬಿಡಬಹುದೇ ಎಂದು ಯೋಚನೆಯಾಗಿದೆ...'' ಎಂದ ಮಾನೆ. ''ಅಷ್ಟೇಕೆ ಚಿಂತೆ ಮಾನೆ, 'ಬಂದ್'ನಲ್ಲಿ ಭಾಗವಹಿಸಿದವರೆಲ್ಲ ನಮ್ಮ ಯೂನಿಯನ್ ತ್ಯಜಿಸಿ ಹೋಗುತ್ತಾರೆಂಬ ಭಯವೇಕೆ? ನಮಗೆ ನಮ್ಮ ಸಾಮರ್ಥ್ಯದಲ್ಲಿ ನಂಬಿಕೆಯಿದ್ದರೆ!'' ಆಗಷ್ಟೆ ಬಂದು, ರಾಜೀವನ ಮಾತುಗಳನ್ನು ಆಲಿಸುತ್ತಿದ್ದ ಯಾಮಿನಿ ಒಮ್ಮೆಗೇ ಮಾತನಾಡಿದಳು. ''ಹೌದು ನಮ್ಮ ಶಕ್ತಿಯಲ್ಲೇ ನಮಗೆ ಅಪನಂಬಿಕೆ ಬಂದಾಗ ಯಾವ ಕೆಲಸವೂ ಸಾಧ್ಯವಾಗುವುದಿಲ್ಲ.''

ರಾಜೀವ ನಕ್ಕ.... ''ಓ ಬಾಯಿ ಬಂದರು...'' ಎಂದ ಸುರ್ವೆ. ಆಕೆಯ ಆಗಮನ ಕೋಣೆಯ ವಾತಾವರಣವನ್ನೇ ಬದಲಿಸಿದಂತಿತ್ತು. ಮಾನೆ ಕೂಡ ''ಹೌದು, ಇಂದಿನ 'ಬಂದ್' ಮರೆತು ಬಿಡೋಣ. ಮತ್ತೇನು ಕೆಲಸವಿದೆ ಎಂದು ಸ್ವಲ್ಪ ನೋಡೋಣ... ಆದರೆ ಮೊನ್ನೆ ಇಲ್ಲಿಗೆ ಬಂದಿದ್ದ ಎಲ್ಲ ಜನರನ್ನೂ ಕರೆದು ಏಕೆ ಹೀಗಾಯಿತೆಂದು ಕೇಳಲೇಬೇಕು. ಮಾದರ್ ಛೋದ್ ಜನ...'' ಎಂದ.

ಯಾಮಿನಿ ನಿತ್ಯದ ರೂಢಿಯಂತೆ ಮೇಜಿನ ಮೇಲೆ ಏನಿದೆಯೆಂದು ನೋಡಿದಳು. ಮತ್ತೆ ಮುಂದೆರಡು ದಿನಗಳ ಕೆಲಸದ ಯಾದಿ ನೋಡಿದಳು. ಅದರ ಬಗ್ಗೆ ರಘು ಬಾಪಟ್ ಜತೆ ವಿಚಾರಿಸಿದಳು. ಮಾತೆಲ್ಲ ಮಾಡಬೇಕಾದ ಕೆಲಸಗಳ ಕಡೆ ಹೊರಳುತ್ತಿತ್ತು. ರಾಜೀವನ ದಿಲ್ಲಿ ಯಾತ್ರೆಯ ಕಾಲದಲ್ಲಿ, ಅವನಿರದಾಗ ರೂಪಿಸಿಕೊಂಡ ಹೊಸ ವ್ಯವಸ್ಥೆ... ಯಾಮಿನಿ ಆ ವ್ಯವಸ್ಥೆಗೆ ಸುಲಭವಾಗಿ ಹೊಂದಿಕೊಂಡಿದ್ದಳು, ರಾಜೀವ ಸುಖಿ... ತನ್ನ ಎಂಟು ವರ್ಷದ ಪರಿಶ್ರಮ ಹಾಳಾಗುವುದಿಲ್ಲ... ಬುಲ್‌ಡೋಜರ್ ಯಂತ್ರ ಕೆಲಸ ಮಾಡದೆ

ಹೋಗುವಾಗ ಅದನ್ನು ದೂಡಲು ಎಷ್ಟು ಕೈಗಳಿದ್ದರೂ ಸಾಲದು.

ಚರ್ಚೆಯೆಲ್ಲ ಮುಗಿದು ಅವರೆಲ್ಲ ಹೊರಟು ಹೋದಾಗ ರಾತ್ರಿ ಎಂಟೂವರೆ. ಯಾಮಿನಿಯೂ ಹೊರಟು ನಿಂತು ವ್ಯಾನಿಟಿ ಬ್ಯಾಗ್ ಎತ್ತಿಕೊಂಡಾಗ ಹೊರಡಬೇಡ ಯಾಮೀ.. ನಿಲ್ಲು ಎಂದ ಕುಳಿತಿದ್ದ ರಾಜೀವ.

''ಯಾಕೆ ರಾಜೂ....'' ರಾಜೀವ ತನ್ನ ರಡೂ ಕೈಗಳಿಂದ ಯಾಮಿನಿಯ ಭುಜಗಳನ್ನು ಹಿಡಿದು ಆಕೆಯ ಕಣ್ಣುಗಳನ್ನೇ ದಿಟ್ಟಿಸಿ ನೋಡಿ ಹೇಳಿದ. ''ಯಾಮೀ ನಾನು ಮುಂಬೈ ಬಿಟ್ಟು ಹೋಗುತ್ತಿದ್ದೇನೆ''

''ಮುಂಬೈ ಬಿಟ್ಟು! ರಾಜೂ.. ನಿನಗೇನು ಹುಚ್ಚು ಹಿಡಿದಲ್ಲವಷ್ಟೇ''

''ಇಲ್ಲ ಯಾಮೀ ಇದು ಹುಚ್ಚಿನ ಮಾತಲ್ಲ, ನಿರ್ಧಾರದ ಮಾತು. ಈಗ ಕೇಳು... ನಾನು ರಾಜೀವನೇ ಅಲ್ಲ'' ಯಾಮಿನಿಗೆ ತನಗೆ ಬುದ್ಧಿ ಭ್ರಮಣೆಯಾಗಿ ದೆಯೆ ಎಂಬ ಸಂದೇಹ ಬಂತು. ಏಳೆಂಟು ವರ್ಷ ಕಾಲ ಕಾರ್ಮಿಕರಂಗದ ಪ್ರಸಿದ್ಧ ನಾಯಕನೆನಿಸಿ, ಲಕ್ಷ ಲಕ್ಷ ಕಾರ್ಮಿಕರ ಸಂಘ ಟನೆಯಲ್ಲಿ ತೊಡಗಿದ್ದ ರಾಜೀವ, ರಾಜೀ ವನೇ ಅಲ್ಲ!

''ಎಲ್ಲ ನಿನಗೆ ನಿಧಾನವಾಗಿ ತಿಳಿಯುತ್ತೆ ಯಾಮೀ... ನನ್ನ ನಿಜ ಹೆಸರು ರಾಜಶೇಖರ ಸೋಮಯಾಜುಲು.. ನಾನು ಯಾರು, ಎಲ್ಲಿಂದ ಬಂದೆ, ಈಗ ಎಲ್ಲಿಗೆ ಹೋಗುತ್ತಿ ದ್ದೇನೆ ಎಂಬ ಯಾವ ವಿವರವನ್ನೂ ನಾನು ನಿನ್ನೊಡನೆ ಹೇಳುವುದಿಲ್ಲ.'' ಯಾಮಿನಿ ಅರ್ಥವಾಗದವಳಂತೆ ಅವನ ಮುಖವನ್ನೇ ನೋಡಿದಳು. ''ಯಾಕೆ ಹೇಳುವುದಿಲ್ಲ ಗೊತ್ತೆ? ನನ್ನ ಯಾಮಿನಿಗೆ ಅದರಿಂದ ಕಷ್ಟ ವಾಗಬಹುದು, ಆಕೆ ಪೊಲೀಸರಿಂದ ಯಾವ ರೀತಿಯ ಕಿರುಕುಳವನ್ನೂ ಅನುಭವಿಸಬಾ ರದು, ಎಂಬ ದೃಷ್ಟಿಯಿಂದ....'' ಹಾಗೆ ಹೇಳಿದ ರಾಜೀವ ಆಕೆಯನ್ನು ಬರಸೆಳೆದು ತನ್ನೆದೆಗವುಚಿಕೊಂಡು ಆವೇಶ ಬಂದವರಂತೆ ಆಕೆಯ ಮುಖ ತುಟಿಗಳಿಗೆ ಹಲವು ಬಾರಿ ಮುದ್ದಿಟ್ಟ.

ಯಾಮಿನಿಯ ಎದೆಯಲ್ಲಿ ವಿಚಿತ್ರ ಕೋಲಾಹಲ... ಪ್ರೀತಿ, ಭಯ, ಉದ್ವೇಗ, ಆನಂದಗಳೆಲ್ಲ ಬೆರೆತಂಥ ವಿಚಿತ್ರ ಅನುಭವ.

''ರಾಜೂ.. ನೀನು ಹೊರಟು ಹೋಗಿ.... ನಾನು ಇಲ್ಲಿ...'' ಯಾಮಿನಿ ರಾಜೀವನ ಎದೆಯ ಮೇಲೆ ತಲೆಯಿರಿಸಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು,

''ಹೌದು ಯಾಮೀ... ನೀನೇ ಇಲ್ಲಿ ರಾಜೀವ'' ಎಂದ ಮೃದುವಾಗಿ. ಬಾಗಿಲಿಕ್ಕಿ ಕೊಂಡು ಇಬ್ಬರೂ 'ರಂಗೇರಿ ಚಾಳ್'ನ ಮೆಟ್ಟಿಲಿಳಿದು ಬಂದು ಪ್ರಾರ್ಥನಾ ಸಮಾಜದ ಬಸ್ ಹಿಡಿದರು. ದಾರಿಯಲ್ಲಿ ಯಾವ ಮಾತೂ ಇಲ್ಲ. ಬಸ್ಸಿನಿಂದಿಳಿದಾಗ ಯಾಮಿ ನಿಯ ಕಣ್ಣುಗಳು ಮತ್ತೆ ತುಂಬಿಕೊಳ್ಳತೊಡಗಿ ದವು. ರಾಜೀವ ''ಅಳಬಾರದು ಯಾಮೀ... ಹೋಗು..'' ಎಂದಾಗ ಆಕೆ ಬಿಕ್ಕಿಕೊಂಡೇ ತನ್ನ ಮನೆಯ ದಾರಿ ಹಿಡಿದಳು... ತುಂಬ ಹೊತ್ತು ಆಕೆ ಮರೆಯಾದ ಜಾಗವನ್ನೆ ನೋಡುತ್ತಿದ್ದು ರಾಜೀವ ಮತ್ತೆ ಬಸ್ ಹಿಡಿದು ಭೋಯಿವಾಡಕ್ಕೆ ಮರಳಿ ಬಂದ. ಕೋಣೆಗೆ ಬಂದವನು ಮೇಜಿನ ಮೇಲಿದ್ದ ಮಿರ್ಡಾಲ್ ಗ್ರಂಥದ ಮೇಲೆ ''ಪ್ರೀತಿಯ ಯಾಮಿನಿಗೆ, ಶಕ್ತಿ ಪ್ರವಹಿಸುವುದೇ ಬಂದೂ ಕಿನ ನಳಿಗೆಯ ಮೂಲಕ - ರಾಜೀವ'' ಎಂದು ಬರೆದು ಯಾಮಿನಿ ನಿತ್ಯ ನೋಡುವ ಜಾಗದ ಲ್ಲಿರಿಸಿ, ಎಂಟು ವರ್ಷ ತನ್ನ ಕಾರ್ಯಕ್ಷೇತ್ರ ವಾಗಿದ್ದ ಕೋಣೆಯನ್ನು ಕೊನೆಯ ಬಾರಿ ನೋಡಿ ನಿಧಾನವಾಗಿ 'ರಂಗೇರಿ ಚಾಳ್'ನ ಮೆಟ್ಟಿಲಿಳಿದು ಕತ್ತಲಲ್ಲಿ ಕರಗಿ ಹೋದ.

**

ಮುಷ್ಕರ ಮುಗಿಯಬಹುದೇನೋ ಎಂಬ ಆಸೆ ಮೂಡುವಂಥ ಸಂದರ್ಭದಲ್ಲೇ ಫಪ್ಪ ಜಸ್ ಲೋಕ್ ಆಸ್ಪತ್ರೆಯ ಇಂಟೆನ್ಸಿವ್ ಕೇರ್ ವಾರ್ಡ್‌ನಲ್ಲಿ ಮಲಗಿದ್ದಾರೆ... ತಂಗಿ

ನಯನಾಳ ಸುಳಿವು ಇಲ್ಲವೆನ್ನುವ ಟೆಲೆಕ್ಸ್ ಸುದ್ದಿ ಕಿಸೆಯೊಳಗಿದೆ. ಯಾವ ರೀತಿಯಲ್ಲಿ, ಯಾವ ಸಂದರ್ಭದಲ್ಲಿ ಪಪ್ಪನಿಗೆ ಈ ಸುದ್ದಿ ತಿಳಿಸಬೇಕು ಎಂದು ನಿರ್ಧರಿಸಲು ಸಾಧ್ಯವಾಗದೆ ಸತೀಶ ಮಡದಿಗೂ ಆ ಸುದ್ದಿ ತಿಳಿಸಿರಲಿಲ್ಲ.

ರಾತ್ರಿ ಟೆಲಿಫೋನ್ ಸದ್ದು ಮಾಡುವಾಗಲೆಲ್ಲ ಗಮನ ಹರಿಯುತ್ತಿದ್ದುದು 'ಜಸ್‌ಲೋಕ'ದ ಕಡೆಗೆ. ಆದರೆ ಆ ರಾತ್ರಿ ಒಂದು ಗಂಟೆಗೆ ಟೆಲಿಫೋನ್ ಗಂಟೆ ಬಾರಿಸಿದಾಗ, ಸತೀಶ ರಿಸೀವರ್ ಎತ್ತಿಕೊಂಡು 'ಹಲೋ' ಎಂದಾಗ ಕೇಳಿ ಬಂದದ್ದು ಮೆನನ್‌ನ ದನಿ, ''ಸರ್, ಈ ರಾತ್ರಿಗೆ ಕರೆದುದಕ್ಕೆ ಕ್ಷಮಿಸಿ, ಯಾರೋ ಕಿಡಿಗೇಡಿಗಳು 'ಕಲ್ಯಾಣಿ'ಗೆ ಬೆಂಕಿ ಕೊಡುವ ಪ್ರಯತ್ನವನ್ನು ನಡೆಸಿದ್ದಾರೆಂದು ಈಗಷ್ಟೆ 'ಕಲ್ಯಾಣಿ'ಯ ಸೆಕ್ಯೂರಿಟಿ ಕಾನ್‌ಸ್ಟೇಬಲ್ ಟೆಲಿಫೋನ್ ಮಾಡಿದ್ದಾನೆ. ಹಿಂದಿನ ಭಾಗದ 'ಸ್ಟೋರೇಜ್ ಶೆಡ್'ಗೆ ಬೆಂಕಿ ಹಿಡಿದಿದೆಯಂತೆ... ಬೆಂಕಿ ಉರಿಯುತ್ತಿದೆ... ವಾಶಿಯಿಂದ ಫಯರ್ ಬ್ರಿಗೇಡ್ ಬರಬೇಕಷ್ಟೆ... ಮುಷ್ಕರವಿದ್ದು ಒಳಗೆ ಯಾವ ಕೆಲಸವೂ ನಡೆಯುತ್ತಿಲ್ಲವಾದ ಕಾರಣ ಒಳಗಿನಿಂದ ಬೆಂಕಿ ಆರಿಸುವ ಯಾವ ಪ್ರಯತ್ನವನ್ನೂ ಮಾಡುವಂತಿಲ್ಲ... ನಾನು...''

''ಕಲ್ಯಾಣಿಯಲ್ಲಿ ಬೆಂಕಿ... ಸೆಕ್ಯೂರಿಟಿ ಸ್ಟಾಫ್ ಏನು ನಿದ್ದೆ ಮಾಡುತ್ತಿದ್ದರೆ?''

''ಮುಷ್ಕರದ ಗಂಭೀರ ಪರಿಸ್ಥಿತಿ ಕಳೆದಿದೆ. ದೇಶಪಾಂಡೆಯೊಡನೆ ಮಾತುಕತೆ ಆರಂಭವಾಗಿದೆಯೆಂದು 'ಸೆಕ್ಯೂರಿಟಿ'ಯವರ ಕಣ್ಣಿಗೂ ಆಲಸ್ಯವುಂಟಾಗಿರಬೇಕು ಸರ್...''

''ಇದರಿಂದ ದೇಶಪಾಂಡೆಗೆ ಏನು ಸಿಗುತ್ತೆ ಮೆನನ್?''

''ಇದು ದೇಶಪಾಂಡೆಯ ಕೆಲಸವಲ್ಲ ಸರ್... ಇವತ್ತು ಸಂಜೆ ನಾನೇ ಮಾತನಾಡಿದ್ದೆನಲ್ಲ ಅವನ ಜತೆ... ನೀವು ಹೇಳಿದ ಮಿತಿಯೊಳಗೆ ಸೆಟ್ಲಮೆಂಟ್ ಆಗುವುದು ಸಾಧ್ಯವೆಂದು ತೋರುತ್ತಿದೆ. ಇದು ಬೇರೆ ಯಾರೋ... [illegible] ಆಶ್ಚರ್ಯ ಸರ್, ಏನಾದರೂ ನಾನು ಕರಣೀಕ, ಗಾಯಕವಾಡ್ ಇಬ್ಬರಿಗೂ ಟೆಲಿಫೋನ್ ಮಾಡುತ್ತಿದ್ದೇನೆ ಕಲ್ಯಾಣಿಗೆ ಬರುವಂತೆ. ನಾನೂ ಇದೀಗ ಹೋಗುತ್ತಿದ್ದೇನೆ. ಪರಿಸ್ಥಿತಿ ಹೇಗಿದೆಯೆಂದು ನೋಡಿ ನಷ್ಟದ ಅಂದಾಜು ಮಾಡಿಕೊಂಡು ಬೆಳಿಗ್ಗೆ ಫೋನ್ ಮಾಡುತ್ತೇನೆ. ಮುಷ್ಕರ ಮುಗಿಯುವಂತಿದ್ದರೂ ಕಲ್ಯಾಣಿಯಲ್ಲಿ ಕೆಲಸ ಆರಂಭಿಸಲು ಸಾಧ್ಯವಾಗುವುದಿಲ್ಲವೆಂದು ಬೇಸರ, ಸರ್...''

''ಥ್ಯಾಂಕ್ಸ್ ಮೆನನ್'' ಎಂದ ಸತೀಶ, ''ನಿನ್ನ ಕರ್ತವ್ಯಪ್ರಜ್ಞೆಯ ಬಗ್ಗೆ ನನಗೆ ಅಭಿಮಾನವಿದೆ. ಬೆಳಿಗ್ಗೆ ನಾನೆಲ್ಲಿಗೆ ಬರುತ್ತೇನೆ... ಥ್ಯಾಂಕ್ಸ್ ಎಗೈನ್.''

ರಿಸೀವರ್ ಕೆಳಗಿಟ್ಟ ಸತೀಶನಿಗೆ 'ಕಲ್ಯಾಣಿ'ಯಲ್ಲಿ ಉರಿಯುತ್ತಿರುವ ಬೆಂಕಿ ಆಕಾಶದತ್ತ ತನ್ನ ನಾಲಿಗೆಗಳನ್ನು ಚಾಚುತ್ತಿರುವಂತೆ, ತಮ್ಮ ಎಲ್ಲ ಕಾರ್ಖಾನೆಗಳನ್ನು ನುಂಗುತ್ತಿರುವಂತೆ, ತನ್ನ ಕೌಟುಂಬಿಕ ಜೀವನವನ್ನೆ ಧ್ವಂಸ ಮಾಡುವಂತೆ ಎಲ್ಲಕಡೆ ವ್ಯಾಪಿಸುತ್ತಿರುವಂತೆ ಕಾಣುತ್ತಿತ್ತು. ಗಂಡನ ಬಾಡಿದ ಮುಖ ವ್ಯಕ್ತಪಡಿಸುತ್ತಿದ್ದ ತೀಕ್ಷ್ಣ ಸಂತಾಪವನ್ನು ಗುರುತಿಸಿದ ಲಕ್ಷ್ಮಿ ಮತ್ತೆ ಕೇಳಿದಳು, ''ಏನಾಯಿತು ಕಲ್ಯಾಣಿಗೆ?''

''ಬೆಂಕಿ'' ಎಂದಷ್ಟೇ ಹೇಳಿದ. ಸತೀಶ ನಯನಾಳ ಕುರಿತ ಸುದ್ದಿಯನ್ನು ಲಕ್ಷ್ಮಿಗೂ ತಿಳಿಸಿರಲಿಲ್ಲ. ಎದೆಯೊಳಗೆ ಬೆಂಕಿಯಾಗಿ ಆ ಸುದ್ದಿಯೂ ಕುದಿಯುತ್ತಿದೆ. ಮಧ್ಯರಾತ್ರಿಗೆ ಇನ್ನೊಂದು ಟೆಲಿಫೋನ್ 'ಜಸ್ ಲೋಕ'ದಿಂದ ಬರಬಹುದೇ ಎಂಬ ಭೀತಿಯ ಹಿನ್ನೆಲೆಯಲ್ಲಿ ನಯನಾಳ ಚಿತ್ರ ಕಣ್ಣ ಮುಂದೆ ಬಂದಾಗ, ಅಮ್ಮನ ಚಿತ್ರ ಕಣ್ಣ ಮುಂದೆ ಬಂದಾಗ, ಮತ್ತೆ ಅದೇ ಸಂದೇಹ:

'ಅಮ್ಮ ಸತ್ತದ್ದು ಆಕಸ್ಮಿಕವೆ, ಆತ್ಮಹತ್ಯೆಯೆ?' ●

(ಮುಗಿಯಿತು)



ಕಸ್ತೂರಿ

# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

**ಸಪ್ಟಂಬರ್ 1989ರಿಂದ ಫೆಬ್ರುವರಿ 1990ರವರೆಗೆ**

**ಕ್ರಮ: ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ**

**ಸ. - ಸಪ್ಟಂಬರ್, ಅ. - ಅಕ್ಟೋಬರ್, ನ. - ನವೆಂಬರ್, ಡಿ. - ಡಿಸೆಂಬರ್, ಜ. - ಜನೆವರಿ, ಫೆ. - ಫೆಬ್ರುವರಿ**

---

### ಅನುಭವ



### ಆರೋಗ್ಯ - ವೈದ್ಯಕೀಯ



### ಇತಿಹಾಸ

**ಇದುವೆ ಜೀವ ಇದು ಜೀವನ**



**ಕಥೆ**



**ಕವನ-ಉವಾಚ-ಚುಟುಕ**



**ಚರ್ಚೆ-ಚಿಂತನ**



**ಜೀವನ ಚರಿತ್ರೆ-ವ್ಯಕ್ತಿ ಚಿತ್ರ**

## ಜೀವನ ದರ್ಶನ



## ದೇಶ - ನಗರ



## ನಿಮ್ಮ ಶಬ್ದ ಭಾಂಡಾರ ಬೆಳೆಯಲಿ



## ನೀತಿ ಕಥೆ



## ಪದಾರ್ಥ ಚಿಂತಾಮಣಿ



## ಪುಸ್ತಕ ವಿಭಾಗ



## ಪ್ರಾಣಿ ಜೀವನ



## ರಹಸ್ಯ-ಸಾಹಸ-ಸೋಜಿಗ

**ವಿಜ್ಞಾನ**



**ಸಾಮಾನ್ಯ**



**ಹರಟೆ - ನಗೆ ಬರಹ**






*Printed and Published by V.G.VAIDYA on behalf of Loka Shikshana Trust at "Samyukta Karnataka Press", Koppikar Road Hubli-580020. Phone:64303 - No. 2 Residency Road, Bangalore - 560025, Phone:213265 Managing Editor: K.SHAMA RAO, Representatives: Bombay - V.Satyamurthy, Phone: 5510592, Madras: S.K.Murthi, Phone: 414870, New Delhi: V.K.Chopra, Phone: 7114785*

*Registered with the Registrar of Newspapers for India under No. 35/3957.*

# ಪಂಪು ನಡೆದರೆ ಬೆಳೆ ಸೊಂಪು, ಪಂಪು ನಿಂತರೆ ಕಷ್ಟ ಬಂತು



ರೈತನ ಜೀವ ಅವನ ಬೆಳೆ. ಬೆಳೆಯ ಜೀವ ನೀರು. ಬೆಳೆಗೆ ಸಕಾಲದಲ್ಲಿ ನೀರು ದೊರೆಯದಿದ್ದರೆ ಒಳ್ಳೆಯ ಬೀಜ, ಒಳ್ಳೆಯ ಗೊಬ್ಬರ ಹಾಗೂ ಸೊಂಟ ಮುರಿಯುವಂತಹ ದುಡಿಮೆ ಎಲ್ಲವೂ ವ್ಯರ್ಥವಾಗುತ್ತವೆ.

ಬೆಳೆಯುತ್ತಿರುವ ಪೈರಿಗೆ ನೀರಿನ ಆವಶ್ಯಕತೆ ಇರುವಾಗ, ಬಾವಿಯಲ್ಲಿ ನೀರು ಕೂಡ ಇರುವಾಗ ಪಂಪು ಸುಟ್ಟು ಹೋದರೆ, ಮುರಿದುಹೋದರೆ, ಹಾಳಾದರೆ ಇಲ್ಲವೆ ಕದ್ದುಹೋದರೆ—ರೈತನ ಬಾಳು ಗೋಳು.

ಇಂತಹ ಸಂಕಟಕಾಲದಲ್ಲಿ ರೈತನಿಗೆ ಆಧಾರ ನೀಡುವುದಕ್ಕಾಗಿಯೇ ಇದೆ **ನ್ಯೂ ಇಂಡಿಯಾದ ಕೃಷಿ ಪಂಪ್‌ಸೆಟ್ ವಿಮೆ.** ಪಂಪ್‌ಸೆಟ್‌ನ ವಿಮಾ ಯೋಜನೆಯಲ್ಲಿ ಸಬ್‌ಮರ್ಸಿಬಲ್ ಪಂಪ್‌ಸೆಟ್ ಸಹಿತ ಎಲ್ಲಾ ತರದ ಪಂಪ್‌ಸೆಟ್‌ಗಳ ವಿಮೆ ಮಾಡಲಾಗುತ್ತದೆ.

**ಕೃಷಿ ಪಂಪ್‌ಸೆಟ್ ವಿಮೆಯ ದರ**
ಮೋಟರಿನ ಹಾರ್ಸ್ ಪವರ್ ಪ್ರಕಾರ ವರ್ಷಕ್ಕೆ ಕಡಿಮೆ ಎಂದರೆ 50 ರೂಪಾಯಿ.

ನ್ಯೂ ಇಂಡಿಯಾದ 1000ಕ್ಕಿಂತಲೂ ಹೆಚ್ಚು ಆಫೀಸುಗಳು ದೇಶದಲ್ಲೆಲ್ಲ ಹರಡಿವೆ.

ಹೆಚ್ಚಿನ ವಿವರಗಳಿಗಾಗಿ ನಿಮ್ಮ ಸಮೀಪದ ಆಫೀಸಿಗೆ ಬನ್ನಿರಿ ಇಲ್ಲವೆ ಏಜಂಟರನ್ನು ಕಾಣಿರಿ. ನಿಮ್ಮ ಸೇವೆಗಾಗಿ ದೂರದೂರದ ಹಳ್ಳಿಗಳಲ್ಲಿಯೂ ನ್ಯೂ ಇಂಡಿಯಾದ ಗ್ರಾಮೀಣ ಪ್ರತಿನಿಧಿಗಳಿದ್ದಾರೆ.

**ಕೃಷಿ ಪಂಪ್‌ಸೆಟ್ ವಿಮೆಗಾಗಿ**

## ನ್ಯೂ ಇಂಡಿಯಾ ಎಶ್ಯುರೆನ್ಸ್




ಜನರಲ್ ಇನ್ಶುರೆನ್ಸ್ ಕಾರ್ಪೊರೇಶನ್ ಆಫ್ ಇಂಡಿಯಾದ ಸಹಾಯಕ ಸಂಸ್ಥೆ

**ಸಂಕಟಕಾಲದಲ್ಲಿ ನಿಮಗೆ ಆಧಾರ**




R K SWAMY/NIA/4294 KN-B

Kannada Digest
PRICE: Rs. 3-00

Licence No. L 2120/WPP No.33